ರಂಗಮಂಗ ರಂಜನೋದ್ಯಾನ

ಬಿಡಿಗೊಂಚಲು

ಕನ್ನಡ ಸಾಹಿತಿ

೧

# ಶ್ರೀರಂಗ

ಬರೆದವ

ನೆರಂಗ



೧೯೪೧



ಈ ಗ್ರಂಥದ ಲೇಖಕರು ನನ್ನ ಪರಿಚಿತರೇ. ಅವರು ಈಗಾಗಲೇ ಕೆಲವೊಂದು ಕನ್ನಡ ಗ್ರಂಥಗಳನ್ನು ಬರೆದವರು. ಕನ್ನಡದ ಒಬ್ಬ ಅಭ್ಯಾಸಕರು. ತಮ್ಮ ಗುರುಗಳಾದ ಶ್ರೀ ಆರ್. ವಿ. ಜಹಗೀರದಾರರವರ ವಿಚಾರವಾಗಿ ಅವರು ಈ ಜೀವನವೃತ್ತ ಬರೆಯುವುದರಲ್ಲಿ ಒಂದು ಔಚಿತ್ಯವಿದೆ. ಜೀವನವೃತ್ತಗಳು ನಮ್ಮ ಸಾಹಿತ್ಯದಲ್ಲಿ ಇನ್ನೂ ಹುಟ್ಟುತ್ತಲಿವೆಯಷ್ಟೆ! ಅವು ಸಾಹಿತ್ಯದ ಒಂದು ಮುಖ್ಯ ಅಂಗವೆಂಬುದನ್ನು ಹೇಳಬೇಕಾಗಿಲ್ಲ. ಇಂಥ ಸಾಹಿತ್ಯ ಎರಡು ರೀತಿಯಿಂದ ಬರಲು ಶಕ್ಯವಿದೆ. ಒಂದು, ವ್ಯಕ್ತಿಯು ತನ್ನ ಆತ್ಮವೃತ್ತವನ್ನು ಬರೆಯುವುದು. ಇನ್ನೊಂದು, ವಿಮರ್ಶಕರು, ಅಭಿಮಾನಿಗಳು, ಇತಿಹಾಸದ ಅಭ್ಯಾಸಕರು—ತಮ್ಮ ವಿಮರ್ಶೆ ಇಲ್ಲವೆ ಅಭಿಮಾನಕ್ಕೆ ಗುರಿಯಾದ ವ್ಯಕ್ತಿಯನ್ನು ಕುರಿತು ಬರೆಯುವುದು. ಮೊದಲಿನ ಬಗೆಯ ಸಾಹಿತ್ಯ ನಮ್ಮ ದೇಶದಲ್ಲಿ ತೀರ ತೀರ ಕಡಮೆ. ಶ್ರೀ ಮಹಾತ್ಮಾ ಗಾಂಧೀಜಿಯವರೂ, ಶ್ರೀ ಜವಾಹಿರಲಾಲ ನೆಹರೂರವರೂ—ಅವುಗಳ ಮಾದರಿಯನ್ನು ಹಾಕಿಕೊಟ್ಟಿದ್ದಾರೆ. ತಮ್ಮ ತಮ್ಮ ಜೀವನವಾರ್ತೆಯನ್ನು, ಅದರ ಏಳು ಬೀಳುಗಳನ್ನು, ಅದರ ಸೊಬಗು ಹೀನತೆಗಳನ್ನು, ತಾವೇ ಚಿಕಿತ್ಸಕ ದೃಷ್ಟಿಯಿಂದ ನೋಡಿ ಬರೆಯುವ ಶಕ್ತಿ—ಎಷ್ಟು ಜನರಿಗೆ ಬಂದೀತು? ಅಂಥ ಬರವಣಿಗೆಗಳು ಆತ್ಮ ಪ್ರಶಂಸೆಯಿಂದ ಪ್ರೇರಿತವಾಗಿರದೆ, ಬರಿಯ ವಿಮರ್ಶಕ ಬುದ್ಧಿಯಿಂದ ಹೊರಟಿದ್ದರೆ, ಒಬ್ಬ ವ್ಯಕ್ತಿಯ ಅಳತೆ, ಆಳ, ಹಿರಿಮೆ—ಇವುಗಳ ಪರಿಜ್ಞಾನವನ್ನು ಕಲ್ಪಿಸಲು ಉತ್ತಮ ಸಾಧನವಾಗುವುವು. ಮೇಲೆ ಹೇಳಿದ ಎರಡೂ ಆತ್ಮವೃತ್ತಗಳು, ವಿಷಯ ಮತ್ತು ಭಾಷಾ ದೃಷ್ಟಿಯೆರಡರಿಂದಲೂ ಮೇಲ್ತರಗತಿಯವುಗಳಾಗಿವೆ.

ಕನ್ನಡದಲ್ಲಿ ಮಾತ್ರ ಶ್ರೀ ರಾಜರತ್ನಂ ಇವರ 'ಹತ್ತು ವರುಷಗಳು' ಇದೊಂದನ್ನು ಬಿಟ್ಟರೆ ಈ ಮಾದರಿಯ ಸಾಹಿತ್ಯ ಬಂದಿಲ್ಲ.

ಎರಡನೆಯ ವ್ಯಕ್ತಿಯು ಬರೆಯುವ ಜೀವನವೃತ್ತದ ಬಗೆಗೆ ನಮ್ಮ ಹಿರಿಯ ಸಾಹಿತಿಗಳಾದ ಶ್ರೀ ಗುಂಡಪ್ಪನವರು ಕನ್ನಡದಲ್ಲಿ ಹಾದಿ ಹಾಕಿ ಕೊಟ್ಟಿದ್ದಾರೆ. ಅವರ ಗೋಖಲೆಯವರ ಜೀವನವೃತ್ತವು ಒಂದು ಆದರ್ಶ ಬರಹವಾಗಿದೆ. ಆದರೆ, ಬದುಕಿರುವ-ಕಣ್ಮುಂದಿರುವ, ವ್ಯಕ್ತಿಗಳ ವಿಷಯವಾದ ಬರವಣಿಗೆ ನಮ್ಮಲ್ಲಿ ಇನ್ನೂ ಉಂಟಾಗಿಲ್ಲ. ಅಂಥ ಬರಹ ಬರಬಾರದೇಕೆ? ಆವು ನಮ್ಮ ಸಾಹಿತ್ಯ ಜೀವನಕ್ಕೆ ಬೇಕೇಬೇಕು.

ಹೀಗೆಂದರೆ ಒಂದು ತೊಡಕೂ ಇದೆ. ಜೀವನವೃತ್ತ ಬರೆಯುವಷು 'ದೊಡ್ಡ ವ್ಯಕ್ತಿಯಾರಿದ್ದಾರೆ ನಮ್ಮಲ್ಲಿ'—ಎಂಬ ಪ್ರಶ್ನೆ ಹೊರಟೀತು. ಒಂದು ಜೀವನ ವೃತ್ತಕ್ಕೆ ಕೇಂದ್ರವ್ಯಕ್ತಿಯು ಅಶೋಕ, ಪುಲಕೇಶಿ, ಬುದ್ಧರಂಥವರೇ ಆಗಬೇಕೆಂಬ ನಿರ್ಬಂಧವೇನು? ಸಹಜ ಬಾಳ್ವೆಯೊಂದರ ಚಿತ್ರವು ಅದಕ್ಕೆ ತಕ್ಕುದಲ್ಲವೇ? ಅಲ್ಲದೆ ನೆಗಳೂರರವರು ಇಂದು ಆರಿಸಿರುವ ವ್ಯಕ್ತಿಯು ನಮ್ಮ ನಾಡಿನ ಹೆಸರಾದ ವ್ಯಕ್ತಿಗಳಲ್ಲಿ ಒಬ್ಬರು, ಎಂದು ಧೈರ್ಯವಾಗಿ ಹೇಳಬಹುದು. ತಮ್ಮ ಕ್ಷೇತ್ರದಲ್ಲಿ ಅವರು ಸಾಹಸಿಗರು, ಕಲಿಗಳು. ಶ್ರೀ ಜಹಗೀರದಾರರ ಪರಿಚಯ ನನಗೆ ಆರೆಂಟು ವರ್ಷಗಳಿಂದಲಾದರೂ ಇದೆ. ಈ ನಿಕಟ ಪರಿಚಯದಿಂದ, ಅವರು ನಮ್ಮ ನಾಡಿಗೆ ಸಲಿಸಿದ ಬದುಕು ಸ್ವಲ್ಪವಲ್ಲ, ಎನ್ನಬಲ್ಲೆ. ಸಾಹಿತಿಗಳಾಗಿ ಅವರು ನಾಟಕ, ಸರಸಲೇಖನಗಳನ್ನು ಮಿತಿ ಇಲ್ಲದಷ್ಟು ಒದಗಿಸಿದ್ದಾರೆ. ಅವುಗಳನ್ನು, ಅವರ ಮಾತು-ಭಾಷಣಗಳನ್ನು ಒಡೆದು ನೋಡಬಲ್ಲವರಿಗೆ—ಜಹಗೀರದಾರರ ತೀಕ್ಷ್ಣ ನೋಟದ ಹರಿತ ತಿಳಿದೀತು. ಎಲ್ಲಿ ಜಡತೆ, ಅಂಧಶ್ರದ್ಧೆ, ವಿಚಾರದ ಹೊರೆಗಳು ತುಂಬಿರುವುವೋ ಅವನ್ನು ಚುಚ್ಚಿ, ತಿವಿದು, ಒಡೆಯಲು ಯತ್ನಿಸುತ್ತಿರುವರು ಅವರು. ಜನಜೀವನವನ್ನು ಸಾಹಿತಿಯಾದವನು, ಯಾವ ರೀತಿಯಿಂದ ಚೇತರಿಸಬಹುದೊ ವಿಚಾರಕ್ಕೆ ತಳ್ಳಬಹುದೊ ಅವನ್ನು ಅವರು ಮಾಡಿದ್ದಾರೆ. ಅವರ ಲಘುಹಾಸ್ಯದ, ಅಣಕದ, ವಿಮರ್ಶೆಯ ಬಗೆಗಳು-ಕನ್ನಡ ರಾಜ್ಯದಲ್ಲಿ ಅವರಿಗೊಂದು ಮನ್ನಣೆಯ ಸ್ಥಾನವನ್ನೇ ಗಳಿಸಿಕೊಟ್ಟಿವೆ. ಹೀಗಿರಲು—ನೆಗಳೂರು ರಂಗರವರ ಆಯ್ಕೆ ತಕ್ಕುದೇ ಆಗಿದೆ.

ಜೀವನವೃತ್ತ ಬರೆಯುವುದಕ್ಕೆ ಯೋಗ್ಯ ವ್ಯಕ್ತಿ ದೊರೆತರೆ ಸಾಕೆ?-ಅದು ಸಾಲದು. ಬರೆಯುವವನಿಗೆ ಯೋಗ್ಯತೆ ಬೇಕು. ವ್ಯಕ್ತಿ ಪರಿಚಯವು

ತುಂಬ ಬೇಕು. ಒತ್ತಟ್ಟು ಸೌಹಾರ್ದದೃಷ್ಟಿಯೂ ಇನ್ನೊತ್ತಟ್ಟು ವಿಮರ್ಶಕ ದೃಷ್ಟಿಯೂ ಬೇಕು. ಈ ಸಂಪತ್ತುಗಳು ನೆಗಳೂರು ರಂಗರಿಗಿವೆ. ಶ್ರೀರಂಗರ ಒಳಹೊಕ್ಕು ತಿಳಿಯುವಷ್ಟು ಅವಕಾಶವು, ಪರಿಚಯವು ಅವರಿಗೆ ಉಂಟಾಗಿದೆ. ಪಾಶ್ಚಾತ್ಯ ಸಾಹಿತ್ಯ ಪರಿಚಯದಿಂದ ಉಳಿದ ಲಕ್ಷಣಗಳು ಅವರ ಕೈಗೂಡಿವೆ. ಹೀಗೆ ಸಜ್ಜಿತರಾದ ನೆಗಳೂರರವರು ತಮ್ಮ ಜೀವನ ವೃತ್ತದ ಕೆಲಸವನ್ನು ಸಾಂಗವಾಗಿ ನೆರವೇರಿಸದೆ ಏನು ?

ಅವರ ಕೃತಿಯೊಂದಿಗೆ, ಗೆಳೆಯರಾದ ಶ್ರೀ ಜಹಗೀರದಾರವರಿಗೆ ನನ್ನ ಮನ್ನಣೆಯನ್ನು ಸಲ್ಲಿಸಿದಂತಾಗುವ ಈ ಅವಕಾಶದಲ್ಲಿ ನಾನು ಈ ನಾಲ್ಕು ಮಾತುಗಳನ್ನು ಬರೆಯಲು ಆನಂದಪಡುತ್ತೇನೆ.

ಪ್ರಣಾಮ.

**ಶಿವರಾಮ ಕಾರಂತ**



ಈಗಾರು ತಿಂಗಳ ಹಿಂದೆ ' ಶ್ರೀರಂಗ ' ಜೀವನವು ಪ್ರಸಿದ್ಧವಾಗಲಿದೆ ಯೆಂದು ಪ್ರಕಟಿಸಿದ ಕೂಡಲೆ ಮೂಗು ಮುರಿದವರನೇಕರು. ' ಏನು ದೊಡ್ಡ ಮನುಷ್ಯ ? ಅಂತ ಅವನ ಜೀವನ ಚರಿತ್ರೆ ಬರೆಯಲು ತೊಡಗಿರುವ ' ಎಂದುಸುರಿದರು. 'ಬರವಣಿಗೆಯ ಶಕ್ತಿಯಿದ್ದುದನ್ನು ಸಾರ್ಥಕಗೊಳಿಸಲು ಬೇಕಿದ್ದರೆ ಯಾವನೊಬ್ಬ ' ಮಹಾಪುರುಷ ' ನ ಜೀವನ ಚಿತ್ರವನ್ನು ಚಿತ್ರಿಸಿ ಧನ್ಯನಾಗು' ಎಂದು ಉಪದೇಶದ ಸಾಹಸವನ್ನೂ ಮಾಡಿದರು ಕೆಲರು. ಸರಿ, ಹಾಗನ್ನುವವರ ಬಗೆಗೆ ನನ್ನ ಆಕ್ಷೇಪವಿಲ್ಲ. ತಮ್ಮ ತಮ್ಮ ಮತಾನು ವರ್ತಿಯಾಗಿ ಮಾತುಗಳನ್ನಾಡುವರು; ಆಡಲಿ. ನನ್ನ ದಾರಿ ನನಗೆ, ಎಂದು ಮುಂದೆ ಸಾಗಿದ್ದೇನೆ. ದಾರಿ ಸಾಗುವಾಗ, ಹಾ ! ಎಂದು ಹೆದರಿಸುವವರೂ 'ನಡೆ, ಸಾಗು' ಎಂದು ಹುರಿದುಂಬಿಸುವವರೂ ಇರುವರು. ಕಾರ್ಯ ಮಾಡುವವನಿಗೆ ಇವೆರಡೂ ಅಷ್ಟೆ ಬೆಲೆಯುಳ್ಳವೆನಿಸುವುವು. ಮುಂದೆ ನುಗ್ಗುವ ದುಡುಕು ಇದ್ದವನು ಹೆದರಿಕೆಗಿಂತ ಹುರುಪನ್ನೆ ಆಯ್ದುಕೊಳ್ಳುವನು. ' ಏನರಿ ! ಶ್ರೀರಂಗರ ಜೀವನಚರಿತೆಯನ್ನು ಬರೆಯುವಿರಾ ! ಒಳ್ಳೆಯ ಉಪ ಕ್ರಮವನ್ನು ಮಾಡತೊಡಗಿದ್ದೀರಿ. ಅಂತಹ ಸಾಹಿತ್ಯ ನಮ್ಮಲ್ಲಿಲ್ಲ' ಎಂದು ಬೆನ್ನು ತಟ್ಟಿದ ಮಹನೀಯರೂ ಇದ್ದಾರೆ.

ನನ್ನದೊಂದು ವಿಚಾರ : ಸಾಮಾನ್ಯನಿಗೆ ಮಹಾಪುರುಷನ ಜೀವನ ಚರಿತೆಯಿಂದೇನು ಫಲ ಎಂದು. ಅಲ್ಲ ! ಈ ಮಹಾಪುರುಷರೂ ಮೊದಲು ಸಾಮಾನ್ಯ ಮಾನವರಾಗಿಯೆ ಜೀವಿಸಿರಲಿಲ್ಲವೆ ? ಜೀವನದಲ್ಲಿಯ ಅನೇಕ ಸಂನಿವೇಶಗಳು ಒದಗಿಬಂದು ಅವುಗಳನ್ನು ಧೈರ್ಯ–ಸಾಹಸ–ಶಕ್ತಿ–ಯುಕ್ತಿಗಳಿಂದ ನಿವಾರಿಸಿ ತಮ್ಮ ಮೇಲ್ಮೆಯನ್ನು ಮಾಡಿಕೊಂಡವರು ಮುಂದೆ ಮಹಾಪುರುಷರ ಸಾಲಿನಲ್ಲಿ ಬರುವರು. ಯಾರೂ ಹುಟ್ಟಿನಿಂದಲೆ ಮಹಾ ಪುರುಷರೆಂದು ಇಲ್ಲ. ನದಿಯು ಉಗಮದಲ್ಲಿ ಯಾವಾಗಲೂ ಚಿಕ್ಕದೆ.

ನದಿ ದೊಡ್ಡದಾದ ಮೇಲೆ ಅದು ಒಂದು ಕಾಲಕ್ಕೆ ಚಿಕ್ಕದಿತ್ತೆಂಬ ಮಾತನ್ನು ಮರೆತು ಅದರ ಘನವಾದ ರೂಪವನ್ನೆ ನೆನೆಯುವುದು ರೂಢಿಯಾಗಿದೆ. ನನ್ನ ದೃಷ್ಟಿಯಿಂದ, ಸಾಧಿಸಿದ ಸ್ಥಿತಿಗಿಂತ ಸಾಧನದಲ್ಲಿದ್ದ ಗತಿಯೆ ಹೆಚ್ಚು ಮನ ಹಿಡಿಯುವಂತಹದು; ಸಾಧಕರಿಗೆ ಮಾರ್ಗದರ್ಶಿಯಾಗುವುದು.

ಯಾವುದೊಂದು ವ್ಯಕ್ತಿಯ ಸ್ಥಾನಮಾನವನ್ನು ಯಾವುದೊಂದು ಅಳತೆಗೋಲಿನಿಂದ ಅಳೆಯುವುದು ತಪ್ಪು. ಅವರವರ ಬುದ್ಧಿಪರಿಮಿತಿಯನ್ನು ಲಕ್ಷಿಸಿ ಅವರಿಗೆ ಎದುರು ಬಂದ ಎಡರುತೊಡರುಗಳ ನಿವಾರಣೆ ಆದ ರೀತಿಯನ್ನು ಅನುಲಕ್ಷಿಸಿದರೆ, ಆ ವ್ಯಕ್ತಿಯ ಸಾಹಸದ ಬಗೆಗೆ, ಶಕ್ತಿಯ ಬಗೆಗೆ ತಿಳಿವಳಿಕೆಯುಂಟಾಗುವುದು.

ವ್ಯಕ್ತಿಯನ್ನು ತಿಳಿಯಬೇಕೇಕೆ? ಸಮಾಜದಲ್ಲಿ ಅನೇಕ ಜನರು ಸೇರುವರು. ಸಮಾಜ ಜೀವನದಲ್ಲಿ ಸುಖ ಸಿಕ್ಕಬೇಕಾದರೆ ಆ ಸಮಾಜದ ಸದಸ್ಯರನ್ನು ತಿಳಿಯುವುದು ಹಿತಕರ. ಎಂತಲೆ, ಸಾಮಾಜಿಕ ಮಹತ್ವವನ್ನು ಪಡೆದ ಮಹನೀಯರನ್ನು ಯಥಾರ್ಥವಾಗಿ ತಿಳಿಯುವುದು ಒಳ್ಳೇದು. ಏನೊಂದು ವಿಚಾರವನ್ನು ತಲೆಯಲ್ಲಿ ತುಂಬಿಕೊಂಡು, ಆ ವಿಚಾರಗಳ ಪ್ರಭಾವಕ್ಕೆ ಸಿಲುಕಿ, ವ್ಯಕ್ತಿಯ ಬಗೆಯನ್ನು ಪರೀಕ್ಷಿಸಿದರೆ, ಅದು ಕಾಮಣಿಯಾದವನ ಕಣ್ಣಿಗೆ ಜಗತ್ತು ಕಂಡಂತೆಯೆ. ನಮ್ಮ ಬುದ್ಧಿಯನ್ನು ಶುದ್ಧವಾಗಿಟ್ಟುಕೊಂಡು, ಒಂದು ವ್ಯಕ್ತಿಯ ನಿಜವಾದ ಸ್ಥಿತಿ ಹೇಗಿದೆ? ಎಂಬುದನ್ನು ಅರಿಯಬೇಕು.

ನಮಗೆ ಕೇಡು ಬಗೆದವನು ಕೆಟ್ಟನೆಂದು ಮುದ್ರೆ ಹಾಕುವುದಕ್ಕಿಂತ, ಅವನು ಆ ರೀತಿಯ ಕೇಡುಮಾಡಲು ಕಾರಣವಾವುದು, ಎಂದು ವಿಚಾರಿಸುದಲ್ಲಿ ತಿಳಿವಳಿಕೆಯ ಮೂಲಕ, ಆ ಕೇಡು ಕೂಡ ಸರಿಯೆನಿಸುವ ಸುಯೋಗ ಬರುವದು. ಅಥವಾ ನಮಗೆಯೆ ಕೇಡು ಬಗೆದಿದ್ದರೆ, ನಮ್ಮಲ್ಲಿ ಅಂತಹದೇನಾದರೂ ವಿರೂಪವಿದೆಯೆ, ಎಂದು ವಿಚಾರಿಸಿದರೂ ಸರಿಯೆ.

ಇದಕ್ಕೆಲ್ಲ ಕಾರಣ ಈ ಜಗತ್ತಿನ ಅಪೂರ್ಣತೆ. ಯಾವುದೊಂದು ವಿಷಯ–ವಸ್ತು–ವ್ಯಕ್ತಿ–ಪರಿಪೂರ್ಣವಲ್ಲ. ಪರಿಪೂರ್ಣ ವಸ್ತುವು ಈ ಜಗತ್ತಿನಲ್ಲಿಯೆ ಇಲ್ಲ. ಈ ಜಗತ್ತಿನಲ್ಲಿದ್ದ:ವಸ್ತುವು, ಈ ಜಗತ್ತಿನಲ್ಲಿರಬೇಕೆಂಬ ವಸ್ತುವು

ಅಪೂರ್ಣವಿದ್ದು ಪೂರ್ಣತೆಯ ಕಡೆಗೆ ಸಾಗುತ್ತಿರುವುದು. ವ್ಯಕ್ತಿಯನ್ನು ತಿಳಿಯುವುದೆಂದರೆ ಆ ವ್ಯಕ್ತಿಯ ಅಪೂರ್ಣತೆಯನ್ನು ತಿಳಿಯುವುದು. ಅದನ್ನು ತಿಳಿದರೆ ಆ ವ್ಯಕ್ತಿಯ ಬಗೆಗೆ ವಿಚಾರ ವ್ಯತ್ಯಾಸವುಂಟಾಗುವುದಿಲ್ಲ. ಆ ವ್ಯಕ್ತಿಯ ಅಪೂರ್ಣತೆಯನ್ನು ತಿಳಿಯಲೆತ್ನಿಸದೆ, ಸ್ವತಃ ತಾವು ಪರಿಪೂರ್ಣರೆಂಬ ಮಬ್ಬಿನಲ್ಲಿ ಮುಸುಕಿಕೊಂಡವರಾಗಿದ್ದರೆ, ತಮ್ಮ ಬಗೆಗೂ ಅವಿಚಾರ ಕಂಡು ಬರುವುದು; ಉಳಿದ ವ್ಯಕ್ತಿ-ವಿಷಯಗಳ ಬಗೆಗೂ ತಪ್ಪು ವಿಚಾರ ಸುಳಿವುದು. ಹಾಗೆ ಮಾಡದೆ, ತನ್ನ ವೈಯ್ಯಕ್ತಿಕ ಪರಿಮಿತಿಯನ್ನು ತಿಳಿದು ಹೆರವರ ಪರಿಮಿತಿಯನ್ನರಿತು ಅವರ ಸಂಗಡ ಸುಗಮವಾಗಿ ಹೇಗೆ ಸಾಗಲು ಸಾಧ್ಯ ವೆಂದು ಪರಿಶೀಲಿಸಲು ಹೆಣಗುವುದು ಸರಿಯಾದ ಸಾಮಾಜಿಕನ ಧರ್ಮ ವೆಂದೆಣಿಸುವುದು.

ಇದುವೆ ಜೀವನ ಚರಿತೆಯು ಮಾಡುವ ಮುಖ್ಯ ಕಾರ್ಯ. ಈ ಜಗತ್ತಿಗೆ ಬಂದ ಮಾನವರೆಲ್ಲರೂ ಸುಖವಾಗಿ ಬಾಳಬೇಕೆಂದು ಅಸೆಯುಳ್ಳವರಿರುತ್ತಾರೆ. ಹಾಗೆ ಸುಖವನ್ನು ಪಡೆಯಲು, ಆವರಿಸಿಬರುವ ಸನ್ನಿವೇಶಗಳನ್ನು ಜಾಣ ತನದಿಂದ ನಿವಾರಿಸಬೇಕಾಗುವುದು. ಸಾಮಾನ್ಯ ಮಾನವನ ಬುದ್ಧಿಯು ಸಾಮಾನ್ಯವಾಗಿಯೆ ಇರುವುದರಿಂದ ಹೊಸ ಸನ್ನಿವೇಶಗಳನ್ನು ಶಾಂತವಾಗಿ ಎದುರಿಸಿ, ಪಾರಾಗುವ ಹಿಡಿತ ಅವನಲ್ಲಿರುವುದಿಲ್ಲ. ಎಂತಲೆ ಮಹನೀಯರ ಚರಿತೆಯನ್ನು ಓದಿ, ಅವರ ಜೀವನದಲ್ಲಿಯ ಆಗು ಹೋಗುಗಳನ್ನು, ಎಡರು ತೊಡರುಗಳನ್ನು ತಿಳಿದು, ಅವರು ಅವುಗಳಿಂದ ಪಾರಾದ ಬಗೆಯನ್ನು ತಿಳಿದು ಕೊಂಡು ತನ್ನ ಜೀವನವನ್ನು ಸುಗಮವಾಗಿ ಮಾಡಿಕೊಳ್ಳುವನು. ಗುರಿಯಿಲ್ಲದ ಜೀವನಕ್ಕೆ ಗುರಿಯನ್ನು ತಂದುಕೊಡುವುದು ಜೀವನ ಚರಿತೆ.

ಜೀವನವು ಒಂದು ಕಲಹ. ಜೀವನವು ಒಂದು ಸಾಹಸ. ಅದಕ್ಕೆ ಜೀವನ ಸಾಹಸಕ್ಕಾಗಿ ಸಾಹಸ ಜೀವಿಗಳ ಜೀವನ ಚರಿತೆಯನ್ನು ತಿಳಿದರೆ, ಜೀವನವು ಸಾಹಸವೆಂಬುದು ಗೊತ್ತಾಗುವುದು. ಜೀವಿಸುವುದೆಂದರೆ ಸಾಹಸ; ಸಾಹಸ ಮಾಡುವ ಪ್ರವೃತ್ತಿಯು ಜೀವಿಸಬೇಕೆನ್ನುವವರಿಗೆ ಮಾತ್ರ ಬರುವುದು. ಜೀವಿಸಬೇಕು, ಬಾಳಬೇಕು, ಬದುಕಬೇಕು ಎನ್ನುವವರು ಸಾಹಸಕ್ಕೆ ಸಿದ್ಧರಾಗಬೇಕು. ಜೀವನ ಚರಿತೆಗಳು ಸಿದ್ಧತೆಯ ಪ್ರಥಮ ಪಾಠಗಳನ್ನು ಒದವಿಸುವುವು. 'ಶ್ರೀರಂಗ' ಜೀವನವನ್ನು ಬರೆಯಲು ಪ್ರಯತ್ನಿಸಿದುದರ

ಕಾರಣವು ಇದೇ. ಜೀವಿಸಬೇಕೆಂಬುದು ಅವರ ಹಟ. ಮಾನವನು ಬಂದುದು ಬದುಕಲಿಕ್ಕೆ; ಸವಿಯಾಗಿ ಬದುಕಲಿಕ್ಕೆ. ಜೀವಿತದಿಂದ ಓಡಿಹೋಗುವುದು ಹೇಡಿತನ. ಎಡರುಗಳನ್ನು ಎದುರಿಸುವುದು ಗಂಡಸಿಗೆ ತಕ್ಕುದು. ಗಂಡಾಂತರ ಗಳನ್ನು ಗಡಿದಾಟಿಸುವುದು ಗಣ್ಯವಾದ ಕೆಲಸ' ಎಂಬುದು ಅವರ ಜೀವನ ದಿಂದ ವಿಶದವಾಗುವುದು. ಯಾರು ಏನು ಕಲಿಸಿದರೂ ಸಾಲದು; ಆದರೆ ಕಾರ್ಯಕ್ಕಾಗಿ ಬೇಕಾಗುವ ಹಟ, ಧೈರ್ಯಗಳನ್ನು ತಂದುಕೊಡುವವನು ನಿಜವಾಗಿಯೂ ಮಾರ್ಗದರ್ಶಕನು.

'ಜೀವನವು ಸಾಹಿತ್ಯಕ್ಕೆ ಕನ್ನಡಿ' ಎಂಬುದು ನನ್ನ ವಿಚಾರ. ಅದನ್ನು ಇಲ್ಲಿ ನೋಡಿದೆ. ಸಾಹಿತ್ಯವು ಹೊರಹೊಮ್ಮಲು ಜೀವನದಲ್ಲಿಯ ಅನೇಕ ಸಂಗತಿಗಳು ಪ್ರಚೋದಕವಾಗಿರುವುವು. ಯಾವನೊಬ್ಬ ವ್ಯಕ್ತಿಯ ಸಾಹಿತ್ಯ ವನ್ನು ಚೆನ್ನಾಗಿ ತಿಳಿಯಬೇಕಾದರೆ ಅದರ ಹಿನ್ನೆಲೆಯಾಗಿದ್ದ ಅವನ ಜೀವನ ವನ್ನು ತಿಳಿವುದು ಅವಶ್ಯ.

ಜೀವನಚರಿತೆ ಬರೆಯಲು ಎಲ್ಲ ಬಗೆಯ ಸೌಕರ್ಯಬೇಕು. ಅದರ ಲ್ಲಿಯೂ ಜೀವಂತ ಜೀವನ ಚರಿತ್ರೆಗೆ ಕೇಂದ್ರವ್ಯಕ್ತಿಯ ವಿಶ್ವಾಸವು ಬರಹ ಗಾರನಲ್ಲಿರಬೇಕು. ಜಾಗಿರದಾರರು ಆ ಬಗೆಯ ವಿಶ್ವಾಸವನ್ನು ತೋರಿದ್ದ ರಿಂದಲೆ ಈ ನನ್ನ ಬರೆಹವು ಸಾಧ್ಯವಾಯಿತು. ಈ ಬಗೆಯಾದ ಪತ್ರದ ಸಹಾಯವಿಲ್ಲದೆ ನಾನು ಅನೇಕ ವಿಷಯಗಳನ್ನು ಸಂಗ್ರಹಿಸದೆ ಹೋಗುತ್ತಿದ್ದೆ: 'ನನ್ನ ಮಿತ್ರರಾದ ಶ್ರೀಮಾನ್ ನೆಗಳೂರ ರಂಗನಾಥರು ನನ್ನದೊಂದು ವಿಮರ್ಶಾತ್ಮಕ ಜೀವನ ನಿರೂಪಣೆ ಬರೆವುದನ್ನು ಕೈಕೊಂಡಿದ್ದಾರೆ ಅವರ ಉತ್ಸಾಹಕ್ಕೆ ತಡೆ ಹಾಕುವುದು ಶಕ್ಯವಾಗದಂತಾಗಿ ನಾನು ನನ್ನ ಎಲ್ಲ ಕೃತಿಗಳನ್ನು (ವೈಯಕ್ತಿಕ–Private–ಎಂದವುಗಳನ್ನು ಕೂಡ) ಅವರಿಗೆ ಒಪ್ಪಿಸಿರುವೆ. ನನ್ನ ಅನೇಕ ಮಿತ್ರರಿಂದ, ಪರಿಚಯಸ್ಥರಿಂದ ಶಕ್ಯವಾದ ಮಟ್ಟಿಗೆ ನನ್ನ ವಿಷಯದ ಅನುಭವಗಳನ್ನೂ ಪತ್ರವ್ಯವಹಾರವನ್ನೂ ತೆಗೆದು ಕೊಂಡು ನಿರೂಪಣೆಯನ್ನು ಸಾಧ್ಯವಾದ ಮಟ್ಟಿಗೆ ಪೂರ್ತಿ ಮತ್ತು ಸಮಂಜಸ ಮಾಡಬೇಕೆಂದು ಅವರ ಹಂಬಲ ಇದೆ. ಶ್ರೀ ರಂಗನಾಥರು ಕೇವಲ ಕುಹಕ ಬುದ್ಧಿಯಿಂದ ಇಲ್ಲವೆ ಕುತೂಹಲದ ಕಿಡಿಗೇಡಿತನದಿಂದ ಪ್ರವೃತ್ತರಾಗಿಲ್ಲವೆಂದು ನನಗೆ ಪೂರ್ತಿಯಾದ ವಿಶ್ವಾಸವಿದೆ. ಅದೆ ರೀತಿಯಿಂದ ಎಲ್ಲರೂ ವಿಶ್ವಾಸ

ವನ್ನಿಟ್ಟು ನೆರವಾದರೆ ಆ ವಿಶ್ವಾಸದ ಭಂಗ ಎಂದಿಗೂ ಶಕ್ಯವಿಲ್ಲ. ಕೊಟ್ಟ ಸಂಗತಿಗಳಾಗಲಿ, ಲೇಖನಗಳಾಗಲಿ, ಪತ್ರಗಳಾಗಲಿ ಎಂದಿಗೂ ಯಾವ ಕಾರಣದಿಂದಲೂ ಶ್ರೀರಂಗನಾಥರನ್ನುಳಿದು ಇನ್ನೊಬ್ಬರಿಗೆ ಗೊತ್ತಾಗುವಂತಿಲ್ಲ. ಅವಶ್ಯವೆನಿಸಿದಲ್ಲಿ ಲಿಖಿತ ಸಲಕರಣೆಗಳನ್ನು ಸುರಕ್ಷಿತವಾಗಿ ಅವರು ಮುಟ್ಟಿ ಸುವರು ಎಂಬ ಭರವಸೆಯನ್ನು ಕೊಟ್ಟು, ಅವರಿಗೆ ಸಹಕಾರ ನೀಡಬೇಕೆಂದು ಇನ್ನೊಮ್ಮೆ ಬೇಡುವೆ. ಆರ್. ವ್ಹಿ. ಜಾಗಿರದಾರ.

ಈ ಪತ್ರದ ಸಹಾಯದಿಂದ ಅನೇಕ ಮಹನೀಯರನ್ನು ಕಂಡಿದ್ದೇನೆ. ಅನೇಕ ಸಂಗತಿಗಳನ್ನು ಅವರು ವಿಶ್ವಾಸವಿಟ್ಟು ನನಗೆ ಕೊಟ್ಟುದಕ್ಕೆ ನಾನು ಅವರಿಗೆ ಕೃತಜ್ಞನು. ಮುನ್ನುಡಿಯನ್ನು ಪ್ರೇಮದಿಂದ ದಯಪಾಲಿಸಿದುದಕ್ಕೆ ಶ್ರೀಕಾರಂತರಿಗೆ ನಾನು ಋಣಿಯೆಂದರೆ ಸಾಲದು ? ನನ್ನ ಮನಸ್ಸಿಗೆ ತಕ್ಕಂತೆ, ಚಿತ್ರಗಳನ್ನು ತೆಗೆದುಕೊಟ್ಟ ನನ್ನ ಗೆಳೆಯ ಕೋನೆರಿ ಧೀರಜನು, ಹೊಸ ಕಳೆಯನ್ನು ತುಂಬಬೇಕೆಂಬ ನನ್ನ ಹಂಬಲಕ್ಕೆ ಬೆಂಬಲಕೊಟ್ಟು ತುಂಬಾ ಯಶಸ್ವಿಯಾಗಿ ರೇಖಾಚಿತ್ರಗಳನ್ನು ತೆಗೆದುಕೊಟ್ಟ ಶ್ರೀ ವಿ. ಯ. ಜಠಾರರು ಅವರನ್ನು ಮನ್ನಿಸದೆ ಇರಲಾರೆ. ಪಡಿಯಚ್ಚಿನ ಕೀರ್ತಿ ಪೋತದಾರ ಶ್ರೀನಿವಾಸರದು. ಅಚ್ಚು ಕೂಡಿಸಿದುದರ ಶ್ರೇಯಸ್ಸು ವಿಜಯ ಮುದ್ರಾಲಯದ ಒಡೆಯರಾದ ಶ್ರೀ ಹೊಸಕೇರಿ ನಾರಾಯಣರದು. ಅಲ್ಲದೆ, ಬೇರೆ ಬೇರೆ ಬಗೆಯಿಂದ ನೆರವನ್ನಿತ್ತ ನನ್ನ ಗೆಳೆಯರಿಗೆ ನನ್ನ ವಂದನೆಗಳು ಮೀಸಲು.

ಇನ್ನೊಂದು ಮಾತು. ಕನ್ನಡನಾಡಿನಲ್ಲಿ ಓದುಗರ ಸಂಖ್ಯೆಯು ಕಡಮೆ. ನಮ್ಮಲ್ಲಿ ದುಡ್ಡು ಕೊಟ್ಟು, ಕೊಂಡು ಓದುವ ಚಟವಂತೂ ತೀರ ಕಡಿಮೆ. ದುಡ್ಡಿಲ್ಲದುದಕ್ಕೆ ಬಿಡುವರೆಂದಲ್ಲ. ಅನಾಯಾಸವಾಗಿ—ಪುಕ್ಕಟೆಸಿಗುವಾಗ ದುಡ್ಡನ್ನು ಏಕೆ ಕೊಡಬೇಕೆಂದೆನ್ನಿಸುವುದು. ಈ ಚಟವು ನಮ್ಮಲ್ಲಿಂದ ಹೋಗ ಬೇಕು. ಪ್ರತಿಯೊಬ್ಬರೂ ದುಡ್ಡುಕೊಟ್ಟು, ಕೊಂಡು ಓದಬೇಕೆಂದು ಪುಸ್ತಕದ ಬೆಲೆಯನ್ನು ಕಡಿಮೆ ಇಟ್ಟಿದೆ. ಗೆಳೆಯರು ಸಹಾಯ ಮಾಡಿದರೆ ಮುಂದಿನ ಪುಸ್ತಕವನ್ನು ಬೇಗನೆ ಒದವಿಸುವ ಪ್ರಯತ್ನವನ್ನು ಮಾಡಲು ಅನುಕೂಲ ವಾಗುವುದು. ಪ್ರಣಾಮ.

೧೬–೩–೧೯೪೧ **ನೆಗಳೂರು ರಂಗನಾಥ**

# ಒಪ್ಪಿಗೆ

' ನನ್ನ ಶ್ರೀರಂಗ ಎಂಬ ಚರಿತ್ರಗ್ರಂಥದಲ್ಲಿ ಪ್ರೊಫೆಸರ ಜಾಗಿರದಾರರು ಒಂದೆರಡು ಮಾತುಗಳನ್ನು ಬರೆದರೆ ಒಳಿತು ' ಎಂದು ಶ್ರೀ. ನೆಗಳೂರ ರಂಗನಾಥರು ಅಭಿಪ್ರಾಯ ವ್ಯಕ್ತಮಾಡಿದಾಗ ' ಪ್ರೊಫೆಸರ ಜಾಗಿರದಾರರು ' ಒಪ್ಪಿದರು. ಈ ಒಪ್ಪಿಗೆಗೆ ಒಂದು ಮಹತ್ತ್ವದ ಕಾರಣವಿದೆ. ಕಳೆದ ಹತ್ತು-ಹನ್ನೊಂದು ವರ್ಷಗಳಿಂದ ಸ್ವೈರವೃತ್ತಿಯ ಶ್ರೀರಂಗರಿಗೆ ಪ್ರೊಫೆಸರರೇ ಪಾಲಕರಾಗಿದ್ದಾರೆ. ಅಷ್ಟಕ್ಕೆ ಮಾತ್ರ ಶ್ರೀರಂಗರ ಅಂತರಂಗವನ್ನು ಪಂಡಿತರಾದ ಪ್ರೊಫೆಸರು ಅರಿತಿರುವರೆಂದು ಹೇಳಲಾಗದು. ಹೀಗಿರುವಾಗ ಸಾಹಸಿಗಳಾದ ಶ್ರೀ ನೆಗಳೂರ ರಂಗನಾಥರು ಶ್ರೀರಂಗರ ಅಂತರಂಗವನ್ನು ಬಯಲಿಗೆ ಎಳೆಯುವುದಗತ್ಯವಾಗಿದೆ, ತಮಗೂ ಆ ಕೆಲಸವನ್ನು ಕೈಕೊಳ್ಳಲು ಆಶೆ-ಉತ್ಸಾಹಗಳಿವೆ ಎಂದರು. ಪ್ರೊ. ಜಾಗಿರದಾರರು. ' ಅರ್ಥೋ಼ ಹಿ ಕನ್ಯಾ ಪರಕೀಯ ಏವ' ಎಂಬ ಕಣ್ವಭಾವನೆಯಿಂದ ಶ್ರೀರಂಗರನ್ನೂ ಅವರಿಗೆ ಸಂಬಂಧಿಸಿದ ಸಂಗತಿಗಳನ್ನೂ ಕಾಗದಪತ್ರಗಳನ್ನೂ ಶ್ರೀ. ನೆಗಳೂರರವರ ಸ್ವಾಧೀನಪಡಿಸಿದರು. ಅದನ್ನು ವಾಚಕರಿಗೆ ತಿಳುಹಿಸಬೇಕೆಂದೇ ಈ 'ಒಪ್ಪಿಗೆ'ಯನ್ನು ಬರೆಯಲಾಗಿದೆ.

ಇನ್ನೊಂದು ಮಾತು. ನಡೆದ ಸಂಗತಿ, ವರ್ಷ-ತಿಥಿ-ತಾರೀಖು-ಇಂತಹ ಮಾತುಗಳಿಗಷ್ಟೆ ಪ್ರೊ. ಜಾಗಿರದಾರರು ಪೂರ್ತಿಯಾಗಿ ಹೊಣೆಗಾರರಾಗಿದ್ದಾರೆ. ಈ ಗ್ರಂಥದಲ್ಲಿ ಇರಬಹುದಾದ ಅಭಿಪ್ರಾಯಕ್ಕಾಗಲಿ ಚರಿತ್ರಚಿತ್ರಕ್ಕಾಗಲಿ ಅದನ್ನು ಹೊಂದಿಸಿ ಬರೆದ ಶ್ರೀ. ನೆಗಳೂರರೆ ಹೊಣೆಗಾರರು. ಪ್ರೊಫೆಸರ ಜಾಗಿರದಾರರಿಗೆ 'ಶ್ರೀರಂಗ' ಎಂಬುದು ಹೇಳಿಕೊಳ್ಳುವಂತಹ ವ್ಯಕ್ತಿ ಅಲ್ಲ, ಸ್ವತಃ ಶ್ರೀರಂಗರಿಗೆಯೆ ತಮ್ಮ ಗೊಡವೆ ತಮಗಿರಲಿಕ್ಕಿಲ್ಲ; ಹೀಗಿರುವಾಗ ಚರಿತ್ರೆ ಬರೆಯುವಂತಹ ಉದ್ಯೋಗವೇಕೆ - ಎಂದು ಸಂಶಯ ಬರಬಹುದು. ಆ ಸಂಶಯದ ಉತ್ತರಕ್ಕೂ ಶ್ರೀ, ನೆಗಳೂರರೆ ಹೊಣೆಗಾರರಾಗಿದ್ದಾರೆ. ಸಾಹಿತಿಗಳ ಸೋಗನ್ನು ಅರಿತುಕೊಳ್ಳಬೇಕೆಂಬ ಚಾಪಲ

ಅವರಿಗೆ; ಆ ಚಾಪಲಕ್ಕೆ ಸಮೀಪದ ಶ್ರೀರಂಗ ಮೊದಲ ಆಹುತಿಯಾಗಿದ್ದಾನೆ. ಆಹುತಿ ಎನ್ನುವುದರಲ್ಲಿ ಒಂದು ಉದ್ದೇಶವಿದೆ ಯಜ್ಞಪಶುವನ್ನು ಕಡಿದು ಅದರ ಅಂತರಂಗವನ್ನು ಅರಿವಂತೆ ಶ್ರೀರಂಗರ ರಹಸ್ಯಗಳನ್ನೆಲ್ಲ ಶ್ರೀ. ನೆಗಳೂರರು ಅರಿತುಕೊಂಡಿದ್ದಾರೆ. ಯಾವ ರಹಸ್ಯಗಳನ್ನು ಬಯಲಿಗೆಳೆದಿರುವರೆಂಬುದು ಗ್ರಂಥಕರ್ತರ ನಿರ್ಣಯಕ್ಕೆ ಸೇರಿದ ವಿಷಯವಾಗಿದೆ. ಒಮ್ಮೊಮ್ಮೆ ತಮ್ಮಲ್ಲಿ ವಿಶ್ವಾಸವನ್ನಿಟ್ಟ ಶ್ರೀರಂಗರ ರಹಸ್ಯಗಳನ್ನೆಲ್ಲ ಇನ್ನೊಬ್ಬರಿಗೆ ಒಪ್ಪಿಸಿದಕ್ಕಾಗಿ ಪ್ರೊಫೆಸರ ಜಾಗಿರದಾರರಿಗೆ ವ್ಯಥೆಯಾದರೂ ಯಜ್ಞಪಶುವಿಗೂ ಮೋಕ್ಷ ವಿದೆಯಂತೆ ಎಂಬ ಕಲ್ಪನೆಯಿಂದ ಪ್ರೊಫೆಸರರು ನಿಶ್ಚಿಂತರಾಗಿದ್ದಾರೆ. ಇಂತಹ ನೂರು ಯಜ್ಞಗಳನ್ನು ಮಾಡಿ ಶ್ರೀ ನೆಗಳೂರರು ಇಂದ್ರಪದವಿ ಯನ್ನು ಪಡೆದರೂ ಹೆಚ್ಚಿನ ಸಂತೋಷವೆ ಅಲ್ಲವೆ? ಕಾಳಿದಾಸನು ಹೇಳಿದ

ದುದೋಹ ಗಾಂ ಸ ಯಜ್ಞಾಯ ಸಸ್ಯಾಯ ಮಘವಾ ದಿವಂ
ಸಂಪದ್ವಿನಿಮಯೇನೋಭೌ ದಧತುರ್ಭುವನದ್ವಯಂ ||

ಎಂಬಂತೆ 'ಉಭಯತೋಪರಿ' ಕುಶಲ ಈ 'ಸಾಂಪ್ರತು'ವಿನಲ್ಲಿ. ಅಸ್ತು.

—ಜಾಗಿರದಾರ



# ಶ್ರೀರಂಗರ

ಹೆತ್ತ ತಾಯಿ — ಹೊತ್ತ ನಾಡು

ರಮಾಬಾಯಿ — ಕನ್ನಡ ತಾಯಿ

ಜೊತೆವೆತ್ತ

ಶ್ರೀಮತಿ ಶಾರದಾದೇವಿ

ಅವರಿಗಿದು ಮುಡಿಪು.

—ರಂಗನಾಥ

# ಸ್ಥಿತಿ-ಗತಿ





## ಪಡಿಯಚ್ಚುಗಳು

೧ ಆಚಾರಿ

೨ ಆರ್. ವ್ಹಿ. ಜಾಗಿರದಾರ

ಎಂ. ಎ. (ಲಂಡನ್)

೩ ನಿರುದ್ಯೋಗಿ

೪ ಮಾತುಗಾರ

೫ ಕುಟುಂಬ

೬ ಶ್ರೀರಂಗ

೭ ಶ್ರೀ–ರಂಗ–ಮಂಗರು.



ತನ್ನ ತರ್ಕದಿ ತೂಗಿ ಬುದ್ಧಿಯೊರಗಲ್ಲಿನಲಿ
ಚೆನ್ನಾಗಿ ಶಬ್ದಗಳ ತಿಕ್ಕಿ ಹೊಸ ಹೊಸ ಭಾವ
ಬಣ್ಣ ಹೊರಡಿಸಿ, ನಗೆಯ ಕಡಲಲ್ಲಿ ತೇಲಿಸುವ
ನಗೆಗಾರ ಶ್ರೀರಂಗರು.

—ದತ್ತಮೂರ್ತಿ

ಮೊದಲನೆಯ ಸ್ಥಿತಿ

# ಯಾವುದು ಸರಿ ?

ಯಾವುದು ಸರಿ ನೋಡೋಣ. ಒಂದು ವ್ಯಕ್ತಿಯು ಸಾಮಾಜಿಕ ಮಹತ್ವವನ್ನು ಪಡೆದರೆ ಆ ವ್ಯಕ್ತಿಯನ್ನು ಇಡಿ ಸಮಾಜವೆ ಪರೀಕ್ಷಿಸುವುದು. ಪ್ರತಿಯೊಬ್ಬರು ತಮ್ಮ ತಮ್ಮ ದೃಷ್ಟಿಕೋನಗಳಿಂದ ಆ ವ್ಯಕ್ತಿಯನ್ನು ತಿಳಿಯಲು ತೊಡಗುವರು. ಸಾಮಾನ್ಯವಾಗಿ ವ್ಯಕ್ತಿಯ ಸಂಬಂಧವು, ಸಮಾಜದಲ್ಲಿ ಬಹಿರಂಗದ ವ್ಯಾಪಾರಗಳಲ್ಲಿ ಮಾತ್ರ ಬರುವುದರಿಂದ, ಆ ವ್ಯಕ್ತಿಯ ನಿಜವಾದ ಅಂತರಂಗವು ಸಾಮಾಜಿಕರಿಗೆ ತಿಳಿಯದೆ ಹೋಗುವುದು. ಬಹಿರಂಗ ದರ್ಶನದಿಂದ ಅಂತರಂಗದ ಮಟ್ಟನ್ನು ನಿಷ್ಕರ್ಷಿಸುವುದು ಒಮ್ಮೊಮ್ಮೆ ತಪ್ಪಾಗುವದು. ಬಹಿರಂಗದ ವ್ಯಾಪಾರಗಳಿಗೆ ಅಂತರಂಗದ ಚುಕ್ಕಾಣಿಯಿರುವುದು ನಿಜ. ಆದರೆ, ಆ ಚುಕ್ಕಾಣಿ ಹಿಡಿದಿರುವವನು ಬೇರೆ; ಚುಕ್ಕಾಣಿಯನ್ನು ತಿಳಿಯುವವನು ಬೇರೆಯಾಗಿ ಚುಕ್ಕಾಣಿಯ ಮೂಲೋದ್ದೇಶವು ಬಹುಮಂದಿಗೆ ತಿಳಿಯದೆ ಹೋಗುವುದು. ಸಮಾಜದಲ್ಲಿ ಗೋಮುಖ ವ್ಯಾಘ್ರರೂ ಇರುವರು, ವ್ಯಾಘ್ರಮುಖ ಗೋವುಗಳೂ ಇವೆ. ಯಾರು ಯಾರೆಂಬುದನ್ನು ಸಮಾಜವು ನಿರ್ಣಯಿಸುವುದು. ಹಾಗೆ ನಿರ್ಣಯಿಸಲು ಸಹಾಯ ಮಾಡಲು ಆ ವ್ಯಕ್ತಿಯ ಅಂತರಂಗ ಬಹಿರಂಗಗಳು ಎರಡನ್ನೂ ನೋಡಬೇಕು. ಒಳಹೊರಗಿನ ಜೀವನಕ್ಕೆ ಸಾಮರಸ್ಯವಿದ್ದರೆ ಅದುವೆ

ಪ್ರಾಮಾಣಿಕ ಜೀವನ. ವೈಯಕ್ತಿಕ ಜೀವನಕ್ಕೂ ಸಾಮಾಜಿಕ ಜೀವನಕ್ಕೂ ಒಮ್ಮೊಮ್ಮೆ ಉದ್ದೇಶಪೂರ್ಣವ್ಯತ್ಯಾಸ ಕಲ್ಪಿಸಿಕೊಂಡಿರುವರು ಕೆಲವರು. ಅಲ್ಲಿ ಸಾಮಾಜಿಕ ಹಾನಿ ಇರದಿದ್ದರೆ ಏನೂ ಆತಂಕವಿಲ್ಲ. ಆದರೆ, ಒಳಹೊರಗಿನ ವ್ಯತ್ಯಾಸದಿಂದ ಸಾಮಾಜಿಕ ಹಾನಿಯಾಗುತ್ತಿದ್ದರೆ, ಅಂಥ ವ್ಯಕ್ತಿಯನ್ನು ಸಮಾಜವಂಚಕನೆಂದು ದೂರಬೇಕಾಗುತ್ತದೆ. ಅಂತರಂಗಕ್ಕೂ ಬಹಿರಂಗಕ್ಕೂ ಸಮನಾಗಿ ಧ್ಯೇಯಸಾಧಿಸುವುದು ಉತ್ತಮಪಕ್ಷ. ಅಂತರಂಗದಲ್ಲಿ, ಬಹಿರಂಗದಲ್ಲಿ ವ್ಯತ್ಯಾಸವಿದ್ದರೂ ಅದು ಕೇವಲ ವೈಯಕ್ತಿಕವಿದ್ದರೆ—ಸಮಾಜಹಾನಿಯಾಗದಿದ್ದರೆ— ಅದನ್ನು ತಡೆದುಕೊಳ್ಳಬಹುದು. ಆದರೆ ಕೊನೆಯದು, ಸಮಾಜಹಾನಿಯನ್ನುಂಟುಮಾಡುವ ವ್ಯತ್ಯಾಸವು; ಅದರಿಂದ ಆತ್ಮವಂಚನ-ಪರವಂಚನವಾಗುವದರಿಂದ ಸಮಾಜಗಳ್ಳರೆಂದು ಅಂತಹರನ್ನು ತೊಡೆದು ಹಾಕಬೇಕು. ಸಮಾಜವು ಅಂತಹರನ್ನು ನಂಜಿನಂತೆ ದೂರೀಕರಿಸುವುದು —ದೂರೀಕರಿಸಬೇಕು.

ಶ್ರೀರಂಗರ ಬಹಿರಂಗ ಜೀವನದಿಂದ, ಅನೇಕ ಜನರ ಸಂಬಂಧದಿಂದ ವಿವಿಧ ಅನುಭವ ಅಭಿಪ್ರಾಯಗಳು ಜನತೆಯಲ್ಲಿ ಒಡಮೂಡಿ ಈಗಾಗಲೆ ಪ್ರಚಲಿತವಾಗಿವೆ. ಯಾರು ಯಾರು ಯಾವ ಯಾವ ಸಂದರ್ಭದಲ್ಲಿ ವಿಶಿಷ್ಟ ಅಭಿಪ್ರಾಯವುಳ್ಳವರಾದರು ಎಂಬುದನ್ನು ನೋಡಬೇಕು. ಮಹಾ ಜನರು ಪಡುವ ಅಭಿಪ್ರಾಯವಂತೆ ಶ್ರೀರಂಗರು ನಿಜವಾಗಿಯೂ ಹಾಗೆ ಇರುವರೆ ? ಅಥವಾ ಅವು ನೋಡುವವರ ವಿಕೃತ ಮನಸ್ಸಿನ ಪ್ರತಿಬಿಂಬಗಳೆ ? ಅಭಿಪ್ರಾಯವು ನಿಜವಾದುದೊ ಪ್ರಾಸಂಗಿಕವಾದುದೊ ? ಬಹಿರಂಗ ವ್ಯಾಪಾರಕ್ಕೂ, ಅಂತರಂಗ ಜೀವನಕ್ಕೂ ಏನು ಸಂಬಂಧವಿದೆಯೆಂಬುದನ್ನು ನೋಡುವುದು ಒಳ್ಳೆಯದು.

ಅವರ ಬಗೆಗೆ ಪ್ರಚಲಿತವಿದ್ದ ಅನೇಕ ಅಭಿಪ್ರಾಯಗಳು ನನ್ನನ್ನು ಕುತೂಹಲಿಯಾಗಿ ಮಾಡಿದುವು. ":ಇದೇನು, ಇಷ್ಟು ಭಿನ್ನಾಭಿಪ್ರಾಯಗಳು" ಎಂದು ಮೊದಲು ಅಚ್ಚರಿಗೊಂಡೆ. ಕಾರಣಾಂತರದಿಂದ ಅವರ ಸಂಬಂಧವು ನನಗೆ ನಿಕಟವಾಗಿ ಬಂದು, ಎಚ್ಚರಪಟ್ಟು, ಜನತೆಯ ಅಭಿಪ್ರಾಯಗಳಿಗಾಗಿ ಇನ್ನಿಷ್ಟು ಅಚ್ಚರಿಗೊಂಡೆ. ನಿಜಸ್ಥಿತಿಯೇನಿದೆ, ನೋಡಿಯೆ ಬಿಡಬೇಕೆಂದು

ಅವರ ನಡೆನುಡಿ, ಆಚಾರವಿಚಾರಗಳನ್ನು ಅಭ್ಯಸಿಸತೊಡಗಿದೆ. ನನ್ನ ವಿಚಾರ, ಜನತೆಯ ವಿಚಾರದಿಂದ ತೀರ ಭಿನ್ನವಾಗಿ ಪರಿಣಮಿಸಿತು, ಅವರ ಜೀವನದ ಸನ್ನಿವೇಶಗಳ ಅರಿವಿನಿಂದ. 'ದೂರದಿಂದ ನೋಡುವವರಿಗೆ ದುರಾಲೋಚನೆಯ ಭ್ರಮೆ' ಆವರಿಸುವದೆಂಬುದರಲ್ಲಿ ಸಂದೇಹ ಉಳಿಯಲಿಲ್ಲ. ಅದಕ್ಕೆ ನಾನು ಅವರ ಜೀವನವನ್ನು—ಸಾಹಸ ಜೀವನವನ್ನು—ಜೀವನಸಾಹಸವನ್ನು ತಿಳಿದೆ. ಸಾಮಾಜಿಕ ಮಹತ್ವವನ್ನು ಶ್ರೀರಂಗರು ಪಡೆದಿರುವುದರಿಂದ ನನ್ನ ಅಭಿಮತದ ಉಪಯೋಗವು ಸಾಮಾಜಿಕರಿಗೆ ಆಗಬಹುದೆಂಬ ಆಲೋಚನೆಯೆ ನನ್ನನ್ನು ಈ ಸಾಹಸಕ್ಕೆ ಕೈಹಾಕಿಸಿತು. ಸಾಹಸ ಜೀವಿಯನ್ನು ತಿಳಿಯುವುದೂ ಒಂದು ಸಾಹಸವೆಂಬುದು ತಿಳಿದುಬಂತು.

ಅಂತೆಯೆ ಮೊದಲು ಜನತೆಯ ಬಹಿರಂಗಾಭಿಪ್ರಾಯಗಳನ್ನು ವಿವರಿಸಿ ಅವರ ಅಂತರಂಗವನ್ನು ಅರಳಿಸಿದರೆ ಭ್ರಮೆನಿರಸನವಾಗಬಹುದೆಂದು ನನ್ನ ಭಾವನೆ.

"ಮೊದಲು ಭೇಟಿಯಾದ ಕೂಡಲೆ ಅವನೊಬ್ಬ ಉಡಾಳನೆಂದೆ ನನ್ನ ಕಲ್ಪನೆಯಾಯಿತು" ಎಂದು ಉಸುರಿದರು ಒಬ್ಬರು. "ಏನು ಅವನ ರೂಪ! ಏನು ವೇಷ. ಸಾಕಷ್ಟು ಹೊಲಸಾದ ಒಂದು ಪಾಯಜಾಮಾ, ಅಂಗಿ, ಕೋಟು, ಬೊಕ್ಕ ತಲೆ, ಕೆದರಿದ ಕೂದಲು, ಇವನ್ನೆಲ್ಲ ನೋಡಿದೊಡನೆ ನನಗೆ ಒಂದು ಬಗೆಯ ಹೇಸಿಗೆಯುಂಟಾಯಿತು. ಮೊದಮೊದಲು ಅವನು ಆಡುವ ಮಾತು ಅರ್ಥವಿಲ್ಲದುವಾಗಿ, ಡಾಂಭಿಕನೆಂದು ಭಾವಿಸಿದೆ. ಮತ್ತು ಅವನ ಬಗೆಗೆ ವಿಚಾರಿಸುವುದು ಕೂಡ ವ್ಯರ್ಥ ಕಾಲಹರಣವೆಂದು ತಿಳಿದುಬಿಟ್ಟೆ. ಆದರೆ, ಇಷ್ಟು ಮಾತ್ರ ನಿಜ, ಅವನ ಕಣ್ಣುಗಳಲ್ಲಿಯ ವಿಲಕ್ಷಣ ಆಕರ್ಷಕ ಶಕ್ತಿ; ಮಾತಿನಲ್ಲಿಯ ವಿಲಕ್ಷಣ ರಭಸವಿದ್ದುದು ಒಮ್ಮೊಮ್ಮೆ ನನ್ನನ್ನು ಎಚ್ಚರಿಸುತಿದ್ದುವು. ಅದಕ್ಕಾಗಿ ನಾನು ಮನಸ್ಸು ಮಾಡದೆಯೂ ಅವನ ಬಗೆಗೆ ವಿಚಾರಿಸುತಿದ್ದೆ."

"ವಿಚಾರ ಹೆಚ್ಚಾದಂತೆ, ಸಂಬಂಧ ಬೆಳೆದಂತೆ, ಸಲುಗೆ ಬಂದಂತೆ, ನನ್ನ ಮೊದಲಿನ ವಿಚಿತ್ರ ಕಲ್ಪನೆಗಳು ಬದಲಾಗತೊಡಗಿದವು. ಕಂಡರೆ ಹೇಸುವವನು, ಕಾಣದಿದ್ದರೆ ಕಸಿವಿಸಿಪಡುವ ಸ್ಥಿತಿಗೆ ಬಂದೆ. ತಾತ್ವಿಕ ವಿಚಾರದಲ್ಲಿಯ

ಜಾಣ್ಮೆ, ಇಂದ್ರಿಯನಿಗ್ರಹಶಕ್ತಿ ಅವನಲ್ಲಿದ್ದಷ್ಟು ಬೇರೊಬ್ಬರಲ್ಲಿ ನಾನು ಕಂಡಿಲ್ಲ. ”

× × × × ×

“ನನ್ನ ಕಿಂತ ಅವರು ಬಹಳ ಸೀನಿಯರು, ಏನ್ರೆಪಾ! ನಮಗೆ ಅವರಿಗೆ ಸಂಬಂಧ ಬಂದದ್ದು ಈ ನಾಟಕದಿಂದ; ಅವರ ಸ್ವಭಾವ ಬಹಳ ವಿಲಕ್ಷಣ ನೋಡ್ರಿ, ಯಾಕ! ನಿಮ್ಮದೇನು ಅಭಿಪ್ರಾಯ? ನನಗಂತೂ ಹೀಂಗನಸ್ತದ. ನಾ ಹೇಳಿ ಬಿಡಾಂವಾ; ನನ್ನಲ್ಲಿ ಒಳಗೊಂದು ಹೊರಗೊಂದು ಹೀಂಗಿಲ್ಲ ನೋಡ್ರಿ. ಮನಸ್ಸಿಗೆ ಬಂತಿಲ್ಲೊ ಅಂದ ಬಿಡೋದು; ಅವರ ಸ್ವಭಾವನೂ ಹೀಂಗೆ. ಅದಕ್ಕೆ ನಮಗೆ ಅವರಿಗೆ, ಅಷ್ಟು ಸಲುಗೆ ಬೆಳೆದದ್ದು. ಒಂದು ಮಾತ್ರ ನನಗೆ ಯಾವಾಗಲೂ ಅನ್ನಿಸುತ್ತಿರುತ್ತದೆ, ಏನಂದರೆ ಇಷ್ಟು ಸಲುಗೆ ಇದ್ದರೂ ಒಮ್ಮೊಮ್ಮೆ ಅವರು ಹೊಸಬರಾಂಗ ಇರತಾರ, ಇದಕ್ಕೆಯೆ ನಾ ವಿಲಕ್ಷಣ ಅನ್ನೋದು. ಮೊದಲು ಮೊದಲು ನನಗೆ ಇದೆಲ್ಲ ಸೇರಿಕೆ ಬರತಿದ್ದಿಲ್ಲ. ತನ್ನಷ್ಟಕ್ಕ ತಾ ಇರತಾನ; ನಮ್ಮದೆಷ್ಟು ಕೆಲಸ ಅಷ್ಟುಮಾಡಿಕೊಂಡು ಬಂದರಾತು ಎಂದುಕೊಂಡು ಅವರ ಬಗ್ಗೆ ಹೆಚ್ಚು ನಾ ವಿಚಾರಮಾಡುತ್ತಿರಲಿಲ್ಲ ಯಾಕ ! ನೀವೆ ಹೇಳಿರಿ, ವಿಚಾರ ಮಾಡೇರ ಏನು ಮಾಡೋದು. ”

× × × × ×

“ಇಂಥಾ ಸೊಕ್ಕಿನ ಮನುಷ್ಯನ್ನ ನಾನು ನೋಡಿದ್ದಿಲ್ಲ” ಎಂದು ಆಕ್ರೋಶ ಮಾಡಿದರು ಒಬ್ಬರು. “ಅಲ್ಲರೀ! ಮನೆಗೆ ಬಾ ಅಂತಾ ಕರಿಸಿ, ನಮ್ಮನ್ನು ಎದುರಿಗೆ ಕೂಡಿಸಿ, ನಮ್ಮ ಎದುರಿಗೇನೆ, ಒಂದಲ್ಲ ಎರಡುಕಪ್ಪು—ಎರಡುಕಪ್ಪು ಚಹಾ ಇದ್ದರೂ “ನೀವು ತೊಗೋತಿರೇನು” ಅಂತ ಕೇಳದೆ ತಾವೊಬ್ಬರೆ ಕುಡಿಯಬೇಕೇನು ? ನಾವೇನು ಚಹಾ ಕಾಣದ ಇವನ ಮನಿಗೆ ಬಂದಿರ ತೇವೇನು? ನಮ್ಮ ಮನಿಗೆ ಬರಲಿ ಇವಾ ಎರಕೊಂಬೋ ಅಷ್ಟು ಕೊಡ ತೇವಿ ಚಹಾ. ಅದೇನಲ್ಲರೀ ಅದು! ತಾ ಶಾಹಣೆ ಅಂಬೊ ಸೊಕ್ಕು ಬಹಳ ಅವಗ; ತನ್ನ ದೊಡ್ಡಸ್ತಿಕೆಯೊಳಗೆ ಮಂದಿನ್ನ ಎಣಸೋಹಾಂಗ ಇಲ್ಲ. ಯಾರಾದರೂ ಮನಿಗೆ ಬಂದರೆ ‘ಬರ್ರಿ, ಕೂಡ್ರಿ’ ಅಂತ ಗೃಹಸ್ಥಾನಕೀ ರೀತಿಯಿಂದ ಆದರ ಮಾಡತಿರತಾರ. ಯಾರೇನು ಮನೀ ಕಾಣದ ಬಂದಿರುವದಿಲ್ಲ. ನನಗೇನು ಸರಿ ಬರಲಿಲ್ಲ, ನೋಡ್ರಿ. ಪ್ರೊಫೇಸರ್ ಆದರ ಕಾಲೇಜದಾಗ,

ನಮಗೇನು? ಇನ್ನೆರಡು ವರುಷಕ್ಕೆ ಭುಜಕ್ಕೆ ಭುಜಹತ್ತಿ ಕೂಡೋ ಪ್ರಸಂಗ ಬಂದರೂ ಬಂದೀತು."

× × × × ×

"ಏನು ವಿಚಿತ್ರ ಸ್ವಭಾವೋ ಏನೋರೆಪಾ!" ಎಂದೊಬ್ಬರು ದೂರಿದರು. "ಜನರು ಮನಿಗೆ ಬಂದಕೂಡಲೆ ಎದ್ದು ಒಳಗೆ ಹೋಗಿ ಬಿಡುವುದು. ಹೊರಗೆ ಕೂತವರು ಕೂತs ಕೂಡಬೇಕು. ಅವರೇನು ಹೊರಗೆ ಬರೊಹಾಂಗಿಲ್ಲ, ಏನು ಬೇಕು ಕೇಳೊಹಾಂಗಿಲ್ಲ. ಹೀಂಗ ಮಾಡತಾರ ಅಂತ ಕೇಳೇನಿ, ನಮಗೇನು ಸ್ವತಃ ಅನುಭವ ಇಲ್ಲ ಮತ್ತ; ಆದರೂ ಒಮ್ಮೊಮ್ಮೆ ಅನಸ್ತದ, ಇದು ನಿಜವೆ ಇದ್ದರೆ ನಾವು ಅವರ ಮನಿಗೆ ಯಾಕೆ ಹೋಗಬೇಕು. ಹೋಗಿ ಅಪಮಾನ ಮಾಡಿಸಿಕೊಂಬುವದರಕಿಂತ ಬಿಡುವುದೇ ಲೇಸೆಂದು ಬಿಟ್ಟುಬಿಟ್ಟೇವಿ. ಯಾವಾಗಾದರೂ ಕೆಲಸ ಇದ್ದರ ಹೋಗಿರತೀವಿ, ತಾಸೆರಡುತಾಸು ಹರಟಿ ಹೊಡೆದು ಬರತೀವಿ."

× × × × ×

"ಅಂಥ ಇಂಥವರಿಗೆ ಅವರ ಮನೆಯೊಳಗೆ ಪ್ರವೇಶವಿಲ್ಲವಂತೆ " ಎಂದು ಟೀಕಿಸಿದರು ಒಬ್ಬರು. " ನಿಮಗರ ಒಳಗ ಬಿಡತಾರೊ ಏನು ಹೊರಗಿಂದ ಹೊರಗೆಯೊ ? ಯಾಕೊ, ಆ ಮನುಷ್ಯನ ನೋಡಿದರೆ ಹೆಚ್ಚು ಮಾತಾಡ ಬೇಕೆಂದೆ ಅನಿಸುವದಿಲ್ಲ. ಬೇಕಾದಷ್ಟು ಜಾಣತನ ಅದೆ. ಮಾಡಿದರೆ ಯಾವುದು ಅಸಾಧ್ಯವಿಲ್ಲ. ಹೀಗಿದ್ದೂ ಒಂದು ಧ್ಯೇಯವಿಲ್ಲದೆ ಹರಿದಾಡಿ, ತಮ್ಮ ಆಯುಷ್ಯವನ್ನು ಹಾಳುಮಾಡಿಕೋತಾರ, ಅದಕ್ಕೆ ಕೆಟ್ಟ ಅನಸ್ತದೆ. ಈ ಸಾಹಿತಿಗಳೂ ಅಂಬುವರೆಲ್ಲ ಹೀಗೆಯೆ. ಕಲ್ಪನಾಸಾಮ್ರಾಜ್ಯದೊಳಗೆ ಅಡ್ಡಾ ಡೋದು. ಈ ಭೂಮಿಗೆ ಬಂದು ಅಡ್ಡಾಡಲಿಕ್ಕೆ ತೊಡಗಿದರೆ ಮುಗ್ಗರಿಸದೆ ಇದ್ದರ ನಮ್ಮ ಪುಣ್ಯ. ಈಗ ನಮ್ಮ ದೇಶದ ಪರಿಸ್ಥಿತಿಯೇನು, ನಮ್ಮ ಸ್ಥಿತಿ ಯೇನು? ಇದರ ವಿಚಾರನೇ ಇಲ್ಲ. ಇಂತಹರು ಇಂಗ್ಲಂಡಕ್ಕೆ ಹೋಗಿ ಬಂದರೇನು ? ಅಮೇರಿಕಾಕ್ಕೆ ಹೋಗಿ ಬಂದರೇನು ? ಬುದ್ಧಿ ಶಕ್ತಿ ಹಿಮಾಲಯದಷ್ಟು ದೊಡ್ಡದಿರಬಹುದು, ಕಾರ್ಯಶಕ್ತಿ ಶೂನ್ಯ. ಬರೇಮಾತಿನ ಡೊಳ್ಳು. ಮಾತಾಡಲಿಕ್ಕೆ ನಿಂದರಿಸಿದರೆ ಬೃಹಸ್ಪತಿಹಾಂಗ—ಬೇಕಾದರೆ ಅದಕ್ಕೂ ಹೆಚ್ಚು ಅನ್ನು– ಮಾತು ಸುರಿಸುತ್ತಾರೆ. ಕವಡಿಯಷ್ಟು ಕೆಲಸ ಇಲ್ಲ.

ಇಂತಹ ಜನರಕಿಂತ, ಹೇಳಿದ್ದು ಕೇಳಿ ಕೆಲಸ ಮಾಡಿಕೊಂಡು ಹೋಗುವ ದಡ್ಡರೆಷ್ಟೋಪಾಲಿಗೆ ಬೇಕು. ತ್ಯಾಗ ಬುದ್ಧೀನೆ ಇಲ್ಲ. ಎರಡನೆಯವರ ಸಲುವಾಗಿ, ಒಂದು ಸಂಸ್ಥೆಯ ಸಲುವಾಗಿ ದುಡಿಯಬೇಕೆಂಬ ಹವ್ಯಾಸವೆ ಕಡಿಮೆ. ಮತ್ತು ಸರಕಾರಿಯ ನೌಕರಿಯ ಬೆಡಗಿನಲ್ಲಿಯೆ ಬೆಳಕು ಕಾಣು ವುದೆ ತಮ್ಮ ಪುರುಷಾರ್ಥವೆಂದು ಭಾವಿಸುವರಿವರು. ಕಲಿತದ್ದೆಲ್ಲಾ ವ್ಯರ್ಥ. ವಿದ್ಯೆಯು ಕೊಟ್ಟರಲ್ಲವೆ ಅದರ ಉಪಯೋಗ...........ಅದಕ್ಕೆ ಈ ಜನರ ಮೇಲಿನ ವಿಶ್ವಾಸವೇ ಹಾರಿಹೋಗಿದೆ ನನ್ನದು. ಮೊದಲು ಮೊದಲು ಏನಾದರೂ ಮಾಡಬಹುದು ಅಂತ ತಿಳಿದಿದ್ದೆ; ಆದರೆ ಈಗ ಮಾತ್ರ ಸಂಪೂರ್ಣ ಖಾತ್ರಿ ಆಯಿತು. ಇವರ ಕೈಯಿಂದ ಏನೂ ಆಗೋದಿಲ್ಲ, ಅಂಬೋದು. ''

× × × × ×

" ನಾನು ಅವನನ್ನು 'ರಂಗಾ' ಅಂತ ಕರೆಯಬಲ್ಲೆ. ನನ್ನ ಕಿಂತ ಬಹಳ ಚಿಕ್ಕವ. ಆದರೆ ಬುದ್ಧಿಶಕ್ತಿಯ ಮೇಲ್ಮೆಯಿಂದ ಬಹುವಚನದಲ್ಲಿಯೆ ಮಾತ ನಾಡಬೇಕೆಂದು ಅನ್ನಿಸುವುದು. ನನ್ನ ಅನುಭವದಲ್ಲಿ ಅವನಷ್ಟು ಚಾಣಾ ಕ್ಷತೆಯಿದ್ದ ಮನುಷ್ಯ ಬೇರೊಬ್ಬ ಸಿಕ್ಕಿಲ್ಲ. ದುಡಿಯಲಿಕ್ಕೆ ತೊಡಗಿದರೆ ದೆವ್ವನಾಂಗ ದುಡಿತಾನ; ಬರಲಿ, ಚಾಲೆಂಜ ಕೊಡತೇನೆ, ಬೇಕಾದವನು ಅವನ ಸರಿಜೋಡಿಯಾಗಿ ದುಡಿಯಲಿ. ಮಾತಿನಲ್ಲಿ ತೊಗೊ, ಒಳ್ಳೊಳ್ಳೆ ಯವರನ್ನು ಮೂಗುತಿಕ್ಕಿಸಿದ ಉದಾಹರಣೆ ಅವೆ. ಇನ್ನೇನು, ದನಿಯೊಂದು ಸ್ವಲ್ಪ ನೀರಸವಾಗಿದೆ. ಆದರೂ ಮೈಯಲ್ಲಿ ಮಾತನಾಡುವ ಜಿಗುರು ಬಂದರೆ ಆ ಆವೇಶದಲ್ಲಿ ಆ ದನಿಯೆ ಸಿಡಿಲಿನಂತೆ ಗುಡುಗುವುದು. ಬರೆಯುವುದಂತೂ ಅವರ ಶಕ್ತಿ, ಅವರದೆ; ಅವಕ್ಕೆ ಎರಡನೆಯವರು ಸಾಟಿಯಿಲ್ಲ. ಬರೆಯು ವುದು ಒಮ್ಮೆ, ಅಳಿಸುವ ಪರಿಪಾಠವಂತೂ ಇಲ್ಲೇ ಇಲ್ಲ. ಕಾಟು ಹಾಕಿದ್ದು ನಾನು ಕಾಣೆ. ''

" ಸ್ವಭಾವದ ಬಗ್ಗೆ ಉಳಿದವರು ಏನೇನೋ ಅನ್ನುವರು; ನಮಗೇನು ವ್ಯತ್ಯಾಸ ಕಂಡಿಲ್ಲ. ಮನಿಗೆ ಬಂದರ ಮಾತಾಡಿಸೋದೆ ಇಲ್ಲ ಅನ್ನುವರು. ಮಾತಾಡಿಸಬೇಕು ತಾವೇ. ತಮ್ಮ ಕೆಲಸಕ್ಕಾಗಿ ಮನೆಯವರೆಗೆ ಹೋಗಿ ಅವರೇ ಮಾತಾಡಿಸಬೇಕೆಂಬ ಛಲ ಇವರಿಗೆ ಇರಬಾರದು. ನಿಜವಾಗಿಯೂ

ಅವರ ಸುಖದುಃಖದ ಕಲ್ಪನೆ ಇವರಿಗೆ ಇರದೆ, ತಮ್ಮದೊಂದೆ ಮುಂದೆ ಮಾಡಿಕೊಂಡು ಹೋಗುತ್ತಾರೆ; ಸ್ವಲ್ಪ ಹೆಚ್ಚು ಕಡಿಮೆಯಾದ ಕೂಡಲೆ, 'ಸೊಕ್ಕಿನವ' ಎಂದು ಗುಲ್ಲೆಬ್ಬಿಸುವುದು. ಎಂತಹ ಸ್ಥಿತಿಯಲ್ಲಿಯೂ ಮಾತಾಡಿಸಿದವರನ್ನು ಮಾತಾಡಿಸದೆ ಅವರು ಬಿಟ್ಟಿಲ್ಲ. ತಾವಾಗಿಯೆ ಮಾತಾಡಿಸುವ ರೂಢಿ ಕಡಿಮೆ. ಅದು ಅವರ ಸ್ವಭಾವವೆ ಆಗಿದೆ. ''

× × × × ×

'ಕಲಿ, ಭ್ರಷ್ಟ' ಬಾಹ್ಮಣಜನ್ಮಕ್ಕೆ ಬಂದು, ಅದರಾಗೂ ಮನೆತನಸ್ಥ ಆಚಾರ್ಯರ ಮನೆಯಲ್ಲಿ ಹುಟ್ಟಿ, ಆ ಬ್ರಾಹ್ಮಣರನ್ನೂ ಬೈಲಿಗೆಳೆಯುವ ನೀಚತನ ತುಂಬೇದ. ಒಂಮ ಹಿರಿಯರ, ಒಂದು ದೇವರ, ಶುದ್ಧ ಧರ್ಮಲಂಡ. ಮದಿವ್ಯಾತು, ದೇವರದಯದಿಂದ ಮಕ್ಕಳು ಹುಟ್ಟ್ಯಾರ. ಒಬ್ಬ ಬ್ರಾಹ್ಮಣ ಅವನ ಮನ್ಯಾಗ ಚಿತ್ರಾವತಿ ಇಟ್ಟದ್ದು. ಬ್ರಾಹ್ಮಣರನ್ನು ಮನಿಸಮೀಪ ಹಾಯಗೊಡುವದಿಲ್ಲ, ಊಟದ ಮಾತಂತೂ ದೂರ ಉಳೀತು. ದೊಡ್ಡ ಪ್ರೊಫೆಸರ ಆಗ್ಯಾನ; ಸಂಸ್ಕೃತ ಕಲಸ್ತಾನಂತ, ಹುಡುಗರಿಗೆ. ಧರ್ಮ ಹೇಳಿಕೊಡೋದನ್ನು ಬಿಟ್ಟು, ದೇವರಿಲ್ಲ, ಧರ್ಮ ಇಲ್ಲ, ಅಂತ ಕಲಸ್ತಾನಂತರಿ. ಇದೆಲ್ಲ ಸಮುದ್ರಯಾನಮಾಡಿ, ಆ ಕೆಂಪು ಮಾರಿ ಜನರ ಸಹವಾಸದ ಫಲ. ನಮ್ಮ ಸ್ವಾಮಿಗಳು ಅನ್ನೋದೇನು ಸುಳ್ಳಲ್ಲ! ಆ ಮ್ಲೇಂಛಭಾಷಾ ಕಲಿಬ್ಯಾಡ್ರಿ ಅಂತ ಕಡ್ಡಿಕೊಟ್ಟು ಹೇಳಿದರೂ ಕೇಳೋಹಾಂಗ ಇಲ್ಲ. ಬ್ಯಾಡ ಅಂದ್ರೂ ಕಲಿಯೋದು, ಕಲಿತು ದೇವರು, ಧರ್ಮ, ಬ್ಯಾಡಾ ಅನ್ನೋದು. ಇವರದಾದರೂ ಏನು ತಪ್ಪು. ಕಲಿಕಾಲ ಬಂತು. ಎಲ್ಲಾ ವಿಪರೀತ ಆಗಬೇಕಲ್ಲ. ಇವೆಲ್ಲ ಅದರ ಲಕ್ಷಣನೆ. ಎಲ್ಲಿ ನೋಡಿದಲ್ಲಿ ಅದೇ ಮಾತು, ಅದೆ ವಿಚಾರ. ನಮ್ಮ ಗೋಪಾಲನೂ ಹಾಂಗ ಮಾಡ್ಲಿಕ್ಕೆ ಹತ್ಯಾನ. ನನಗೆ ಹೊಟ್ಟೆಯೊಳಗ ಬೆಂಕಿ ಸುರುವಿಧಾಂಗ ಆಗಲಿಕ್ಕೆ ಹತ್ತೇವ. ಅದಕ್ಕೆ ಅವನ ನೋಡಿದಾಗೆಲ್ಲ ಅನಸ್ತದ; ಎಂಥಾ ಮನೆತನದ ಹುಡುಗ ಏನಾದನಲ್ಲ! ನಡೀಲಿ '' ಎಂದು ಉಸುರು ಹಾಕಿದರೊಬ್ಬರು.

× × × × ×

"ಕಲಿತವರು, ಇಂಗ್ಲಂಡಕ್ಕೆ ಹೋಗಿ ಬಂದವರು, ಪ್ರೊಫೆಸರರು, ಎಂದ ಮೇಲೆ ಬಹಳ ಬಿಗುವಿನವರು ಇರಬೇಕೆಂದು ನನ್ನ ಮೊದಲಿನ ವಿಚಾರವಿತ್ತು.

ಹೇಳಿಕೆಯ ಮಾತು, ಹಾರಿಕೆಯ ಸುದ್ದಿ ನಂಬಲರ್ಹವಲ್ಲವೆಂಬುದು ಅವರನ್ನು ಸಂಧಿಸಿದಾಗ ತಿಳಿದುದು. ಎಷ್ಟು ಅವರ ಬಿಚ್ಚು ಮನ. ಒಣ ಆಡಂಬರವಿಲ್ಲ. ಪಾಶ್ಚಾತ್ಯರ ಆಡಂಬರವು ಅವರನ್ನು ಆವರಿಸಿಲ್ಲ. ಸಾಮಾಜಿಕನಿಗೆ ಬೇಕಾದ ಮೃದುಹೃದಯವಿದೆ. ವಿದ್ಯೆಯ ವೈಭವದ ಮೂಲಕ ಗಾಂಭೀರ್ಯ ಬಂದಿದೆ. ತಿಳಿಯದವರು ಇದನ್ನೆ ಒರಟುತನವೆಂದು ಭಾವಿಸುತ್ತಾರೆ. ಅಲ್ಲಿ ಜನರ ಒರಟುತನವು ಬೈಲಿಗೆ ಬರುವುದೆ ಹೊರತು ಬೇರೊಂದಿಲ್ಲ. ನಾಟಕದ ಸಂಚಾರಗಳಲ್ಲಿ ಯಾವುದೇ ತರಹದ ಭೇದಭಾವವಿಲ್ಲದ ಸಮದೃಷ್ಟಿ ಅವರದು. ನಾಟಕರಂಗದಲ್ಲಿಯಂತೆ, ನಟರಲ್ಲಿ ಸಮಭಾವ. ಕಾಲೇಜದಲ್ಲಿ ತಾವೊಬ್ಬ ಪ್ರೊಫೆಸರರಿರಬಹುದು. ವಿದ್ಯೆಯ ದೃಷ್ಟಿಯಿಂದ ಪರದೇಶದ ಮುದ್ರೆ ಬಿದ್ದಿರ ಬಹುದು. ನಾಟಕದಲ್ಲಿ ಎಲ್ಲರೂ ಒಂದೆ ವರ್ಗದವರು— ನಟವರ್ಗ ದವರು ಎಂಬ ಭಾವನೆಯು ಸುಳಿದು, ಕೀಳುಮೇಲುಗಳಿಗೆ ಆಸ್ಪದವೇ ಬಾರದು. ಆ ಬಗೆಯ ಸಮದೃಷ್ಟಿಯಿದ್ದುದರಿಂದಲೆ ನಮ್ಮ ಎಲ್ಲ ನಾಟ್ಯ ಪ್ರಯೋಗಗಳು ಯಶಸ್ವಿಯಾಗಿವೆ. ಕೆಲವರು ತಮ್ಮ ಆಢ್ಯತೆಯನ್ನು ಬೆಳೆಯಿ ಸಲೋಸುಗ ಹೂಡಿದ ಹವಣಿಕೆಗಳು ಇವರ ಈ ಪ್ರವೃತ್ತಿಯ ಮೂಲಕ ಕುಣಿಕಂಡವು. ಹಟತೊಟ್ಟು ಸಾಧಿಸಬೇಕೆಂದವರಿಗೆ ಇವರ ಸಹವಾಸ ಕಷ್ಟ ವಾಗಿ, ದೂರಾಗಬೇಕಾಯಿತು. ಒಮ್ಮೆ ಅವರೇ ಹೀಗೆಂದುದು ನನಗೆ ನೆನಪು ಇದೆ : 'ನಮ್ಮ ಮನೆಯೆಂದರೆ ನಮ್ಮವರಿಗೆ ಮಠವಿದ್ದಂತೆ. ತಮ್ಮ ತಮ್ಮ ಮನೆ ಯಲ್ಲಿ ಎಷ್ಟು ನಿರಾತಂಕವೊ ಅಷ್ಟು ನಿರಾತಂಕ. ಹೇಳಬೇಕು, ಕರೆಯಬೇಕು, ಎಂದು ಆದರಾತಿಥ್ಯಕ್ಕೆ ಮನಸೋತು ದಾರಿಕಾದರೆ ಬರಿಯೆ ದಣುವಾಗುವುದು ಖಂಡಿತ. ನಿಮ್ಮನ್ನು ಕರೆಯದೆ ಇದ್ದಾಗ, ಕರೆಯುವ ಅವಶ್ಯಕತೆ ಇಲ್ಲವೆಂದು ಬಿಟ್ಟಿರುವದೆ ವಿನಾ ನಿಮ್ಮನ್ನು ದೂರೀಕರಿಸುವ ದುರಾಲೋಚನೆಯಿದೆಯೆಂದು ದೂರಬೇಡಿರಿ. ನೀವು ನನ್ನವರು ಎಷ್ಟು ಅಂಶವೊ ಅಷ್ಟೆ ನಾನು ನಿಮ್ಮವನು. ನನ್ನಲ್ಲಿ ನೀವು ಸಾಶಂಕವೃತ್ತಿಯವರಾದರೆ ಆ ದೂಷಣೆ ನನ್ನ ಮೇಲೆ ಏಕೆ ?' ಅವರು ಹೇಳಿದುದು ಅಕ್ಷರಕ್ಕೂ ಸತ್ಯವಿದೆ. ನನ್ನ ಅನುಭವವೆ ಹಾಗಿದೆ. ಕೆಲವರಿಗೆ ಅವರ ಈ ವರ್ತನ ಕಹಿಯೆನಿಸಿದ್ದುಂಟು. ಅದಕ್ಕೆ ಕಾರಣ ತಮ್ಮ ಆಢ್ಯತೆಯನ್ನು ಸ್ಥಾಪಿಸುವ ಹಂಬಲ. ಎರಡು ಮುಖ್ಯ ಗ್ರಹಗಳು ಒಂದೆಡೆ ಸೇರಲಾರವು."

" ನಾವು ನೋಡಿದರ ರೇಲ್ವೆ ಕೂಲಿಕಾರರು; ಆದರೂ ನಮ್ಮ ಸಂಗಡ ಅವರೆಷ್ಟು ಸಲುಗೆ ಸೌಹಾರ್ದದಿಂದ ಮಾತನಾಡುವರು. ಒಮ್ಮೆ ಹೀಂಗಾತು. ನಾನು ಅದೇ 'ಶಾಪಿ' ನಿಂದ ಮನಿಗೆ ಹೊರಟಿದ್ದೆ, ಆಗಿನ ನಮ್ಮ ವೇಷ ನೋಡೋಹಾಂಗ ಇರತದ. ಕಪ್ಪು ಅಂಗಿ, ಹೊಲಸು ಪಾಯಜಾಮಾ, ಕೈಮೈ ಹೊಲಸು, ಹಿಂಗಿದ್ದಾಗ ಎದುರು ಅವರು ಸಿಕ್ಕರು. ಏನೊ, ಲೆಕ್ಚರಕ್ಕೆ ಬಂದಿದ್ದರು ಕಾಣತದ. ಸಂಗಡ ಯಾರ್ಯಾರೊ ಇದ್ದರು. ಈ ವೇಷ ದೊಳಗೆ ನಾನು ಯಾಕೆ ಮಾತಾಡಿಸಬೇಕು ಅಂತ ಸುಮ್ಮನೆ ಕೆಳಗೆ ಮೋರೆ ಹಾಕಿಕೊಂಡು ಸಾಗಿದ್ದೆ. ಸಮೀಪ ಬಂದೊಡನೆಯೆ ಅವರಿಗೆ ನನ್ನ ಗುರುತು ಹತ್ತಿತು. ಮತ್ತು 'ಏನ್ರಿ, ಈಗ ಬಿಟ್ಟಿತು ಏನು ನಿಮ್ಮ ಶಾಪ್' ಅಂತ ಮಾತಾಡಿಸಿಯೆ ಬಿಟ್ಟರು. ಆ ಮೇಲೆ ನಾನೂ ಮೈಚಳಿ ಬಿಟ್ಟು ಮಾತಾಡಿ ಹಿಂದುಗಡೆ ಕಾಣುವೆನೆಂದು ಹೇಳಿ ಬಿಳ್ಕೊಟ್ಟೆ. ಯಾರು ಏನೆ ಅನ್ನಲಿ, ಅವರಲ್ಲಿ ಮೇಲು ಕೀಳು ಅಂಬುವ ಭಾವನೆ ಇಲ್ಲ. ನಮಗೆ ಮಾತ್ರ ಒಮ್ಮೊಮ್ಮೆ ಗಾಬರಿ.

× × × × ×

" ಶ್ರೀರಂಗರನ್ನು ನಾನು ಮೊದಲು ನೋಡಿದುದು ಬೊಂಬಾಯಿಯಲ್ಲಿ. ಎಂ. ಎ. ಪರೀಕ್ಷೆಯಲ್ಲಿ ತೇರ್ಗಡೆಹೊಂದಿ, ಇಂಗ್ಲಂಡಿನಿಂದ ಅವರು ಅದೇ ಮರಳಿಬಂದ ಕಾಲವದು. ಆಗ ಅವರಿನ್ನೂ ಪ್ರೊಫೆಸರ ಆಗಿದ್ದಿಲ್ಲ. 'ಪ್ರೊಫೆಸರ'ರ ಪರಿಚಯವು ನನಗೆ ಅಷ್ಟಕ್ಕಷ್ಟೆ. ಇಲ್ಲವೆಂದರೂ ಸಲ್ಲುವುದು. ನನಗಿದ್ದ ಪರಿಚಯವು ಪ್ರೊಫೆಸರರೊಳಗಿದ್ದ ಜಾಗಿರದಾರರದು. ಜಾಗಿರದಾರರಲ್ಲಿ ಅದೇ ತಲೆಯೆತ್ತುತ್ತಿದ್ದ 'ಶ್ರೀರಂಗ'ರದು.

"ಹಿಂದುಸ್ತಾನಿಯಲ್ಲಿ ಒಂದು ಗಾದೆಯಿದೆ. 'ಆದಮಿ ದೇಖನಾ ಬಸ್‌ಕೆ। ಸೋನಾ ದೇಖನಾ ಘಸ್‌ಕೆ.' ಮನುಷ್ಯನನ್ನು ಮನೆಯಲ್ಲಿ ಬಿಚ್ಚಿನೋಡು; ಬಂಗಾರವನ್ನು ಒರೆಗಲ್ಲಿಗೆ ಹಚ್ಚಿನೋಡು. ಬಹಿರಂಗದಲ್ಲಿ ತನ್ನ ಅನೇಕ ನಿಜವಾದ ಗುಣಗಳನ್ನು ಮುಚ್ಚಿ ಮರೆಮಾಡಬಹುದು. ಕಟ್ಟುನಿಟ್ಟುಗಳಿಂದ ರಹಿತವಾದ ಮನೆಯ ವಾತಾವರಣದಲ್ಲಿ ವ್ಯಕ್ತಿಯ ನಿಜಸ್ವರೂಪವು ಬಿಚ್ಚಿ ಬಯಲಿಗೆ ಬಂದೇ ತೀರಬೇಕು. ಅದೇ ಅವನ ಘನತೆಯನ್ನಾಗಲಿ, ಯೋಗ್ಯತೆ ಯನ್ನಾಗಲಿ, ಸಂಸ್ಕೃತಿಯನ್ನಾಗಲಿ, ನಿಜವಾಗಿ ತೋರಿಸತಕ್ಕುದು. ಸುಮಾರು

ಎರಡು ವರ್ಷಗಳ ಕಾಲವನ್ನು ಮೈತ್ರಿಯ ನಿಕಟವಾದ ಸುಖಸಂಬಂಧದಲ್ಲಿ ಕಳೆಯುವ ಸುಯೋಗವು, ಜಾಗಿರದಾರರು ಪ್ರೊಫೆಸರರಾಗಿ ಧಾರವಾಡಕ್ಕೆ ಹೋಗುವವರೆಗೆ, ನನ್ನದಾಗಿತ್ತು. ಯಾರ ಮಿಲನದಿಂದ ಪರಸ್ಪರ ತ್ರಾಣವು ಬೆಳೆಯುತ್ತವೊ ಅವರೆ ನಿಜವಾದ ಮಿತ್ರರೆಂದು ನನ್ನ ಭಾವನೆ. ಮತ್ತೆ ಈ ಭಾವನೆಗೆ ಅನುಗುಣವಾಗಿಯೆ ನಮ್ಮಿಬ್ಬರ ಸಹವಾಸದ ಅನುಭವವು ನಮ್ಮನ್ನು ಪರಮ ಮಿತ್ರರನ್ನಾಗಿ ಮಾಡಿತು.

"ನಮ್ಮ ಮಿತ್ರತ್ವವು ಪ್ರಥಮ ದರ್ಶನದಲ್ಲಿಯೆ ಬೆಳೆದುದಲ್ಲ. ಇದಕ್ಕೆ ಕಾರಣಗಳನೇಕ. ಪರದೇಶಕ್ಕೆ ಹೋಗಿಬಂದವರನೇಕರಲ್ಲಿ ಕಂಡು ಬಂದ ಬರಿಯ ಜಂಬ, ಆಡಂಬರಗಳು ನನ್ನಲ್ಲಿ ಬಿತ್ತಿದ ಸಾಶಂಕಭಾವನೆಯು ಒಂದಾಗಿರ ಬಹುದು. ಅವರ ಸಂಗ್ರಹ ಭಾವನೆಯು ಮತ್ತೊಂದಾಗಿರಬಹುದು. ನನ್ನಲ್ಲಿದ್ದ ಸಾಶಂಕಭಾವನೆಯನ್ನು ಒರೆಸಿ, ಅವರಲ್ಲಿದ್ದ ಸಂಗ್ರಹ ಭಾವನೆಯನ್ನು ಮರೆಸಿ, ನಮ್ಮಿಬ್ಬರ ಪರಸ್ಪರ ಪರಿಚಯವನ್ನು ಮಾಡಿಕೊಟ್ಟ ಶ್ರೇಯವು ಶ್ರೀ ಬಿಂದೂರಾವ ಕೆಂಭಾವಿ ಅವರದು. 'ಪ್ರಿಯ ತರಾಜೋ ಖೋಲಕರ। ತಬ ಸುಖ ಬಾಹರಖೋಲ' ಎಂಬ ಕಬೀರನ ವಚನದ ಅನುಭವವನ್ನು ಪಡೆಯುವ ಸುಯೋಗವನ್ನು, ಬಿಂದೂರಾಯರು ಸಿಕ್ಕದಿದ್ದರೆ, ನಾವಿಬ್ಬರೂ ತಿಳಿಯದೆ ಕಳೆದುಕೊಳ್ಳುತ್ತಿದ್ದೆವೆಂದು ನನ್ನ ನಂಬಿಕೆ."

× × × × ×

"ನಾನು ಅವರನ್ನು ಮೊದಲು ಕಂಡುದು ವಿದ್ಯಾರ್ಥಿ ಇದ್ದಾಗ. ಅವರಿಗೆ ನಾನು ಕಲಿಸಿದಂತೆ ನನಗೆ ನೆನಪು ಇದೆ. ಒಳ್ಳೆ ಚುರುಕು ಬುದ್ಧಿ. ಆಗ್ಗೆ ನನ್ನ ಮನಸ್ಸಿನಲ್ಲಿ ಅವರ ಭವಿಷ್ಯದ ಬಗೆಗೆ ಮಸುಕು ಮಸುಕು ಚಿತ್ರ ಬರತೊಡಗಿತು. ಅವನೊಬ್ಬ ಅಸಾಮಾನ್ಯಪುರುಷನಾಗುವನೆಂದು ನನಗೆ ಆಗಾಗ ಅನ್ನಿಸುತ್ತಿತ್ತು. ಆಗ ಮಿಂಚಿನಂತೆ ಕಂಡು, ತಿರುಗಿ ಅವರನ್ನು ಕಂಡುದು, ಧಾರವಾಡಕ್ಕೆ ಪ್ರೊಫೆಸರರಾಗಿ ಬಂದಾಗಲೆ. 'ಎಷ್ಟು ಬೆಳೆದಿದ್ದಾನಲ್ಲ' ಎಂದು ಬಿಟ್ಟೆ.

"ಅವರ ಬಗೆಗೆ ಯಾರಲ್ಲಿಯೂ ಇಲ್ಲದ ಅಭಿಮಾನವಿದೆ ನನ್ನಲ್ಲಿ. ಬುದ್ಧಿಯ ಮೇಲ್ಮೆಗೆ ಮನಸೋತವರಲ್ಲಿ ನಾನೊಬ್ಬ. ಅವರಲ್ಲಿ ತಮ್ಮ ಉದ್ದೇಶದ ಪ್ರಾಮಾಣಿಕತೆ ಇದೆ. ತಮ್ಮ ಅಭಿಪ್ರಾಯಕ್ಕೆ ಯಾವ ಮಹತ್ವವನ್ನು

ಕೊಡುವರೊ ಅಷ್ಟೇ ಇತರರ ಅಭಿಪ್ರಾಯಕ್ಕೆ ಮನ್ನಣೆ, ಸ್ವಾತಂತ್ರ್ಯ ಕೊಡುವರು. ಎರಡನೆಯವರ ಮತಬದಲಾಯಿಸಲು ಪ್ರಚಾರಮಾಡುವುದಿಲ್ಲ; ತಮ್ಮದನ್ನು ಬಿಡೆಂದರೆ ಕೇಳುವುದಿಲ್ಲ. ನನ್ನ ಅವರ ವಿಚಾರವ್ಯತ್ಯಾಸವಿದ್ದರೂ ಅವರ ಗುಣಕ್ಕೆ, ಬುದ್ಧಿಗೆ, ನಾನು ಲುಬ್ಧ. ಅವರು ಮಾಡುತ್ತಿರುವ ಟೀಕೆಯನ್ನು ಕೋಮಲ ಅಂತಃಕರುಣಿಯಾದ ನನಗೆ ತಡೆದುಕೊಳ್ಳುವುದಾಗುವುದಿಲ್ಲ. ಟೀಕೆ ಮಾಡುವಾಗ, ಆ ಆಚಾರ–ಸಂಪ್ರದಾಯಗಳ ಸಲುವಾಗಿ ಅವರಿಗೆ ನಿಜವಾಗಿಯೂ ಕಳವಳವಾಗುತ್ತಿದೆಯೆಂಬುದು ನಾನು ಅರಿತಿದ್ದೇನೆ. ಸಮಾಜವನ್ನು ಸುಧಾರಿಸುವ ಉದ್ದೇಶದಿಂದ, ಅದರ ಹೊಲಸಿನ ಚಿತ್ರತೆಗೆಯುವಾಗ ಅವರು ಉಪಯೋಗಿಸುವ ತೀಕ್ಷ್ಣ ಭಾಷೆ, ನನ್ನ ಮಟ್ಟಿಗೆ ಸರಿಬರುವುದಿಲ್ಲ. ನಾನೊಬ್ಬ ಭಾವಿಕನಾದುದರಿಂದ ನನ್ನ ಮನಸ್ಸು ನೋಯುತ್ತದೆ. ಹಾಗಿದ್ದರೂ ಅವರಲ್ಲಿಯ ಉದ್ದೇಶದ ಪ್ರಾಮಾಣಿಕತೆಯ ಮೂಲಕ, ಅವರ ಬಗೆಗೆ ಎಳ್ಳಷ್ಟೂ ನನ್ನ ಅಭಿಮಾನವು ಕಡಿಮೆಯಾಗಿಲ್ಲ. ನನ್ನ ಬಗೆಗೆ ಅವರ ಆದರ ಬುದ್ಧಿಯಾದರೂ ಕುಂದಿಲ್ಲ. ದೇವ, ಧರ್ಮ, ಕಾಂಗ್ರೆಸು, ಇವುಗಳ ವಿಷಯದಲ್ಲಿ ತೀರ ಭಿನ್ನಾಭಿಪ್ರಾಯಗಳು ಇವೆ ನಮ್ಮಲ್ಲಿ. ಅದು ಮಾನವ ಸಹಜವೆಂದು ನಾವಿಬ್ಬರೂ ಅರಿತಿರುವುದರಿಂದ, ನಮ್ಮ ಮಿತ್ರತ್ವಕ್ಕೆ ವ್ಯತ್ಯಯ ಬಂದಿಲ್ಲ, ಬರುವುದಿಲ್ಲ."

× × × × ×

"ನಾನು ಅವರ ಬಗೆಗೆ ಹೇಳುವುದಾದರೆ, ನಿಜವಾಗಿಯೂ ನನಗೆ ಶಬ್ದಗಳು ಸಾಲುವುದಿಲ್ಲ. ಅವರು ಮಾಡಿದ ಉಪಕಾರ ಅಷ್ಟಿದೆ. ಅವರ ಎದುರು ಮೋರೆಯೆತ್ತುವ ಸ್ಥಿತಿ ನನ್ನದಲ್ಲ. ತಿಳಿವಳಿಕೆ ಕಡಿಮೆ ಇದ್ದಾಗ ನಾನು ಅವರ ವಿರೋಧಿಯಾಗಿ ಕಾರ್ಯ ಮಾಡಿದೆ. ಆದರೂ ಅವರು ನನ್ನನ್ನು ಗೆಳೆಯನೆಂದು ತಿಳಿದು, ಮೊದಲಿನಂತೆಯೆ ವರ್ತಿಸುತ್ತಿದ್ದುದು ನನ್ನಲ್ಲಿಯೆ ನಾಚಿಕೆ ತಂದಿತು. ಮಾಡಿದ ತಪ್ಪನ್ನು ಒಪ್ಪಿಕೊಳ್ಳುವ ಧೈರ್ಯ ನನ್ನಲ್ಲಿಲ್ಲದ ಮೂಲಕ, ದೂರದಲ್ಲಿಯೆ ಇದ್ದುಬಿಟ್ಟಿದ್ದೇನೆ. ಆದರೆ, ಒಮ್ಮೊಮ್ಮೆ ಆವೇಶದ ಭರದಲ್ಲಿ ಹೋಗಿ ಅವರೆದುರು ಮಾಡಿದ ತಪ್ಪನ್ನು ಹೇಳಿಕೊಂಡು ಮೊದಲಿನಂತೆ ತಿಳಿಮನಸ್ಸಿನವನಾಗಬೇಕು, ಎಂದೆನಿಸುವುದು. ಮರುಕ್ಷಣವೆ ದುರಭಿಮಾನ ಆವರಿಸಿ ಬಂದು, ನನ್ನನ್ನು ದೂರೀಕರಿಸುತ್ತದೆ; ಆಗಲಿ, ಎಂದು

ಕೈಚಲ್ಲಿ ಕೊಡುತ್ತೇನೆ. ಆದರೆ, ಅವರ ಗೆಳೆತನ, ಸಹವಾಸಕ್ಕಾಗಿ ದಾರಿಕಾಯು ವಷ್ಟು ಕಾತರನಾಗಿದ್ದೇನೆ. ಬಿಚ್ಚುಮನದ ಮಾತಿನಿಂದ ಅವರು ಅನೇಕರನ್ನು ಕಾರ್ಯಕ್ಕಾಗಿ ಎಚ್ಚರಿಸಿದ್ದಾರೆ. ಹಾಗೆ ಎಚ್ಚತ್ತವರಲ್ಲಿ ನಾನೊಬ್ಬ. ಆದಕ್ಕೆಯೆ ನಾನಂದುದು, ಅವರ ಬಗ್ಗೆ ಎಷ್ಟು ಹೇಳಿದರು ಕಡಿಮೆಯೆ, ಎಂದು.''

× × × × ×

''ಮೊದಲು ನಮ್ಮದು ಅವರದು ಸಲುಗೆ ಬಹಳವಿತ್ತು. ಆದರೆ ನಡುವೆ ಕೆಲವು ಕಾರಣಗಳ ಮೂಲಕ ವಿಚಾರವ್ಯತ್ಯಾಸವುಂಟಾಗಿ, ಬೇರೆ ಯಾದೆವು. ಮೊದಲಿನಂತೆ ಕೂಡಿರುವುದು ಬಿಟ್ಟಿರಿವುವೆ ಹೊರತು, ಏನೊಂದು ದ್ವೇಷ, ಅಸೂಯೆ ಇಲ್ಲ. ಅವರ ಸ್ವಭಾವ ನಮ್ಮ ಸ್ವಭಾವಕ್ಕೆ ಸರಿಹೋಗ ಲಿಲ್ಲ. ನಮ್ಮದು ವಾಚಾಳಿತನ, ಅವರದು ಸಂಗ್ರಹ ಸ್ವಭಾವ. ನಾವು ಮಾತಾಡಿಸಿದಾಗೆಲ್ಲ, ಅವರು ಮಾತನಾಡದೆ ಬಿಟ್ಟರೆ, ನಮಗೆ ಅಪಮಾನ ವೆನ್ನಿಸುತ್ತಿತ್ತು. ಆದೇಕೆ ಹಾಗೆ ಮಾಡುತ್ತಿದ್ದರೊ ನಾವು ಕಾಣೆವು. ಆದರೆ ಅದು ಮಾತ್ರ ನಮ್ಮ ಮನಸ್ಸಿಗೆ ಬರಲಿಲ್ಲ. ಬರಬರುತ್ತ ನಮ್ಮ ಪ್ರಕೃತಿಯೂ ಗಂಭೀರವಾಯಿತು. ಅವರ ಧ್ಯೇಯ ಧೋರಣಗಳಿಗೆ, ನಮ್ಮ ಗೊತ್ತುಗುರಿಗಳಿಗೆ ವಿಪರೀತ ವ್ಯತಾಸ ಕಂಡುಬಂದುದರಿಂದ ಒಳ್ಳೆಯ ಸಲುಗೆಯಿಂದ ಇದ್ದರೂ ಅಗಲುವ ಯೋಗ ಬಂತು. ದಿನವೊಂದಕ್ಕೂ ತಪ್ಪುತಿಳುವಳಿಕೆಯ ಮಡಲಿ ನಲ್ಲಿ ಮುಳುಗೇಳುವುದಕ್ಕಿಂತ ಆ ಮಡಲು ಬರುವ ಮುಂಚೆಯೆ ಬೇರೆ ಯಾದೆವು. ಸರಿ, ಅಷ್ಟೆ. ಬೇರೆ ಏನೂ ಇಲ್ಲ. ಇರಬೇಕಾದರೂ ಏನು?"

× × × × ×

''ನಾನು ಇನ್ನೂ ಶಾಲೆಯಲ್ಲಿ ಓದುತ್ತಿರುವಾಗ ಅವರನ್ನು ಮೊದಲು ಕಂಡುದು. ನಮ್ಮ ಶಾಲೆಯ ನಾಟಕ ನೋಡಲು ಬಂದಿದ್ದರು. ನನ್ನ ಪಾತ್ರಾಭಿನಯವನ್ನು ನೋಡಿ, ಸಂತೋಷಬಟ್ಟು, ಹಾರೈಸಿದರು. ಮುಂದೆ ಕಾಲೇಜ ಸೇರಿ ಅಲ್ಲಿಯೂ ನಾಟಕಗಳನ್ನಾಡುವಾಗ ಸಂಬಂಧ ಬರತೊಡಗಿತು. ಅವರ ಕೆಲವು ನಾಟಕಗಳನ್ನು ನಾನು ಕಳೆಗಟ್ಟಿಸಿದುದು, ಅವರಿಗೆ ನನ್ನ ಬಗೆಗೆ ಹೆಚ್ಚು ಆದರವೆನಿಸಿತು. ನಮ್ಮ ಸಂಬಂಧವು ನಿಕಟವಾಯಿತು. ಅವರಲ್ಲಿ ಯಾವ ಶಕ್ತಿಗೂ ಕೊರತೆ ಇಲ್ಲ. ತಮ್ಮ ಶಕ್ತಿಯ ಮೇಲ್ಮೆಯ ಮೋಹವು ಅವರನ್ನು ಆವರಿಸಿದೆ. ಅದು ಅವರ ಉಚ್ಚ ಮನಸ್ಸಿನ ಸಹಜ ಸ್ವಭಾವ

ವಾಗಿದ್ದರೂ ಹೆರವರನ್ನು ಅದು ನೋಯಿಸುವುದು ಒಮ್ಮೊಮ್ಮೆ. ಹೆರವರ ನೋವಿನ ಅರಿವು ಅವರಿಗಿಲ್ಲ. ಗುರುತ್ವ ವಹಿಸಬೇಕೆಂಬ ಗುರುತ್ವಾಕರ್ಷಕ ಶಕ್ತಿ ಅವರಲ್ಲಿಲ್ಲ. ತಮ್ಮಂತೆಯೆ, ತಮ್ಮ ಸಹವಾಸಿಗಳೂ ಬೆಳೆಯಬೇಕೆಂಬುದೆ ಅವರ ಮನೀಷೆ. ಅದು ಸಹವಾಸದಿಂದಲೆ ಬೆಳೆಯಬೇಕಲ್ಲದೆ, ಉಪದೇಶದ ಮೂಲಕವಲ್ಲ. ಉಪದೇಶ ಮಾಡುವ ಉದ್ದಾಮತನ ಅವರಲ್ಲಿಲ್ಲ. ಅದಕ್ಕೆಯೆ ಅವರು ಹೆಚ್ಚು ಆದರಣೀಯ.

×          ×          ×          ×          ×

"ನಮ್ಮ ಮೇಲೆ ಅವರು ಏನೂ ಪರಿಣಾಮ ಮಾಡಲಿಲ್ಲ. ಮೊಟ್ಟ ಮೊದಲು ಅವರನ್ನು ಸಂಧಿಸಿದುದು ನಾನು ಕಾಯದೆ ಅಭ್ಯಾಸ ಮಾಡುವಾಗ. ಇಂಗ್ಲಂಡದಿಂದ ಬಂದು ಸುಮಾರು ಒಂದೂವರೆ ವರುಷವಾಗಿತ್ತು. ನಮ್ಮಿಬ್ಬರ ಮಿತ್ರನೊಬ್ಬ ನಮ್ಮ ಪರಸ್ಪರ ಪರಿಚಯ ಮಾಡಿಕೊಟ್ಟ. ದಿನಗಳೆದಂತೆ ನಾವು ಪರಮ ಮಿತ್ರರಾದೆವು. ನನ್ನನ್ನು ಬಿಟ್ಟು ಅವರು ಮಾಡದ ಕೆಲಸ, ಹಂಚಿಕೆಗಳಿದ್ದಿಲ್ಲ. ಜ್ಞಾನಾರ್ಜನೆಯ ದಾಹ ಅವರಲ್ಲಿ ಹೆಚ್ಚು. ತಮ್ಮ ಸುತ್ತುಮುತ್ತಲಿನ ಸಮಾಜದ ಹೀನ ಸ್ಥಿತಿಯನ್ನು ಕಂಡು, ಕಸಿವಿಸಿಪಡುತ್ತಿದ್ದರು. ಅದನ್ನು ಒಳ್ಳೆಯ ಸ್ಥಿತಿಗೆ ತರಲು ತಾವು ಮಾಡಬೇಕೆಂದಿರುವ ಯೋಜನೆಗಳನ್ನು ನನಗೆ ಹೇಳುತ್ತಿದ್ದರು. ಬುದ್ಧಿ ಬಲು ಹರಿತ. 'ಆಡು ಮುಟ್ಟದ ಗಿಡವಿಲ್ಲ'ವೆಂಬಂತೆ ಅವರು ಮಾತನಾಡದ ವಿಷಯವಿಲ್ಲ. ಇದು ಅವರ ಪ್ರವೃತ್ತಿ. ಯಾವ ವಿಷಯವೇ ಆಗಲಿ ತಮಗೆ ಗೊತ್ತಿಲ್ಲದಿಲ್ಲವೆಂದು ತೋರಿಸುವ ಹಂಬಲ. ವಿಷಯ ಕಡಿಮೆ ಗೊತ್ತಿದ್ದರೂ 'ಇವನು ಸರ್ವಜ್ಞನೇ' ಎನಿಸುವಷ್ಟು ಭಾಷಣ ಚಾತುರ್ಯ ಅವರದು. ಒಟ್ಟನಲ್ಲಿ ಹೇಳುವುದಾದರೆ ಅವನೊಬ್ಬ ಅಸಾಧಾರಣ ಮನುಷ್ಯನೆಂದು ಹೇಳಿದರೆ ಸಾಕು."

×          ×          ×          ×          ×

ಇವಿಷ್ಟು ಮಹನೀಯರ ಬಹಿರಂಗ ದರ್ಶನದಿಂದ ಬಂದ ಅನುಭವ, ಅಭಿಪ್ರಾಯಗಳು. ಇವುಗಳಲ್ಲಿ ಅಸತ್ಯವಾದ ಅನುಭವವು ಯಾವುದೂ ಇಲ್ಲ. ಕೆಲವು ಪ್ರಾಸಂಗಿಕ ಅಭಿಪ್ರಾಯಗಳು ಅಪ್ರಾಮಾಣಿಕವಲ್ಲದಿದ್ದರೂ ಸೌಹಾರ್ದರಹಿತವಾಗಿವೆಯೆಂದು ಧಾರಾಳವಾಗಿ ಹೇಳಬಹುದು. ಯಾವುದೊಂದು ವ್ಯಕ್ತಿಯ ಸಂಬಂಧವನ್ನು ಬೆಳೆಸಬೇಕಾದರೆ, ಅವನ ನಿಜ ಸ್ಥಿತಿ

ಯನ್ನು ತಿಳಿದುಕೊಂಡು ತಮ್ಮ ಸ್ವಭಾವಕ್ಕೆ ಸರಿಹೊಂದುವಂತಿದ್ದರೆ, ಅವರೊಡನೆ ಸೇರಬೇಕು. ಇಲ್ಲದಿದ್ದರೆ, ವೃಥಾ ದೂಷಣೆ ಮಾಡುವದರಲ್ಲಿ ಅರ್ಥವಿಲ್ಲ. ಶ್ರೀರಂಗರ ಸ್ವಭಾವ ವಿಲಕ್ಷಣವೆಂದು ಮುದ್ರೆಹಾಕುವಾಗ, ತಮ್ಮ ಸ್ವಭಾವದ ಚಿತ್ರವನ್ನು ಕಂಡಿರುವರೆ? ಅವರಂತೆಯೆ ಇವರ ಸ್ವಭಾವವೂ ಇದ್ದರೆ ವ್ಯತ್ಯಾಸವೇ ಇಲ್ಲ. ಸ್ವಭಾವ ಭಿನ್ನವಾಗಿದ್ದರೆ, ಅವರದು ವಿಲಕ್ಷಣ ವಾದರೆ, ಇವರದೂ ವಿಲಕ್ಷಣ. ಪ್ರತಿಯೊಬ್ಬನೂ ತಾನು ಒಳ್ಳೆಯವನೆಂದು ಲಕ್ಷ್ಯವಾಗಿಟ್ಟುಕೊಂಡು, ತನ್ನ ದೃಷ್ಟಿಗೆ ಸರಿದೋರದ ವಿಷಯ, ವ್ಯಕ್ತಿ, ವಸ್ತು, ಸಮನಾಗಿಲ್ಲವೆಂದರೆ ಅದು ದೃಷ್ಟಿದೋಷವೆನ್ನಬೇಕಾಗುವುದು. ಸಾಧಾರಣ ತರಗತಿಯ ಸಂಬಂಧ ಬರುವಲ್ಲಿ ಮಹತ್ವದ ಚರ್ಚೆಯೆ ಏಳದು. ವಿಶಿಷ್ಟರೀತಿಯ ಸಂಬಂಧ ಬಯಸುವವರು, ಆ ವ್ಯಕ್ತಿಯ ಜೀವನವನ್ನು ತಿಳಿದುಕೊಂಡು, ಅವನ ಸ್ವಭಾವದ ಪರಿಚಯ ಮಾಡಿಕೊಂಡರೆ ಇಬ್ಬರಿಗೂ ಹಿತ. ನನ್ನ ಅಭಿಪ್ರಾಯವನ್ನು ಕೊಟ್ಟರೆ ನನ್ನ ದೃಷ್ಟಿಕೋನದ ಪರಿಚಯವು ಆಗಬಹುದು.

ಸುಮಾರಾಗಿ ನನ್ನ ಸ್ವಭಾವವು ಶ್ರೀರಂಗರ ಸ್ವಭಾವಕ್ಕೆ ಸಮೀಪವರ್ತಿನಿ ಯಾಗಿದೆ. ೧೯೩೧ ರಲ್ಲಿ ನಾನು ಕಾಲೇಜದ ವಿದ್ಯಾರ್ಥಿಯಿದ್ದಾಗ ಅವರನ್ನು ಮೊದಲು ಕಂಡೆ. ೧೯೩೧ರಿಂದ ೩೭ನೆಯ ಇಸ್ವಿಯ ವರೆಗೆ ಸತತವಾಗಿ ೬ ವರುಷಗಳ ವರೆಗೆ ನಾನು ಅವರ ಮನೆಗೆ, ಕಾರಣಾಂತರದಿಂದ, ನನ್ನ ಮಿತ್ರರೊಂದಿಗೆ ಹೋಗುತ್ತಿದ್ದೆ. ಆ ಆರುವರುಷಗಳಲ್ಲಿ, ಒಂದು ದಿನವಾದರೂ ಅವರು 'ನಾನಾರು' ಎಂಬುದನ್ನು ಕೇಳಲಿಲ್ಲ. ನಾನಾದರೂ ನನ್ನ ಮಟ್ಟಿಗೆ. ಅದಕ್ಕೆ ಕಾರಣವೆಂದರೆ, ನಮ್ಮಿಬ್ಬರಲ್ಲಿ ನಡೆಯಬೇಕಾದ ಕಾರ್ಯವೆ ಇದ್ದಿಲ್ಲ. ಕಾರ್ಯವಿಲ್ಲದೆ ಅವರು ನನ್ನೊಡನೆ ಮಾತನಾಡಲಿಲ್ಲ. ಪ್ರೊಫೆಸರರಿದ್ದಾರೆಂದು ಅವರ ಪರಿಚಯ ಮಾಡಿಕೊಳ್ಳಬೇಕೆಂಬ ಹಂಬಲವು ನನ್ನಲ್ಲಿದ್ದಿಲ್ಲ. ಹೀಗಾಗಿ ನನಗೆ ಅವರ ಸ್ವಭಾವದಲ್ಲಿ ವ್ಯತ್ಯಯವೇನು ಕಾಣಲಿಲ್ಲ. ಅವರಂತೆಯೆ ನನ್ನ ಸ್ವಭಾವ. ಕಾರ್ಯವಿಲ್ಲದೆ ಮಾತಾಡಲು ಬೇಕಿಲ್ಲ.

ಆದರೆ, ಸಾಮಾನ್ಯವಾಗಿ, ಜನರು ಕೇವಲ ಕಾರ್ಯಕ್ಕಾಗಿ ಎರಡನೆ ಯವರ ಕಡೆಗೆ ಹೋಗುತ್ತಿರುವುದಿಲ್ಲ; ಅಥವಾ ನಮ್ಮ ಸಮಾಜದ ಜನತೆಗೆ,

' ಕಾರ್ಯಕ್ಕಾಗಿ ಬೆಟ್ಟ ' ಎಂಬುದರ ಅರಿವು ಇಲ್ಲವೆಂಬಂತೆ ತೋರುತ್ತದೆ. ಅದಕ್ಕಾಗಿ ಅನೇಕ ತಪ್ಪು ತಿಳಿವಳಿಕೆಗಳುಂಟಾಗುತ್ತವೆ.

ಮೇಲಿನ ಎಲ್ಲ ಅಭಿಪ್ರಾಯಗಳು ನನ್ನ ಮುಂದೆ ಬಂದಿವೆ. ಅವರ ಸ್ವಭಾವ ವಿಚಿತ್ರ, ವಿಲಕ್ಷಣ, ಎಂಬದನ್ನು ನಾನು ಬಲ್ಲೆ. ಮಾನವನ ಸ್ವಭಾವವು ವಿಚಿತ್ರವಾಗಲಿಕ್ಕೆ ಕಾರಣಗಳಿಲ್ಲದಿಲ್ಲ. ವಿಚಿತ್ರ ಸ್ವಭಾವದ ಕಾರಣಗಳು ತಿಳಿದಲ್ಲಿ, ಸೌಹಾರ್ದ ಸಹಾನುಭೂತಿಗಳು ಬೆಳೆದು, ಮಾನವನ ಬಗ್ಗೆ ಸರಿಯಾದ ಕಲ್ಪನೆಯುಂಟಾಗುವುದು. ಈ ಜಗತ್ತಿನಲ್ಲಿ ಹಾನಿಯುಂಟಾಗುವುದು, ಯಾವಾಗಲೂ ತಪ್ಪುತಿಳಿವಳಿಕೆಯಿಂದಲೆ, ಎಂಬುದು ಯಾರೂ ಒಪ್ಪತಕ್ಕ ಮಾತು. ಸಾಮಾಜಿಕ ಮಹತ್ವವನ್ನು ಪಡೆದವರ ಜೀವನದ ತಿರುಳನ್ನು ತಿಳಿದರೆ, ಅವರ ಸ್ವಭಾವದ ಪರಿಚಯವಾಗುವುದು. ಸ್ವಭಾವದ ಪರಿಚಯ ಮಾಡಿಕೊಳ್ಳುವುದೆಂದರೆ, ಆ ಸ್ವಭಾವವು ಮಾರ್ಪಡಲು ಅವಕಾಶವನ್ನು ಕಲ್ಪಿಸಿ ಕೊಟ್ಟ ವಾತಾವರಣವನ್ನು ತಿಳಿಯಬೇಕು. ಬಹುಮಟ್ಟಿಗೆ, ಮಾನವನು ವಾತಾವರಣದ ಕೂಸು.

ಶ್ರೀರಂಗರ ವಿಲಕ್ಷಣ—ವಿಚಿತ್ರ—ಸ್ವಭಾವದ ಕಾರಣವನ್ನು, ಅವರ ಜೀವನದಲ್ಲಿಯ ವಾತಾವರಣವು, ಸಂನಿವೇಶಗಳು, ತಿಳಿಸಬಹುದೆ ಎಂಬುದನ್ನು ನೋಡೋಣ.



*

*

## ಎರಡನೆಯ ಸ್ಥಿತಿ

# ರಂಗ

ವ್ಯಕ್ತಿಯು ವಾತಾವರಣದ ಕೂಸು. ತಾಯಿ-ತಂದೆಗಳ ಮಗುವೂ ಅಹುದು. ಇದೀಗ ನಡೆದಿರುವ ತಿಕ್ಕಾಟವೆ ಇದು. ಮಾನವನ ಘನತೆ ಹುಟ್ಟಿನಲ್ಲಿದೆಯೊ ಬೆಳೆದ ವಾತಾವರಣದಲ್ಲಿದೆಯೊ ? ಇಂತಹದೆ ಎಂದು ಎದೆತಟ್ಟಿ ಹೇಳಲು ಸಾಧ್ಯವಿಲ್ಲ. ಆದರೆ ಎರಡನ್ನೂ ಅಲ್ಲಗಳೆಯುವ ಸಾಮರ್ಥ್ಯವಂತೂ ಯಾರದೂ ಇಲ್ಲ. ಯಾವುದು ಎಷ್ಟೆಷ್ಟು ಅಂಶವೆಂಬುವುದು ಆ ವ್ಯಕ್ತಿಗಳ ಇತಿಹಾಸವನ್ನು ನೋಡಿಯೆ ತಿಳಿಯಬೇಕು. ಕ್ರಾಂತಿಕಾಲದಲ್ಲಿ ಹುಟ್ಟಿಬೆಳೆದ ಹುಡುಗರು ಕ್ರಾಂತಿಕಾರರಾದುದು ಇತಿಹಾಸಕ್ಕೆ ಹೊಸದಲ್ಲ. ನೆಪೋಲಿಯನ್ನನು ಹುಟ್ಟುವಮುನ್ನ ಅವನ ತಾಯಿಯು ಯುದ್ಧರಂಗದಲ್ಲಿ ಅಲೆಯುತ್ತಿದ್ದಳಂತೆ. ಆ ಯುದ್ಧವಾತಾವರಣದ ಪರಿಣಾಮವು ಮುಂಬಂದ ಮಗುವಿನ ಮೇಲೆ ಸಾಕಷ್ಟಾಯಿತು ಎಂದು ಚರಿತ್ರಕಾರರು ಅನ್ನುವರು. ಅಭಿಮನ್ಯುಶಿಶುವು ತಾಯ ಗರ್ಭದಲ್ಲಿಯೆ ಚಕ್ರವ್ಯೂಹದ ರಚನೆಯಲ್ಲಿ ಸೇರುವುದನ್ನು ತಾಯಿ ನಿದ್ದೆಹೋದಾಗ ಒಳಗಿಂದಲೆ ಕೇಳುತ್ತಿತ್ತು ಎಂದು ಪುರಾಣಗಳಲ್ಲಿ ಹೇಳಿದೆ. ಇವುಗಳಲ್ಲಿ ಆನುವಂಶೀಯ ತತ್ವದ ವಿವೇಚನೆಯ ವಿಚಾರವು ಕಂಡುಬಂದರೂ ವಾತಾವರಣದ ವೈಶಿಷ್ಟ್ಯವಿಲ್ಲದಿಲ್ಲ. ಕಟುಕರ ಮನೆಯಲ್ಲಿಯ ಗಿಳಿಯು ಸಾಧುವಿನ ಮನೆಯಲ್ಲಿಯ

ಗಿಳಿಯಿಂದ ಸ್ವಭಾವದಲ್ಲಿ ಬೇರೆಯಾಗಿದ್ದಿತು. ಅದು ವಾತಾವರಣದ ಪ್ರಭಾವವೆ. ಮಾನವನ ಮಟ್ಟು, ಆನುವಂಶೀಯ ಅಂಶದಿಂದಲೂ ವಾತಾವರಣದ ಪ್ರಭಾವದಿಂದಲೂ ನಿರ್ದಿಷ್ಟವಾಗುವುದು.

೧೯೦೦ರ ನಂತರ ಇಡಿ ಜಗತ್ತು ಬೇರೆ ಆವರಣವನ್ನು ಪಡೆಯಿತು. ಶತಮಾನ ಬದಲಾವಣೆಯು ನೂರೆಂಟು ಬದಲುಗಳನ್ನು ಕಂಡಿತು. ವಸಂತ ಕಾಲದಲ್ಲಿ ವರುಷದ ಚಿಗುರು ಮೂಡುವಂತೆ ಶತಮಾನದ ಮೊದಲ ದಶಕವು ಹೊಸತನ್ನು ಹೊಮ್ಮಿಸುವುದು. ಭಾರತದಲ್ಲಿ ಮತ್ತೊಂದು ಸಂಧಿಕಾಲ ಬಂದಿತ್ತು. ಭಾರತೀಯರು ಎಚ್ಚರಾಗುವ ಕಾಲವದು. ಬಂಗಾಲ ಪ್ರಾಂತವನ್ನು ವಿಭಾಗ ಮಾಡುವ ಯೋಜನೆಯು ಜನತೆಯ ಮನಸನ್ನೆ ಚುಚ್ಚಿತು. ಈ ಭೇದೋಪಾಯವು ಭಾರತದ ಜಿಗುಟನ್ನು ಕಡಿಮೆಮಾಡಬಹುದೆಂದು; ಆದರೆ ಮೊದಲೆ ಎಚ್ಚತ್ತಿದ್ದ ಹುಲಿಯನ್ನು ಚುಚ್ಚಿ ಕೆರಳಿದಂತೆಯಾಯಿತು. ಕೇವಲ ಬಂಗಾಲಕ್ಕೆಂದು ಮಿತವಾಗಲಿಲ್ಲ ಆ ಎಚ್ಚರಿಕೆ. ಅಲ್ಲಿ ಭುಗಿಲೆಂದ ಬೆಳಕು ಎಲ್ಲೆಡೆಯಲ್ಲಿಯೂ ಹಬ್ಬಿತು. ತಮ್ಮ ದೇಶಕ್ಕಾಗಿ ಒಟ್ಟುಗೂಡಬೇಕು ಎಂದು ಜನತೆಯ ಮನಸ್ಸಿನಲ್ಲಿ ಸುಳಿಯಲಾಂಭಿಸಿತು.

ಸಂಕ್ರಾಂತಿ ಕಾಲದಲ್ಲಿ ಹುಡುಗರು ಅರಿವಿಲ್ಲದೆ ಅನೇಕ ವಿಚಾರಗಳನ್ನು ಒಳಪಡಿಸಿಕೊಂಡಿರುತ್ತಾರೆ. ಯುದ್ಧ ಕಾಲದಲ್ಲಿ ಹಿರಿಯರು ಯುದ್ಧದ ವಾತಾವರಣದ ಬಗೆಗೆ ಉನ್ಮಾದಿತರಾಗಿ ಮಾತನಾಡುವಾಗ ಆ ಮಾತು ಕಿರಿಯರ ಮನದಲ್ಲಿ ಮೂಡದಿರುವುದೆ ? ಹಿರಿಯರು ಹೊರಗೆ ಹೋದಾಗ ಮಗುವು ಮನೆಯಲ್ಲಿ ಹಿರಿಯರ ನಟನೆ ಮಾಡುತ್ತಿರುವುದು ಎಲ್ಲರಿಗೂ ಗೊತ್ತಿದ್ದ ವಿಷಯ. ಆದಕ್ಕೆ ಅದರಲ್ಲಿ ಏನಾದರೂ ತಿಳಿಯುವುದೆಂದಲ್ಲ. ಹಿರಿಯರು ಮಾಡುತ್ತಾರೆಂದು ತಾನು ಮಾಡುವುದು. ತಾನು ಮಾಡಲು ತೊಡಗಿದ ಮೇಲೆ ಅದನ್ನು ತನ್ನದನ್ನಾಗಿ ಮಾಡಿಕೊಳ್ಳುವುದು. ಅದು ಎಳೆಯ ಮಗುವಿನ ಸಂಗ್ರಹ ಶಕ್ತಿಯ ದ್ಯೋತಕ. ಸುತ್ತಲಿನ ವಸ್ತುಗಳೆಲ್ಲವೂ ತನ್ನವಾಗಬೇಕೆಂಬ ಹಂಬಲದಂತೆಯೆ, ಮನಸ್ಸು ವಾತಾವರಣದ ಪ್ರಭಾವದಿಂದ ಪದರುಗಟ್ಟುತ್ತಿರುವುದು ಆ ಮಗುವು ಬೆಳೆದ ಮೇಲೆ ತಿಳಿದು ಬರುವುದು.

೧೯೦೪ನೆಯ ಇಸ್ವಿಯ ಸಪ್ಟಂಬರ ತಿಂಗಳ ೨೫ನೆಯ ತಾರೀಖು ಸಾಯಂಕಾಲ. ಮೋಡ ಕವಿದುದರಿಂದ ಎಲ್ಲೆಲ್ಲಿಯೂ ಕತ್ತಲು. ಜನರು ಲಗು

ಬಗೆಯಿಂದ ತಮ್ಮ ತಮ್ಮ ಮನೆಗೆ ಸಾಗಿದ್ದರು. ಅಗರಖೇಡವು ಚಿಕ್ಕದಿದ್ದರೂ ಆ ಅಕಸ್ಮಿಕ ಮಳೆಯ ಯೋಗವು ಊರಲ್ಲಿ ಹುಯಿಲೆಬ್ಬಿಸಿತ್ತು. ಒಡನೆಯೆ ಬಂತು ಬಿರುಗಾಳಿ. ಕಿಡಿಕಿ ಬಾಗಿಲುಗಳು ಪಟಪಟ ಬಡೆದುಕೊಂಡವು. ದೊಡ್ಡ ದೊಡ್ಡ ಹನಿಗಳು ಬೀಳಲಾರಂಭಿಸಿದವು. ಮಳೆ ಬಂದೆಬಿಟ್ಟಿತು. ಮಳೆಯ ರಭಸವೂ ಗಾಳಿಯ ವೇಗವೂ ಹೆಚ್ಚಾಗಿ, ಆಕಾಶದಲ್ಲಿಯ ಮೋಡಗಳು ತಾಕಲಾಡಿ, ಗುಡುಗು ಮಿಂಚು; ಸಿಡಿಲಿನ ಭಯವೂ ಒಮ್ಮೊಮ್ಮೆ ಬರುತ್ತಿತ್ತು. ಸಂಜೆಯ ಮಳೆಯು 'ಬೆಳತನಕ ಹೊಡೆಯುವುದು' ಎಂದು ಜನರು ಮಾತನಾಡುತ್ತಿದ್ದರು.

ಮಳೆಬರುವ ಮುಂಚೆಯೆ ಮನೆಗೆ ಬರಬೇಕೆಂದರೆ ವಾಸೂಮಾಸ್ತರರಿಗೆ ಸಾಧ್ಯವಾಗಲಿಲ್ಲ. ಹನಿಯುದುರಿದ ಕೂಡಲೆ ಅಲ್ಲಿಯೆ ಸಮೀಪದ ಗೆಳೆಯರ ಮನೆ ಹೊಕ್ಕರು, ಮಳೆ ಬೇಗನೆ ನಿಲ್ಲಬಹುದೆಂದು. ಆದರೆ ಸೆಳಕಿನ ಮೇಲೆ ಸೆಳಕು ಬರತೊಡಗಿತು ಮಳೆ. ವಾಸೂಮಾಸ್ತರರು ತಮ್ಮ ಗೆಳೆಯನಲ್ಲಿಯೆ ಮಾತನಾಡುತ್ತ ಕುಳಿತುಬಿಟ್ಟರು. ಊಟಕ್ಕೆ ಆಗ್ರಹಮಾಡಿದರು. ಅಲ್ಲಿಯೆ ಉಂಡರು. ಹಳ್ಳಿಯೂರಿನ ಚಟ, ಅನಿಯಮಿತ ಹರಟೆಹೊಡೆಯುವುದು; ವೇಳೆಯ ಪರಿವೆಯೆ ಇಲ್ಲ.

ವಾಸೂಮಾಸ್ತರರ ಹೆಂಡತಿ ರಮಾಬಾಯಿ ದಿನತುಂಬಿದ ಬಸುರಿ. ಅಂದಿನ ಮುಂಜಾವಿನಿಂದಲೂ ಅವರಿಗೆ ಕಳೆಬರತೊಡಗಿದ್ದವು. ಚೊಚ್ಚಲು ಬಸುರಿಯಾದುದರಿಂದ ಯಾರ ಮುಂದೆಯೂ ಹೇಳಿದ್ದಿಲ್ಲ. ಬರಬರುತ್ತ ಹೆರಿಗೆಯ ಸಂವೇದನವು ತೀವ್ರವಾಯಿತು. ಹೊರಗೆ, ಗುಡುಗು-ಮಿಂಚು, ಮಳೆ-ಗಾಳಿ. ಒಳಗೆ, ಹೆರಿಗೆಯ ವೇದನೆ. ವಾಸೂಮಾಸ್ತರರು ಮನೆಯಲ್ಲಿಲ್ಲ. ಚಿಕ್ಕವನಾದ ಕೃಷ್ಣನು—ಮಾಸ್ತರರ ತಮ್ಮನು— ಏನೂ ಮಾಡಲರಿಯನು. ರಾತ್ರೆ ಏರುತ್ತಬಂದಿತು. ಹತ್ತಾಯಿತು; ಹನ್ನೊಂದಾಯಿತು; ಹನ್ನೆರಡು ಹೊಡೆದು ಹೋಯಿತು. ಒಳ್ಳೆಯ ಸಂಧಿಕಾಲ. ಮಳೆಯು ಒಮ್ಮೆಲೆ ಹೆಚ್ಚಾಯಿತು. ಸಿಡಿಲಿನಾರ್ಭಟವು ಕೇಳತೊಡಗಿತು. ಒಂದು ಗಂಟೆಯ ಸುಮಾರು, ರಮಾಬಾಯಿಯು ಗಂಡು ಮಗುವನ್ನು ಹೆತ್ತಳು. ಮನೆಯಲ್ಲಿ ಎಲ್ಲರಿಗೂ ಆನಂದ. ಮನೆಯಲ್ಲಿ ಚಿಂತೆಯ ಉದ್ರೇಕಗಳು ಕಡಮೆಯಾಗಿ ಆನಂದವು ಸುಳಿದಂತೆ ಹೊರಗೆ ಮಳೆಯ ರಭಸವಾದರೂ ಕಡಿಮೆಯಾಗಿ ತಣ್ಣನ್ನ ಸುಳಿಗಾಳಿ

ಸೂಸತೊಡಗಿತು. ಮಳೆಯು ಜಗತ್ತಿಗೆ ತಂಪು ತಂದಿತು. ಮಗುವು ಮನೆತನಕ್ಕೆ ತನುವು ತಂದಿತು. ಎಲ್ಲೆಲ್ಲಿಯೂ ಆನಂದ. ಚೊಚ್ಚಲು ಗಂಡುಮಗುವಾದರೆ ಇಡಿ ಮನೆತನಕ್ಕೆ ಉತ್ಸಾಹ.

ಮಗುವು ಆಟವಾಡಿಕೊಂಡು ಒಳ್ಳೇ ನಗುಮೊಗದಿಂದಿದ್ದುದರಿಂದಲೊ ಮಗುವಿಗೆ 'ರಂಗ'ನೆಂದು ಹೆಸರಿಟ್ಟರು.

ವಾಸೂಮಾಸ್ತರರು ಆಗ ಅಗರಖೇಡದಲ್ಲಿ ಹೆಡ್ ಮಾಸ್ತರರಿದ್ದರು. ಅಗರಖೇಡವು ಒಂದು ದೊಡ್ಡ ಹಳ್ಳಿ. ವಿಜಯಪುರ ಜಿಲ್ಲೆಯ ಇಂಡಿ ತಾಲೂಕಿನ ಒಂದು ಗ್ರಾಮ. ವಿಜಯಪುರದಿಂದ ಈಶಾನ್ಯಕ್ಕೆ ಸುಮಾರು ೪೦ ಮೈಲುಗಳ ಮೇಲೆ ಇದೆ. ಭೂಮಿ ಬೈಲಾದುದು. ಗಿಡಗಳು ಕಡಿಮೆ. ದೂರದಲ್ಲಿ ಅಲ್ಲೊಂದು ಇಲ್ಲೊಂದು ಗುಡ್ಡಗಳು; ದಿನ್ನಿಗಳೆಂದರೂ ಸಲ್ಲುವುದು. ಆ ಗ್ರಾಮದ ಒಂದು ಬದಿಗೆ ಭೀಮಾನದಿಯು ಹರಿಯುತ್ತದೆ. ನದಿಯು ನೀರು ಪೂರೈಸುವುದರಿಂದ ಪ್ರದೇಶವು ಫಲವತ್ತಾದುದು. ಕರಿನಾಡ ಕರಿಯಭೂಮಿ. ಜನವಸತಿ ಚನ್ನಾಗಿದೆ. ಆ ಊರಲ್ಲಿ ಶಂಕರಲಿಂಗ, ಭೈರಪ್ಪ ಎಂಬೆರಡು ಹಳೆಯ ಗುಡಿಗಳಿವೆ. ಭೈರಪ್ಪನ ಗುಡಿಯು ಜಕ್ಕಣನ ಕಟ್ಟೆಂದು ಪ್ರತೀತಿಯಿದೆ. ಆ ಊರು ಆದ್ಯಮನೆತನದ ಆಚಾರ್ಯರಿಗೆ ಅಗ್ರಹಾರವಾಗಿದೆ.

ವಾಸೂಮಾಸ್ತರರು ಆದ್ಯಮನೆತನದವರೆ. ಆದ್ಯಮನೆತನವು ಒಳ್ಳೆ ಪುರಾತನದ್ದು. ಈ 'ಆದ್ಯ'ವೆಂಬ ಹೆಸರಿಗೂ ಒಂದು ಇತಿಹಾಸವಿದೆ. ಮೊದಲು ಇದು ನಾಯಕರ ಮನೆತನ. ಸುಮಾರು ೧೪ನೆಯ ಶತಮಾನದ ಕೊನೆಗೆ ಶೇಷನಾಯಕರೆಂಬುವವರು ಆಗಿ ಹೋದರು. ಅವರಿಗೆ ವರದಾಚಾರ್ಯರೆಂಬ ಒಬ್ಬ ಮಕ್ಕಳಿದ್ದರು. ಇವರು ಉತ್ತರಾದಿಮಠದ ಶ್ರೀ ರಘುನಾಥತೀರ್ಥರಲ್ಲಿ ಓದಿ ವಿಶೇಷ ಪಾಂಡಿತ್ಯವನ್ನು ಪಡೆದರು. ಒಳ್ಳೆ ಬುದ್ಧಿಶಾಲಿ ಎಂದು ಹೆಸರು ಪಡೆದರು. ಒಮ್ಮೆ ಮಠದಲ್ಲಿ ಶಾಸ್ತ್ರಾರ್ಥ ವಿಚಾರ ನಡೆಯಿತಂತೆ. ಅಲ್ಲಿ ವರದಾಚಾರ್ಯರ ವಾಗ್ಲಹರಿಯನ್ನು ಕಂಡು ಸ್ವಾಮಿಗಳು ಬೆರಗಾದರು. ಆಚಾರ್ಯರು ಮಠಕ್ಕೆ ಮನ್ನಣೆ ತರುವಂತಹರೆಂದು ತಿಳಿದು ಮಠದಲ್ಲಿಯ ಮೊದಲಸ್ಥಾನವನ್ನು ಅವರಿಗೆ ಕೊಟ್ಟರು. ಅಂದಿನಿಂದ ಇವರ ಮನೆತನಕ್ಕೆ 'ಆದ್ಯ' ಪದವು ಪ್ರಾಪ್ತವಾಯಿತು. ಆ ದಿನ ಮೊದಲ್ಗೊಂಡು ಇಂದಿಗೂ ಈ ಮನೆತನದವರಿಗೆ ತೀರ್ಥಪ್ರಸಾದ ಮೊದಲು ದೊರೆಯುತ್ತವೆ.

ಮನೆತನವು ಪಾಂಡಿತ್ಯದಲ್ಲಿ ಹೆಸರು ಪಡೆದುದು; ಬುದ್ಧಿಶಕ್ತಿಯೆ ಇವರ ಮೂಲಧನ. ಉಚ್ಚಬುದ್ಧಿಯ ಮೂಲಕ ಆತ್ಮಗೌರವ ಪ್ರವೃತ್ತಿ. ಯಾರಿಗೂ 'ಜೀ' ಎಂದವರಲ್ಲ. ವಾದಗಳಲ್ಲಿ 'ಮೇಲುಗೈ' ಇವರದೆ. ಈ ಮನೆತನದಲ್ಲಿ ನರಹರಾಚಾರ್ಯರೆಂಬುವವರು, ಭಾಗವತ, ವಿಷ್ಣು ಪುರಾಣಗಳಿಗೆ ಟಿಪ್ಪಣೆಗಳನ್ನೂ, 'ಸ್ಮೃತಿಕೌಸ್ತುಭ' ವೆಂಬ ಗ್ರಂಥವನ್ನೂ ಬರೆದಿದ್ದಾರೆ.

ಬುದ್ಧಿ ಶಕ್ತಿಯಿಂದಲೆ ಈ ಮನೆತನದವರು ಮೂರು ನಾಲ್ಕು ಹಳ್ಳಿಯ ಜಾಗೀರನ್ನು ಪಡೆದರು. ವರದಾಚಾರ್ಯರೆಂಬುವರು ಸಾತಾರೆಯ ಶಾಹು ಛತ್ರಪತಿಯ ಸಭೆಗೆ ಹೋಗಿದ್ದರು. ಅಲ್ಲಿದ್ದ 'ವಜ್ರಟಂಕ'ರೆಂಬ ಪ್ರಸಿದ್ಧ ಪಂಡಿತರನ್ನು ಸೋಲಿಸಿ, ಛತ್ರಪತಿಯಿಂದ ಮನ್ನಣೆಹೊಂದಿದರು. ಆಗ ಬಹುಮಾನವಾಗಿ ಭೂಯಾರ, ಪಡಗಾನೂರ ಗ್ರಾಮಗಳನ್ನು ಸಂಪಾದಿಸಿದರೆಂದು ಗೊತ್ತಾಗುತ್ತದೆ. ಅಗರಖೇಡ ಗ್ರಾಮವು ಕೃಷ್ಣದ್ವೈಪಾಯನಾಚಾರ್ಯರೆಂಬವರಿಗೆ, ಅವರ ಪಾಂಡಿತ್ಯಕ್ಕಾಗಿ, ಶ್ರೀಮಂತ ಬಾಳಾಜಿ ಬಾಜೀರಾವ ಉರ್ಫ ನಾನಾಸಾಹೇಬ ಪೇಶವೆ ಅವರಿಂದ ಉಂಬಳಿಯಾಗಿ ದೊರಕಿತು.

ಇತ್ತೀಚೆಗೆ ಈ ಮನೆತನದಲ್ಲಿ ಕ್ರಾಂತಿಕಾರರು ಜನ್ಮತಾಳಿದ್ದಾರೆ. ಇಂತಹ ಧಾರ್ಮಿಕ ಮನೆತನದಲ್ಲಿಯೆ ಸಮಾಜ ಸುಧಾರಣೆಯ ಪಾಠವನ್ನು ಹಾಕಿದವರು ಶೇಷಾಚಾರ್ಯ ಆದ್ಯರೆಂಬುವರು. ಇವರು ವಿಧವಾ ವಿವಾಹ ಮಾಡಿಕೊಂಡಿದ್ದರು. ಇಂದು ವಿಧವಾ ವಿವಾಹವು ಸಹಜವಾಗಿ ಕಂಡರೂ ಅಂದು ಅವರ ಕಾಲಕ್ಕೆ ಅದೊಂದು ಕ್ರಾಂತಿಯಂತಾಯಿತು. ಅವರೆ 'ಸುವದನಾ ಭಾಸ್ಕರ' ವೆಂಬ ಗ್ರಂಥವನ್ನೊಂದು ಬರೆದಿರುವರು.

ವಾಸೂ ಮಾಸ್ತರರ ಪೂರ್ಣ ಹೆಸರು ವಾಸುದೇವಾಚಾರ್ಯ ಭಾವಾಚಾರ್ಯ ಆದ್ಯ ಎಂದು. ಇತ್ತೀಚೆಗೆ ಕೆಲವರು 'ಆದ್ಯ' ಎಂಬ ಅಡ್ಡ ಹೆಸರಿನ ಬದಲು 'ಜಾಗಿರದಾರ' ಎಂಬ ಉದ್ದ ಹೆಸರನ್ನು ಇಟ್ಟುಕೊಂಡಿದ್ದಾರೆ.

ರಂಗನ ಹುಡುಗತನವೆಲ್ಲವೂ ಅಗರಖೇಡದಲ್ಲಿಯೆ; ಚಿಕ್ಕಂದಿನಲ್ಲಿ ಚಕ್ಕಂದವಾಗಿದ್ದ. ತಂದೆ ಶಾಲೆಯ ಹೆಡ್‌ಮಾಸ್ತರರಿದ್ದುದರಿಂದಲೂ ಮಾಸ್ತರರ ಆಸಕ್ತಿ ಮನೆಯ ಮಟ್ಟಿಗೆ ಕಡಿಮೆಯಿದ್ದುದರಿಂದಲೂ ರಂಗನು ಚಿಕ್ಕನದಲ್ಲಿ ತಾಯಿಯ ನಿಕಟ ಸಹವಾಸವನ್ನು ಪಡೆದನು. ರಂಗನ ಮೇಲೆ ತಾಯಿಯ ಪ್ರೀತಿ ಬಹಳ. ರಂಗನಿಗೆ ತಂದೆಯ ಸಲುಗೆ ಕಡಿಮೆ.

ರಮಾಬಾಯಿಯವರದು ಸ್ವಲ್ಪ ಹಟದ ಸ್ವಭಾವ. ತಾಯಿಯ ಸಹ-ವಾಸದಿಂದ ರಂಗನಲ್ಲಿ ಆ ಹಟದ ಅಂಶವು ಬರತೊಡಗಿತು. ತೀರ ಚಿಕ್ಕ ವಯಸ್ಸಿನಲ್ಲಿಯೇ ಒಂದು ಸಂಗತಿ ನಡೆಯಿತು. ಯಾವದೋ ಒಂದು ವಸ್ತುವಿಗಾಗಿ ರಂಗ ಹಟಹಿಡಿದು ಅಳಲು ತೊಡಗಿದ; ತಾಯಿಗೆ ಅದು ಸರಿಬರಲಿಲ್ಲ. ಏನು ಉಪಾಯ ಮಾಡಿದರೂ ಅವನ ಮನ ತಣಿಯಲಿಲ್ಲ. ಕೊನೆಗೆ ಎರಡು ಏಟು ಕೊಟ್ಟು ಬೆದರಿಸಿದರು. 'ನೀನು ಸುಮ್ಮನಾಗದಿದ್ದರೆ ನಾನು ನಿನ್ನ ಸಂಗಡ ಮಾತನಾಡುವದೇ ಇಲ್ಲ.' ಹೀಗೆಂದವರು ಮಾತನಾಡುವದನ್ನು ಬಿಟ್ಟರು. ರಂಗನೂ ಹಟದಿಂದ ತಾಯಿಯನ್ನು ಮಾತಾಡಿಸಲೇ ಇಲ್ಲ. ಒಂದಲ್ಲ, ಎರಡಲ್ಲ; ಮೂರು ದಿನಗಳು ಸಂದಿದವು. ಇಬ್ಬರ ನಡುವೆ ಮಾತುಗಳೆ ಇಲ್ಲ. ಒಂದೇ ಮನೆಯಲ್ಲಿ ಇರುವದು; ಊಟಕ್ಕೆ ಬಡಿಸುವವಳು ತಾಯಿ, ಉಣ್ಣುವವ ರಂಗ; ಕೊನೆಗೆ ತಾಯಿಯ ಕರಳು ಕರಗಿತು. ರಂಗನೇನು ಸರಿಯಲಿಲ್ಲ. ನಾಲ್ಕನೆಯ ದಿನ ಮೊದಲಿನಂತೆ ಮಾತುಕತೆ ನಡೆಯಿತು. ರಂಗನ ಮೋರೆಯ ಮೇಲೆ ಗೆಲುವು ಕಾಣುತ್ತಿತ್ತು. ತಾಯಿ ಸೋತಂತಿದ್ದರೂ ಮಗನ ಗೆಲುವಿನ ಮುಖವನ್ನು ನೋಡಿ ಆನಂದಬಟ್ಟಳು.

ಪ್ರಾಥಮಿಕ ವಿದ್ಯಾಭ್ಯಾಸಕ್ಕಾಗಿ ಅಗರಖೇಡದ ಶಾಲೆಯಲ್ಲಿಯೇ ರಂಗನು ಸೇರಿದ. ಶಾಲೆ ಸೇರುವ ಮುನ್ನವೆ ಅಕ್ಷರಗಳು ಬರದೆ ಇದ್ದರೂ ಅನೇಕ ಶ್ಲೋಕ-ಪದ್ಯಗಳು ಮನೆಯಲ್ಲಿಯ ಸಂಸ್ಕಾರದ ಮೂಲಕ ಅವನ ನಾಲಗೆಯ ತುದಿಯ ಮೇಲೆ ಕುಣಿಯುತ್ತಿದ್ದವು. ತಂದೆ ವಾಸೂಮಾಸ್ತರರು ಆ ಶಾಲೆಯ ಹೆಡ್‌ಮಾಸ್ತರರು; ಅವರ ಕಕ್ಕನಮಗ ಶೀನಪ್ಪ ಅದೆ ಶಾಲೆಯಲ್ಲಿ ಮಾಸ್ತರರು. ರಾಘವಾಚಾರ್ಯರೆಂಬವರು ಇನ್ನೊಬ್ಬರು. ತಂದೆಯ ಸಹವಾಸಕ್ಕಿಂತ ಹೆಚ್ಚು ನಿಕಟ ಸಹವಾಸವು ರಂಗನಿಗೆ ಆ ಉಳಿದ ಮಾಸ್ತರರದಾಗಿತ್ತು.

ಏನು ಕೆಲಸ ಮಾಡಿದರೂ ಮುಂದು ಹರಿದು ಹೋಗುವದೆ ಅವನ ಸ್ವಭಾವ. ತಾನೊಬ್ಬ ಮುಂದಾಳಾಗಬೇಕು, ತನ್ನ ಹಿಂದೆ ಹಿಂಬಾಲಿಸುವ ಅನುಯಾಯಿಗಳು ಅನೇಕರಿರಬೇಕು, ಎಂಬುದು ಅವನ ಮನೀಷೆ. ಎಂತಲೇ ಆಟವಾಡುವಾಗ ತಾನೇ ಮುಂದು ಬಿದ್ದು ಹೋಗುವನು. ಯಾರ ಕೈಯಿಂದಲೂ ಆಗದ ಕೆಲಸವನ್ನು ತಾನು ಮಾಡಿ ತೋರಿಸಬೇಕೆಂಬ ಹಂಬಲು. ಒಮ್ಮೆ ಒಂದು ಮೋಜಿನ ಸಂಗತಿ ನಡೆಯಿತು: ರಂಗ ಶಿವಾಜಿಯ ಆಟವನ್ನು ಹೂಡಿದ್ದ.

ಶಿವಾಜಿಯ ಪಾತ್ರ ಅವನದೆ. ಶಾಲೆಯ ಉಳಿದ ಹುಡುಗರು ಇವನ ಅನುಯಾಯಿಗಳು. ಹೀಗೆ ಅವರನ್ನು ಬೆನ್ನು ಹಚ್ಚಿಕೊಂಡು ಮುಂದಾಳುವಿನಂತೆ ಮುಂದೆ ಸಾಗಿದ. ಶಿವಾಜಿಯ ವೇಷವನ್ನು ಧರಿಸಿದ ಮೇಲೆ ಯುದ್ಧ ಮಾಡದಿದ್ದರಾಗುತ್ತದೆಯೆ? ಹೊನ್ನವರಿ ಗಿಡದಿಂದ ಬಿಲ್ಲನ್ನು ಮಾಡಿದ; ಜೋಳದ ಉಣಚಿಯೆ ಅವನಿಗಾಗಿ ಸಿದ್ಧವಾದ ಬಾಣ. ಕೈಯಲ್ಲಿ ಬಾಣ, ಬಿಲ್ಲು ಬಂದ ಮೇಲೆ ತಡವೇತರದು ? ವೀರಾವೇಶ ತುಂಬಿತು. ಎದುರುನಿಂತ ಯಾವನೊಬ್ಬನನ್ನು ಎದುರಾಳಿಯೆಂದು ತಿಳಿದುಕೊಂಡು ಹೆದೆಯೇರಿಸಿ ಬಾಣಬಿಟ್ಟ. ಇಂಥ ಸಮಯದಲ್ಲಿ ಗುರಿ ತಪ್ಪುವದುಂಟೆ? ಜೋಳದ ದಂಟಿನತುದಿ ಆ ಎದುರಿನ ಹುಡುಗನಿಗೆ ತಾಗಿ ಆಗ ಗಾಯ ಚಿಕ್ಕದಾಗಿದ್ದರೂ ಅದು ನಂಜೇರಿತಂತೆ. ಗುಣವಾಗಬೇಕಾದರೆ ದಿನ ಕಳೆದವು.

ಮನಸ್ಸಿನಲ್ಲಿ ಬಂದ ವಿಷಯವನ್ನು ಮಾಡಿ ಬಿಡುವದು ಆಗಿನ ಅವನ ಸ್ವಭಾವವಾಗಿತ್ತು– ಅದರಿಂದ ಮುಂದೆ ಒದಗಿಬರುವ ಹಾನಿಯ ಕಡೆಗೆ ಲಕ್ಷ್ಯವಿಲ್ಲ. ಮನಸ್ಸಿನಲ್ಲಿ ಬಂದುದನ್ನು ಮಾಡುವದರಲ್ಲಿಯೆ ಅವನಿಗೆ ಆನಂದ. ಪರಿಣಾಮವು ಚನ್ನಾದರೆ ಆನಂದ ಹೆಚ್ಚು. ದುಃಖಾಂತವಾದರೆ ಸಹನಶಕ್ತಿ ಸಹಾಯಕ್ಕೆ ಬರುವದು. ಕನ್ನಡ ನಾಲ್ಕನೆ ಇಯತ್ತೆ ಇರಬಹುದು. ಆಗ ಹುಡುಗರೆಲ್ಲರೂ ಕೂಡಿ ಹೊಸದಾಗಿ ಕಟ್ಟುತ್ತಲಿದ್ದ ಅವರ ಶಾಲೆಯ ಕಡೆಗೆ ಹೊರಟರು. ಮನೆ ಕಟ್ಟುವದನ್ನು ಅನೇಕರು ನೋಡಿರಬಹುದು. ಬಿದಿರ ಮಂಚಿಕೆಯನ್ನು ಮಾಡಿರುತ್ತಾರೆ. ಅಲ್ಲಿ ಹಾಗೆ ಮಾಡಿದ ಮಂಚಿಕೆಯಿಂದ–ಸುಮಾರು ಹದಿನೈದು ಫೂಟು ಎತ್ತರದಿಂದ–ಜಿಗಿಯಬೇಕೆಂಬ ಹುರುಪು ಬಂತು ರಂಗನಿಗೆ. ಆ ಮಂಚಿಕೆಯ ಕೆಳಗೆ ಒಂದು ಹಗ್ಗ ನೇತಾಡುತ್ತಿತ್ತು. ಆ ಹಗ್ಗದ ಒಂದು ತುದಿ ಕಟ್ಟುತ್ತಿರುವ ಗೋಡೆಯ ಮೇಲೆ ಇತ್ತು. ಆ ತುದಿಯ ಮೇಲೆ ಅದು ಬೀಳಬಾರದೆಂದು ಭಾರವಾದ ಕಲ್ಲನ್ನಿಟ್ಟಿದ್ದರು. ಅದರ ಅರಿವು ರಂಗನಿಗಿಲ್ಲ. ಅವನ ಸಂಗಡಿಗರಲ್ಲಿ ಕೆಲವರು ಜಿಗಿದರು. ರಂಗನ ಸರತಿಬಂತು. ತನ್ನ ಕೈಯಿಂದ ಆಗಲಿಲ್ಲ ಎಂದೆನಿಸಿಕೊಳ್ಳುವಂಥ ಅಪಮಾನ ತನ್ನದಾಗಬಾರದೆಂದು ಮಂಚಿಕೆಯ ಮೇಲಿಂದ ಕೆಳಗೆ ಜಿಗಿದ. ಜಿಗಿಯುವಾಗ ಸ್ವಲ್ಪ ಜೋಲಿ ತಪ್ಪಿತು. ಕೆಳಗೆ ನೇತಾಡುವ ಹಗ್ಗ ಕಾಲಿಗೆ ತೊಡಕಿತು. ಮೇಲಿನಕಲ್ಲು ರಂಗನ ತಲೆಯ ಮೇಲೆ ಬಿತ್ತು. ಸುತ್ತಲಿನ ಹುಡುಗರು ಏನು ಮಾಡಬೇಕೆಂದು

ತಿಳಿಯದವರಾದರು. ಮೇಲಿಂದ ಕೆಳಗೆ ಜಿಗಿದಿರುವೆನೆಂಬ ಹುಮ್ಮಸ್ಸು ಒಂದೆಡೆ; ಕಲ್ಲು ಬಿದ್ದನೋವು ಮತ್ತೊಂದೆಡೆ. ಆದರೆ ಸಹಪಾಠಿಗಳ ಮುಂದೆ ಅಳುವುದುಂಟೆ? ಹಟವಾದಿ ರಂಗನಿಗೆ ಅದು ಹೇಯವೆನಿಸಿತು. ಅವನು ಹಾಗೆಯೆ ಗಾಯವಾದ ಸ್ಥಾನವನ್ನು ಗಟ್ಟಿಯಾಗಿ ಹಿಡಿದುಕೊಂಡು ಊರ ಹೊರಗಿನ ತಮ್ಮ ತಳವಾರನ ಮನೆಯಲ್ಲಿಯ ರಂಗೋಲಿಯ ಹಿಟ್ಟನ್ನು ತುಂಬಿ ಕೊಂಡ. ಗಾಯ ಮಾಯುವ ವರೆಗೆ ಮನೆಯ ಜನರಿಗೆ ಇದರ ಸುಳಿವು ಕೂಡ ಇಲ್ಲ. ಸಹನಶಕ್ತಿಯ ಪ್ರಥಮ ಪ್ರದರ್ಶನವಿದು. ಇದು ತಾಯಿಯ ಸ್ವಭಾವದ ಪ್ರಭಾವ.

ಮತ್ತೊಮ್ಮೆ ಚಕ್ಕಡಿಯ ಬುಡದಲ್ಲಿ ಮಲಗಿಕೊಂಡಾಗ ಚಕ್ಕಡಿಯ ಓಟಿಯ ಮಧ್ಯದಲ್ಲಿಯ ಮೊಳೆಯೊಂದು ಬಲವಾಗಿ ಚುಚ್ಚಿತು. ಕಾಲಿನಿಂದ ರಕ್ತ ಹರಿದರೂ ನದಿಗೆ ಹೋಗಿ ತೊಳೆದುಕೊಂಡನೆ ಹೊರತು ಹೆರವರ ಮುಂದೆ ಹೇಳಲಿಲ್ಲ. ಎರಡನೆಯವರ ದಯೆಯ ದೃಷ್ಟಿ ಅವನಿಗೆ ಬೇಕಿಲ್ಲ. ತನಗಾಗಿ ಬೇಕಿದ್ದ ಶಕ್ತಿ ತನ್ನಲ್ಲಿದೆ ಎಂಬುದೆ ಆದರ ದ್ಯೋತಕ. ಆ ಶಕ್ತಿಯ ಅರಿವೂ ಅವನಿಗಿದೆ.

ಎಚ್ಚರಿದ್ದಾಗ ಮಾತ್ರ ತನ್ನ ಎಲ್ಲ ಶಕ್ತಿಯನ್ನು ಸಂಗ್ರಹಮಾಡಿಕೊಳ್ಳ ಬಲ್ಲವನಾಗಿದ್ದ. ಆದರೆ ಒಮ್ಮೆ ನಿದ್ರೆ ಬಂದಿತೆಂದರೆ ಅವನನ್ನು ಕಾಯು ವದಕ್ಕೆ ಎರಡನೆಯವರೆ ಬೇಕು. ಅವನದೊಂದು ವಿಚಿತ್ರಚಟ. ರಾತ್ರಿಯಲ್ಲಿ ಮಲಗಿದಾಗ ಒಮ್ಮೆಲೆ ಎದ್ದು ಹಾಸಿಗೆಯನ್ನು ಸುತ್ತಿಕೊಂಡು, ಹೆಗಲ ಮೇಲೆ ಹೊತ್ತುಕೊಂಡು ಬಾಗಿಲು ತೆಗೆದು ಹೊರಗೆ ಹೋಗಿಬಿಡುತ್ತಿದ್ದ. ಹೊರ ಗಿನ ತಂಗಾಳಿ ತಲೆಗೆ ತಾಗಿ ಎಚ್ಚರ ಬಂದಾಗ ಅಚ್ಚರಿಗೊಂಡು ಮನೆಗೆ ತಿರುಗಿ ಬರುತ್ತಿದ್ದ. ಇದನ್ನು ತಪ್ಪಿಸುವದು ಹೇಗೆ, ಎಂದು ಘನವಾದ ವಿಚಾರವೆ ನಡೆಯಿತು. ಅವನ ತಾಯಿ ಒಳ್ಳೇ ಚುರುಕುಬುದ್ಧಿಯವಳು. ಅವಳೊಂದು ಉಪಾಯವನ್ನು ಮಾಡಿದಳು. ಪ್ರತಿನಿತ್ಯ ಅವನ ಹಾಸುಗೆ ತೊಟ್ಟಿಲದ ಬುಡ ದಲ್ಲಿ ಬರತೊಡಗಿತು. ಸಾಮಾನ್ಯವಾಗಿ, ತೊಟ್ಟಿಲು ಮಕ್ಕಳಿಗೆ ನಿದ್ರೆಗೈವ ಸಾಧನ. ಈಗ ಮಾತ್ರ ನಿದ್ರೆ ಹೋಗಿಸುವದಕ್ಕಾಗಿ ಅದರ ಉಪಯೋಗ. ನಿದ್ದೆಗಣ್ಣಿನಲ್ಲಿ ರಂಗನೆದ್ದರೆ ತೊಟ್ಟಿಲವೆ ಅವನ ಸಂರಕ್ಷಣೆ ಮಾಡುವದು. ತಲೆಗೆ ಬಡೆದ ಮೇಲೆ ಬುದ್ಧಿ ಬರುವದೆಂಬುದು ಸುಳ್ಳಲ್ಲ. ತೊಟ್ಟಿಲ ಪ್ರಯೋಗ

ಯಶಸ್ವಿಯಾಯಿತು. ಆ ಮುಂದೆ ರಂಗನಿಗೆ ಬುದ್ಧಿಬಂತು. ತಾಯಿಯ ಗುದ್ದಾಟವು ಕಡಿಮೆಯಾಯಿತು. ಈ ಸಂಗತಿ ನಡೆಯುವಾಗ್ಗೆ ರಂಗ ಕನ್ನಡ ಐದನೆ ಇಯತ್ತೆ ಕಲಿಯುವ ಹಸುಳೆ.

ಇಂಗ್ಲಿಷ ಕಲಿಯಲಿಕ್ಕೆಂದು ರಂಗ ವಿಜಯಪುರಕ್ಕೆ ಬಂದ. ಅಲ್ಲಿಯ ಶ್ರೀಕೃಷ್ಣ ಪಾಠಶಾಲೆಯಲ್ಲಿ ಪ್ರವೇಶಮಾಡಿದ. ಬುದ್ಧಿ ಬಲು ಚುರುಕು. ಒಮ್ಮೆ ಹೇಳಿದರೆ ಸಾಕು. ಅದು ಅವನ ಮನದಲ್ಲಿ ಮೂಡುತ್ತಿತ್ತು. ಈ ಹರಿತ ಬುದ್ಧಿಯ ಸಹಾಯದಿಂದ ಒಂದು ವರ್ಷದಲ್ಲಿ ಮನೆಯಲ್ಲಿಯೆ ಒಂದೆರಡು ವರ್ಗಗಳ ಅಭ್ಯಾಸವನ್ನು ಮಾಡಿ ಮೇಲಿನ ವರ್ಗಕ್ಕೆ ಸೇರಿದ. ಗಡಿಬಿಡಿ ಮಾಡಿ ಬಂದರೂ ಗಾಡಿ ತಡವಿದ್ದಾಗ ದಾರಿ ಕಾಯಲೇಬೇಕೆಂಬಂತೆ ಬೇಗನೆ ಅಭ್ಯಾಸ ಮುಗಿಸಿ ಹದಿನೈದು ವರ್ಷದವನಿರುವಾಗಲೆ ಮ್ಯಾಟ್ರಿಕ್ ಕ್ಲಾಸಿಗೆ ಬಂದ. ಅಲ್ಲಿ ಮಾತ್ರ ಅವನಿಗೆ ಟಿಕೆಟ್ ಸಿಗಲಿಲ್ಲ. ಹತ್ತೊಂಬತ್ತುನೂರಾ ಇಪ್ಪತ್ತೊಂದನೆಯ ಇಸ್ವಿಯ ವರೆಗೆ ಮ್ಯಾಟ್ರಿಕ್ ಪರೀಕ್ಷೆ ಕಟ್ಟುವವರು ಹದಿನಾರು ವರ್ಷ ಮಿಕ್ಕಿದವರಿರಬೇಕೆಂದು ನಿರ್ಬಂಧಿಸಲಾಗಿತ್ತು. ಅದು ರಂಗನ ಹೆಜ್ಜೆಯನ್ನು ತಡೆಯಿತು.

ಶಾಲೆಯಲ್ಲಿದ್ದಾಗ ರಂಗನೇನು ಪುಸ್ತಕಹುಳದಂತೆ ಇರಲಿಲ್ಲ. ಆಟ ಪಾಟಗಳಲ್ಲಿ ಪಾಠವೇನೊ ಅವನಿಗೆ ಹೆಚ್ಚು ಸೇರುತ್ತಿದ್ದಿತು. ಮುಂಜಾನೆ ತಮ್ಮ ಶಾಲೆಯ ಕಂಪೌಂಡಿನಲ್ಲಿ ಓಡುವದು, ಗರಡೀಸಾಧನಮಾಡುವದೂ, ಪೋಷಣೆಗಾಗಿ ಹಾಲು ಕುಡಿಯುವದು ಅವನ ನಿತ್ಯ ಉಪಕ್ರಮವಾಗಿತ್ತು. ಮನೆಯಲ್ಲಿ ಕರ್ಮಠತನವೂ ಇದ್ದಿಲ್ಲ, ಸುಧಾರಣೆಯ ಸೋಗೂ ಇರಲಿಲ್ಲ. ಕಾಲಕ್ಕೆತಕ್ಕ ವಾತಾವರಣವಿತ್ತು. ಒಂದು ವಾತಾವರಣ ಮಾತ್ರ ಎಲ್ಲರ ಮನಸ್ಸನ್ನೆಳೆಯುವಂತಹದು. ಅದುವೆ ಅಭ್ಯಾಸದ ವಾತಾವರಣ : ಮನೆತನದ ಇತಿಹಾಸದಲ್ಲಿ ಒಳ್ಳೆಯ ಪಂಡಿತರಾಗಿ ಹೋದುದು; ಮನೆತನವು ಸಂಸ್ಕೃತದಲ್ಲಿ ಪಾಂಡಿತ್ಯ ಪಡೆದುದೆಂದು ಹೆಸರು ಪಡೆದುದು. ಸಂಸ್ಕೃತದ ಅಭ್ಯಾಸವೇ ಹೆಚ್ಚು. ಮನೆಗೆ ಬಂದ ಹುಡುಗರಿಗೆ ಆಡುವ ಹವ್ಯಾಸಕ್ಕಿಂತ ಓದುವ ಚಟವೇ ಹತ್ತುತ್ತಿತ್ತು.

ಇಂಗ್ಲಿಷ ಶಾಲೆಯಲ್ಲಿರುವಾಗಲೇ ರಂಗನಿಗೆ ಸಂಸ್ಕೃತಭಾಷೆಯ ಸೊಬಗಿನ ಅರಿವು ಬಂದಿತ್ತು. ಇಂಗ್ಲಿಷ ಐದನೆ ಇಯತ್ತೆಯಲ್ಲಿರುವಾಗ ಒಂದು ಚಿಕ್ಕ

ಸಂಸ್ಕೃತ ಕಾವ್ಯವನ್ನು ಬರೆದಿದ್ದಾನೆ. ಮಹಾಕವಿ ಕಾಲಿದಾಸನ ಮೇಘದೂತ ಕಾವ್ಯವನ್ನೆ ಮಾದರಿಯಾಗಿಟ್ಟುಕೊಂಡಿದೆ ಆ ಕಾವ್ಯವು. ರಂಗನ ‘ ಅಪೂರ್ವ ಸ್ವಪ್ನ ’ ಕಾವ್ಯವಾದರೂ ಮೇಘದೂತದಂತೆ ೧೧೧ ಶ್ಲೋಕಗಳನ್ನೊಳ ಗೊಂಡಿದೆ. ಮಂದಾಕ್ರಾಂತಾ ಅಲ್ಲದೆ, ಉಪೇಂದ್ರ ವಜ್ರ, ವಸಂತತಿಲಕಾ, ರಥೋದ್ಧತ, ಅನುಷ್ಟುಪ, ಮುಂತಾದ ವೃತ್ತಗಳನ್ನು ಪಯೋಗಿಸಿಕೊಂಡಿದ್ದಾನೆ. ೧೧೧ ಶ್ಲೋಕಗಳನ್ನು ಹಟದಿಂದ ಬರೆದಂತೆ ಕಾಣುತ್ತದೆ. ೮೮ ಶ್ಲೋಕ ಗಳಿಗೆಯೆ ಕಾವ್ಯಭಾಗವು ಮುಗಿವುದು. ಆದರೂ ಅಷ್ಟು ಪದ್ಯಗಳ ಸಂಖ್ಯೆ ಯನ್ನು ಪೂರ್ತಿಗೊಳಿಸುವುದಕ್ಕೋಸ್ಕರ ಪ್ರಯತ್ನಮಾಡಿದಂತಿದೆ.

ಆ ಕಾವ್ಯವು ಒಂದು ರೂಪುಗೆಟ್ಟ ರೂಪಕ ( Allegory )· ಭಾರತದ ಸ್ವಾತಂತ್ರ್ಯವೆ ಕತೆಯ ನಾಯಿಕೆ. ಅವಳ ಹೆಸರು ‘ ಸ್ವಾತಂತ್ರ್ಯಾಖ್ಯಾ ಭರತವನಿತಾ ’ ಎಂದು ಬರುವುದು. ಅವಳನ್ನು ಅವಳ ಗಂಡನಿಂದ ಅಪಹರಿಸಿ ಕೊಂಡು ದೂರದಲ್ಲಿರಿಸಿ ಬಿಟ್ಟಿದ್ದಾರೆ. ತನ್ನ ಗಂಡನನ್ನು ತನ್ನಷ್ಟು ಕಳಕಳಿ ಯಿಂದ ಬೇರೆಯವರು ಆರೈಕೆ ಮಾಡಲಾರರು ಎಂದು ಅವಳಿಗೆ ಅನ್ನಿಸ ತೊಡಗಿದೆ. ತನ್ನ ಗಂಡನ ದೇಶದಲ್ಲಿ ಬಡತನ ದ್ವೇಷಾಸೂಯೆಗಳು ಬೆಳೆ ಯುತ್ತಲಿವೆಂಬುದು ತಿಳಿದು ಬಂದಿದೆ ಅವಳಿಗೆ. ನಿಜಸ್ಥಿತಿಯನ್ನು ತಿಳಿಯುವು ದಕ್ಕೆ ಒಬ್ಬ ದೂತಿಯನ್ನು ಕಳಿಸುವಳು. ಮೇಘದೂತದಲ್ಲಿ ದೂತನು ಮೇಘ ನಾಗಿದ್ದರೆ, ಇಲ್ಲಿ ಪಕ್ಷಿ– ಪರಿಭ್ರಮಂತಂ ಖಗಂ * ದೃಷ್ಟ್ವಾ–ಯನ್ನು ದೂತಿ ಯನ್ನಾಗಿ ಮಾಡಿ ಕಳಿಸುವಳು. ಕಾರಣಾಂತರದಿಂದ ಅಗಲಿದ ಸ್ವಾತಂತ್ರ್ಯ ದೇವಿಯು ವಿರಹತಾಪವನ್ನು ತಾಳಲಾರದೆ, ಭಾರತಕುಮಾರನ ಸಮಾಗಮ ಹೊಂದಬೇಕೆಂಬುದೆ ಅ ಕಾವ್ಯದ ವಸ್ತು.

ಕಾವ್ಯದಲ್ಲಿಯ ವರ್ಣನೆಯು ರಸವತ್ತಾಗಿದೆ. ಕೆಲವೆಡೆಯಲ್ಲಿ ಸಂಸ್ಕೃತ ಮಹಾಕಾವ್ಯಗಳ ಅವತರಣಿಕೆಗಳು ಅನಿವಾರ್ಯವಾಗಿ ಓಘದಲ್ಲಿ ಬಂದಿದ್ದರೂ ರಂಗನಿಗೆ ತನ್ನದೇ ಆದ ಶೈಲಿಯಿದೆ. ವರ್ಣನೆಗಳಲ್ಲಿ ರಂಗನ ವಯಸ್ಸಿಗೆ ಅಸಹಜವೆನಿಸಬಹುದಾದ ಶೃಂಗಾರ ವಾಕ್ಯಗಳಿವೆ. ಆದರೆ ಸಂಸ್ಕೃತ ಕಾವ್ಯ

---

* ‘ಖಗ’ವು ಪಕ್ಷಿಯೂ ಆಗಬಹುದು. ವಾತಾವರಣಕ್ಕನುಗುಣವಾಗಿ ವಿಮಾನವೂ ಆಗಬಹುದು.

ಲಕ್ಷಣಗಳನ್ನು ಅರಿತವನಿಗೆ ಅಸಹಜವಾದರೂ ಹೊಸದಲ್ಲ ಅದು. ತನ್ನವೆ ಆದ ವರ್ಣನೆಗಳೂ ಇವೆ. ಆ ಸ್ವಾತಂತ್ರ್ಯವನಿತೆಯ ರೂಪವನ್ನು ಅವನು ಬಣ್ಣಿಸಿರುವದು ಹೀಗೆ :

**ಸಮಂ ತಯಾ ದರ್ಶಯಿತುಂ ಚ ಪದ್ಮಮ್**
**ಭೇಜೆ ವಿಕಾಸಂ ಸಕಲಂ ದಿನಂ ಚ ।**
**ಶಕ್ತಂ ಚ ನಾಹಂ ಪ್ರಭಯಾತಿರಿಕ್ತುಮ್**
**ಇತೀವ ಸಂಕೋಚಮವಾಪ ರಾತ್ರೌ ॥**

**ಪಿನಾಕಿನಾಹಂ ಪುರುಷೊ ಹಿ ದಗ್ಧಃ**
**ಮಯಾ ಸ ಶತ್ರುಃ ಪ್ರತಿಹಿಂಸಿತವ್ಯಃ ॥**
**ಇತೀವ ಮತ್ವಾ ಪ್ರಮದಾಪದೇಶೈಃ**
**ಪ್ರಾಪ್ತಃ ಸ ಭೂಮಿಂ ಪುನರೇವ ಕಾಮಃ ॥**

ಇಂತಹ ಸುಂದರ ಸ್ತ್ರೀಯನ್ನು ಸೂರ್ಯನು ನೋಡಿದನು. ಮೋಹಗೊಂಡು ಬೆನ್ನಟ್ಟಿದನಂತೆ; ಆಗ,

**ಸ್ವಾತಂತ್ರ್ಯಂಕಿತನಾಮ್ನೀ ಸಾ ವಿವೇಶ ನಿಲಯಂ ತದಾ**
**ಅನುಧಾವನ್ ರವಿಸ್ತಾಂ ತು ಪಪಾತಾಬ್ಧೌ ಪದಸ್ಖಲಾತ್ ॥**

ಮತ್ತೊಂದೆಡೆಯಲ್ಲಿ ಸರೋವರವನ್ನು ಬಣ್ಣಿಸುತ್ತಿರುವ; ದೊಡ್ಡ ಅರಣ್ಯದ ಮಧ್ಯದಲ್ಲಿತ್ತು ಆ ಸರೋವರ :

**ಅಗಸ್ತ್ಯಭೀತ್ಯೇವ ವನೆ ಚ ಸಾಂದ್ರೆ**
**ಅಗತ್ಯಗುಪ್ತಂಚ ನಿಷೇವಮಾಣಮ್ ।**
**ನಾಥೆ ನು ದಗ್ಧೆ ಪರಿದೇವಯಂತ್ಯಾಃ**
**ರತ್ಯಾ ಹೃದೀಭೂತಮಿವಾಶ್ರುವೃಂದಮ್ ॥**

ರಂಗನ ದೇಶಪ್ರೇಮದ ಅಂಕುರವಿದು. ತನ್ನ ದೇಶ, ತನ್ನ ನಾಡು, ತನ್ನ ಸಮಾಜ, ಇವುಗಳಿಗಾಗಿ ಅವನು ಕಳವಳಪಡತೊಡಗಿದ. ಇಂದಿನ ಕಳವಳವೃಕ್ಷದ ಬೀಜವಿದೆ ಆ ಕಾವ್ಯದಲ್ಲಿ. ಭಾರತೀಯರ ಸ್ಥಿತಿಯ ಬಣ್ಣನೆ ಇಂತಿದೆ :

ಗತಾಲ್ಪತ್ವಂ ವಿದ್ಯಾ ಕ್ರಿಶಿರಧಿಗತಾವಗ್ರಹಗತಿಮ್
ಪ್ರದುಷ್ಟಂ ಸಾಧ್ವೀನಾಂ ಸದಮಲಗುಣಾನಾಂ ಭುವಿ ಕುಲಂ ।
ನರಾ ಜಾತಿಭ್ರಷ್ಟಾಃ ಕಲುಷವಿಷಯಾಸಕ್ತಹೃದಯಾಃ
ಕ್ರಮಂತೇ ರೋಗಾ ಉದ್ಧೃತಜಯಪತಾಕಾ ಭುವಿ ಶಕ್ತೈಃ ॥

ಕಲಹನಿಪುಣೈರನ್ಯೋನ್ಯಂ ಸಂಧ್ಯರಾತಿಭಿರಕ್ರಮೈಃ
ಅವಮತಜರೀದೇವೈಃ ಪಾಪೈರಸತ್ಯಪರಾಯಣೈಃ
ಪರಪರಿಜನತ್ವಾಸಕ್ತೈರ್ನಾಶೀತಾತ್ಮಕುಲೀನತ್ವೈಃ
ಆಹಹ ನಿಚಿತಂ ನಿತ್ಯಂ ಲೋಕೈರಿದಂ ಭವನಂ ಹಿ ನಃ

ಕೊನೆಗೆ, ಈ ವ್ಯಾಧಿಗಳಿಗೆ ತರುಣೋಪಾಯದಂತೆ ಒಂದೆರಡು ಮಾತು ಹೇಳಿಯದೆ.

ಅಂತಃಕಲಹನಾಗಸ್ಯ, ಸ್ವಯಮೇವಾಂಕುಶೋ ಭವ ।
ಜಾತಿಭೇದೋ ನ ಕರ್ತವ್ಯೋ ಭವ ದೇವಪರಾಯಣಃ ।
ಹೃದಯಂ ಲಲನಾಂ ತನುಂ ಧನಂ, ಕಲಿಮಿತ್ರಂ ನ ಕದಾ ಪ್ರತೀಹಿರೆ ।
ಪರಮಾತ್ಮನಿ ಧೇಹಿ ಚಿಂತನಂ ಭಣ ವಂದೇ ಚ ಸದೈವ ಮಾತರಮ್ ॥

ಇಡಿ ಕಾವ್ಯವನ್ನೋದುವಾಗ ರಂಗನೆ ಇದನ್ನು ಬರೆದಿರಬಹುದೆ ಎಂದು ಸಂಶಯ ಬರುವಷ್ಟು ಚನ್ನಾಗಿದೆ. ಅವನ ವಯಸ್ಸು ಚಿಕ್ಕದಿದ್ದರೂ ಬುದ್ಧಿ ಶಕ್ತಿಯು ವಯಸ್ಸು ಮೀರಿ ಬೆಳೆದಿತ್ತು.

ಅವನ ಉತ್ಸಾಹಕ್ಕೆ ಮಿತಿಯೆ ಇರಲಿಲ್ಲ. ಅದನ್ನು ಯಾವ ರೀತಿಯ ಲ್ಲಿಯೂ ಬಳಸಿಕೊಳ್ಳಬಲ್ಲ. ಅಸಾಮಾನ್ಯ ಕೆಲಸ ಮಾಡುವುದಿದ್ದರೆ ಅದಕ್ಕೆಯೆ ಮೊದಲು ವಿನಿಯೋಗ. ಆದರೆ ಆ ಕೆಲಸದ ಉಪಯುಕ್ತತೆಯ ಬಗೆಗೆ ಹೋರಾಡುತ್ತಿರಲಿಲ್ಲ. ಕೆಲಸವು ಅಸಾಮಾನ್ಯವಿರಬೇಕು; ಅದನ್ನು ತಾನು ಮಾಡಬೇಕು. ಇವೇ ಎರಡು ಕಾರಣಗಳು ಸಾಕು ಅವನಿಗೆ; ಅವನು ಉಪ ಯೋಗದ ಗೋಜಿಗೆ ಹೋಗುತ್ತಿದ್ದಿಲ್ಲ.

ತಿನ್ನುವುದರಲ್ಲಿ ಜಿದ್ದು ಕಟ್ಟುವುದು ಕನ್ನಡಿಗರಿಗೇನು ಹೊಸದಲ್ಲ. ನಾಡಿ ನಲ್ಲಿ ಬೇರೆ ಬೇರೆ ಭಾಗಗಳಿಗೆ ಹೋಗಿ ನೋಡಿದರೂ ಅಲ್ಲಿಯ ವೈಚಿತ್ರ್ಯ ಗಳಂತೆ ತಿನ್ನಾಸಕತನದ ಕತೆಗಳೂ ಸಿಕ್ಕುವುವು. ಊರಿಗೊಂದೊಂದು ಕತೆ ಯಿದ್ದೇದೂ ಇದೆ. “ನಮ್ಮೂರೊಳಗೆ ಭೀಮಾಚಾರ್ಯರು ಅಂತ ಒಬ್ಬರು

ಇದ್ದಾರೆ; ಅವರು ಮೊನ್ನೆ ಮೊನ್ನೆ ಶಾಮರಾಯರ ಮನಿ ಮದಿವೆಯೊಳಗೆ ೪೦ ಬುಂದೇದ ಉಂಡಿ ತಿಂದದ್ದನ್ನು ನಾನು ನೋಡೀನಿ" ಎಂಬ ಮಾತನ್ನೂ "ನಮ್ಮ ಕೃಷ್ಣನ್ನ ನೋಡಿಲ್ಲೇನು? ೧೭ ಹೋಳಿಗೆ ಸಹಜ ಬಿಗದನಪಾ ಅವ!" ಎಂಬ ಕತೆಯನ್ನೂ ಕೇಳಿದ ನನಗೆ ರಂಗನ ತಿನ್ನಾಸಕತನದ ಬಗ್ಗೆ ಹೇಳಬೇಕೆಂದೆನಿಸುವುದರಲ್ಲಿ ಅಸಹಜತೆಯೇನು? ಹೇಳುವುದರಲ್ಲಿ ಅಸಹಜತೆಯೇನೂ ಇಲ್ಲ. ಹೇಳುವ ವಿಷಯವು ಮಾತ್ರ ಅಸಹಜವೆನ್ನಿಸುವಂತಿದೆ. ಒಂದು ದಿನ ರಂಗ, ಅವನ ಗೆಳೆಯ ರಾಮು, ಇಬ್ಬರೂ ಪೇಟೆಯಿಂದ ಕಾಯಿ-ಪಲ್ಲೆಯನ್ನು ತೆಗೆದುಕೊಂಡು ಮನೆಗೆ ಸಾಗಿದ್ದರು. ಪೇಟೆಯಲ್ಲಿಯ ಪಲ್ಲೆಯ ವಿಷಯಕ್ಕೆ ಮಾತು ನಡೆದಿತ್ತು.

'ರಾಮೂ, ಇಂದ ಮೆಣಶೀಕಾಯಿ ಸುರೇಖ ಬಂದಾವ, ನೋಡು.'

'ಏನು, ದೊಡ್ಡ ಪಲ್ಯಾಂತ ಹೇಳತಾನೊ, ಖಾರ ವಿಷಯ; ಅಂಥಾದ್ದನ್ನು ತೊಗೊಂಬುದಾದರೂ ಎಷ್ಟು? ತಿನ್ನೊದಾದರೂ ಎಷ್ಟು?'

'ತಿನ್ನೋದಾದರೂ ಎಷ್ಟಂತ? ತಿನ್ನಾವರ ಮೇಲಿರತದ. ಶೇರ ಶೇರಗಟ್ಲೆ ಮೆಣಶಿನಕಾಯಿ ತಿನ್ನಾವರು ಇದ್ದಾರು ಅಂದೆ.'

'ಶೇರಗಟ್ಲೆ ಮೆಣಶಿನಕಾಯಿ ತಿನ್ನಾವರನ್ನ ನಾನು ಎಲ್ಲ್ಯಾ ನೋಡಿಲ್ಲಪಾ!'

ತನ್ನ ಮೇಲ್ಮೆಯನ್ನು ಮಾಡಿಕೊಳ್ಳುವುದು ಇದೇ ಸುಸಂಧಿಯೆಂದು ರಂಗನು ಹೊಂಚು ಹಾಕಿ,

'ನಾ ತಿಂದರೆ ಏನು ಕೊಡತಿ?'

ಅಲ್ಲಿಗೆ ಮಾತೂ ನಿಂತಿತು. ಅವರ ದಾರಿಯೂ ನಿಂತಿತು. ಇಬ್ಬರೂ ತಮ್ಮ ತಮ್ಮ ಚೀಲಗಳನ್ನು ಕೆಳಗಿಟ್ಟರು.

'ಹುಂ ಏನು ಕೊಡತಿ ಹೇಳು ನಾ ತಿಂದರ?'

ರಾಮ ನಗುತ್ತ 'ಮತ್ತೇನು ಕೊಡತಾರೊ? ನೀ ತಿಂದಷ್ಟು ಮೆಣಶಿನಕಾಯಿ?'

ಆವ್ಹಾನಕ್ಕೆ ಸಡ್ಡು ಹೊಡೆದ ರಂಗ. ಬೀದಿಯ ಒಂದು ಬದಿಗೆ ಗೆಳೆಯರಿಬ್ಬರೂ ತಮ್ಮ ಪಲ್ಲೆಯ ಚೀಲಗಳನ್ನು ಇಟ್ಟು ಕೂತಿದ್ದಾರೆ. ನಡುವೆ ಮೆಣಶಿನ

ಕಾಯಿ. ಒಂದನ್ನು ಎಳೆದ ರಂಗ; ಕಟಕಟ ಕಡಿದ. ಮತ್ತೊಂದು ಬಂತು; ಇನ್ನೊಂದೂ ಹೋಯಿತು. ೧೦ ಆಯಿತು. ೧೫–೨೦-೩೦–೪೦–೫೦ ಮೆಣಶಿನಕಾಯಿ ತಿಂದನು ಸವತೀಕಾಯಿ ತಿಂದ ಹಾಗೆ. ರಾಮನಿಗೆ ಗಾಬರಿ. ಅವನು ತಿನ್ನುವುದನ್ನು ನೋಡಿ ವಾಸನೆ ತಡೆಯಲಾರದೆ, ಕಣ್ಣಲ್ಲಿ ನೀರು ಬಂತು; ಏನು, ಮೆಣಶಿನಕಾಯಿ ತೀರಿದುವೆಂದೊ ? ಕೊನೆಗೆ ಚೇಷ್ಟೆ ಮಾಡ ಬೇಕೆಂದು, 'ಇವಿಷ್ಟು ಯಾಕೆ ಬಿಟ್ಟೆ ?' ಅಂದ. ಹಟ ರಂಗನಿಗೆ ಅಷ್ಟೆ ಸಾಕಾಯಿತು. ಮತ್ತೆ ಪ್ರಾರಂಭವಾಯಿತು. ಅಂದು ಸಾಯಂಕಾಲ ೯೦ ಹಸಿ ಮೆಣಸಿನಕಾಯಿ ತಿಂದನಂತೆ. ಅಬ್ಬಾ! ಇದೇನು ಹಟವೊ, ಸಹನಶಕ್ತಿಯೊ, ಮೇಲ್ಮೆಯ ಮೋಹವೊ ? ಯಾವುದೊಂದು ಇರಬೇಕು. ಎರಡೂ ಇರ ಬೇಕು. ಎಲ್ಲವೂ ಇರಲಿಕ್ಕಿಲ್ಲವೆಂಬ ಎದೆಗಾರಿಕೆ ಇಲ್ಲವೆಂದು ಹೇಳಬಹುದು.

ಇಂತಹ ಉಲುಕೋಚಿತನವನ್ನು ಮಾಡಿ ದಕ್ಕಿಸಿಕೊಳ್ಳಬೇಕಿದ್ದರೆ, ಸಮುದ್ರದಂತಹ ತಾಯಿಬೇಕು. ರಂಗನ ಭಾಗ್ಯವೇ ಅದು. ತಾಯಿಯ ನಿಕಟ ಸಹವಾಸದಿಂದ ಅವನ ಸ್ವಭಾವವು ಪ್ರತಿ ಅವನ ತಾಯಿಯಂತಾಗಿತ್ತು. ಇವ ನನ್ನು ಕಂಡರೆ ಅವಳಿಗೆ ಬಲುಪ್ರೀತಿ; ಇವನು ಮಾಡಿದ್ದೆಲ್ಲವೂ ಅವಳಿಗೆ ಮೋಜು. ಮಾಡಿದ ಕೆಲಸವನ್ನೂ ಪಡೆದ ಮೇಲ್ಮೆಯನ್ನೂ ಹೇಳಿ ಹೊಗಳಿಸಿ ಕೊಳ್ಳಲು ಬೇಕಿದ್ದ ತಾಯಿ ಇದ್ದಳು ಅವನಿಗೆ. ಅವಳೆ ಅವನ ಹುರುಪು, ಉತ್ಸಾಹ. ಮಕ್ಕಳು ಬೆಳೆಯುವುದಕ್ಕೆ ತಾಯಿಯ ಹಾಲು ಅವಶ್ಯವಿದ್ದಂತೆ ಅವರ ಏಳಿಗೆಯಲ್ಲಿ ತಾಯಿಯದು ಬಹು ದೊಡ್ಡ ಪಾಲು ಇರುವುದು. ಮುಂದೆ ಬೆಳೆಯುವ ಬೇರಿಗೆ ನೀರೆರೆಯುವಳು ತಾಯಿ.



## ಮೂರನೆಯ ಸ್ಥಿತಿ

# ಆಚಾರಿ

ಕಳೆದ ಮಹಾಯುದ್ಧವು ಮುಗಿಯುತ್ತ ಬಂದಿತ್ತು. ಜಗತ್ತು ಅಲ್ಲೋಲ ಕಲ್ಲೋಲವಾಗಿತ್ತು. ಯುದ್ಧದ ಮೂಲಕ ಸ್ವಾತಂತ್ರ್ಯ ಕಳೆದುಕೊಂಡವರೆಷ್ಟೋ ಜನ! ಸಂಪತ್ತು ಸೂರೆಗೊಂಡಿತ್ತು. ದೇಶಗಳೆ ಕುಗ್ಗಿ ಕುಸಿದು ಹೋಗುತ್ತಿರುವಾಗ ನಾಶವಾಗುತಲಿರುವ ಜನತೆಯನ್ನಾರು ಕೇಳಬೇಕು? ಎಲ್ಲಿ ನೋಡಿದಲ್ಲಿ, ಎಲ್ಲಿ ಕೇಳಿದಲ್ಲಿ, ಜೀವನಾಶ; ದ್ರವ್ಯನಾಶ. ಒದಗಿಬಂದ ವಿನಾಶಕ್ಕಾಗಿ ದುಃಖ; ಯುದ್ಧ ಮುಗಿದು ಸುದಿನಗಳು ಬರುವ ಸುಯೋಗ ಬಂತೆಂದು ಸುಖ–ಆನಂದ.

ಯುರೋಪದಲ್ಲಿ ಯುದ್ಧಕಾಂಡವಾದರೆ, ಭಾರತದಲ್ಲಿ ಪಿಡುಗಿನ ಹಾವಳಿ. ೧೯೧೮ನೆಯ ಇಸ್ವಿಯ ಸಂಧಿಕಾಲ. ಯುರೋಪದ ಯುದ್ಧದಲ್ಲಿ ತಮ್ಮ ರಾಷ್ಟ್ರಕ್ಕಾಗಿ ವೀರಾವೇಶದಿಂದ ಕಾದಿ ಯುದ್ಧರಂಗದಲ್ಲಿ ಮಡಿದರನೇಕರು. ಭಾರತದಲ್ಲಿ ಮಾತ್ರ ಬಡತನ, ದಡ್ಡತನದ ಮೂಲಕ ಪಿಡುಗಿನ ಜಂತುಗಳ ಹಾವಳಿಯನ್ನು ತಡೆಯಲಾರದೆ ತುತ್ತಾದರು ಅಸಂಖ್ಯಜನ. ಅದುವೆ ಗುದ್ದವ್ವನ (ಇನ್‌ಫ್ಲುಯೆಂಜಾ) ಬೇನೆ. ಯುರೋಪದ ಮಹಾಯುದ್ಧದ ಇಡಿಯ ನಾಲ್ಕು ವರುಷದ ಅವಧಿಯಲ್ಲಿ ಆದ ಜೀವನಾಶಕ್ಕಿಂತ ಭಾರತದಲ್ಲಿ ನಾಲ್ಕೇ ತಿಂಗಳುಗಳಲ್ಲಿ ಈ ಪಿಡುಗಿನಿಂದ ಹೆಚ್ಚಿನ ಜೀವನಾಶವಾಯ್ತೆಂದು

ಹೇಳುತ್ತಾರೆ. ಯುದ್ಧಗಳು ಕಾಲಕಾಲಕ್ಕೆ ಸಂಭವಿಸಿದರೆ, ಸದಾಕಾಲ ಈ ಪಿಡುಗುಗಳೊಡನೆ ಮಾನವನ ಯುದ್ಧವು ನಡೆದೆ ಇರುವುದು. ಪಿಡುಗುಗಳು ಇಡಿ ಮಾನವಕುಲವನ್ನೇ ತಮ್ಮ ಶತ್ರುಪಕ್ಷವನ್ನಾಗಿ ಮಾಡಿಕೊಂಡಿದ್ದರೂ ತಮ್ಮ ಬಲವನ್ನು ಗೆಲುವಿನಿಂದ ಉಪಯೋಗಿಸಿಕೊಳ್ಳಲು ಭಾರತವೆ ಅನುಕೂಲಭೂಮಿ ಎಂಬುದನ್ನು ಬಲ್ಲಂತೆ ತೋರುತ್ತದೆ. ಬಡತನ, ಭಾವಿಕತನ, ದಡ್ಡತನ, ಹೆಡ್ಡತನ, ಇವು ಭಾರತೀಯರ ಬಂಧುಗಳಾಗಿ ಶತ್ರುಪಕ್ಷದವರಿಗೆ ಸಹಾಯಮಾಡುತ್ತಿರುವಾಗ ಗೆಲುವು ಯಾರಿಗೆ ಅಸಾಧ್ಯ? ಗುದ್ದವ್ವನ ಬೇನೆಯಿಂದ ದಿನಕ್ಕೆ ಒಂದೊಂದು ಊರಲ್ಲಿ ೧೦೦–೧೨೦ ಜನರು ತೀರಿಕೊಂಡರೆ ಆ ದೃಶ್ಯವನ್ನು ನೋಡಿಯೆ ಬಹುಮಂದಿ ಎದೆಯೊಡಕೊಂಡು ಸತ್ತಿರಬಹುದೆಂದೆನಬಹುದಾಗಿದೆ. ಆ ಭಯಾನಕ ಸ್ವರೂಪವನ್ನು ನೆನೆದರೆ ಈಗಲೂ ನವಿರೇಳುವುದು.

ಹಿರಿಯರೆ ಆ ಕಾಲದಲ್ಲಿ ಹೆದರಿಕೊಂಡಮೇಲೆ, ಜೀವನಾಶ, ಮರಣ ಇವುಗಳ ಕಲ್ಪನೆಯಿಲ್ಲದ ಹುಡುಗರಿಗೆ ಎಂತಹ ಹೆದರಿಕೆ, ಹೇಸಿಕೆ, ಅನುಭವಗಳುಂಟಾಗಿರಬಹುದೆಂಬುದನ್ನು ಊಹಿಸಲು ಕೂಡ ಅಶಕ್ಯ. ಆದರೆ ರಂಗನ ಜೀವಿತದಲ್ಲಿ ಮಾತ್ರ ಎಂದೂ ಮಾಸದಂತಹ ಒಂದು ಕಟು ಅನುಭವದ ಏಟು ಸಿಡಿಲಿನಂತೆ ಬಿತ್ತು. ಅದುವೆ ಅವನ ಜೀವನದ ಮೊದಲನೆಯ ಕ್ರಾಂತಿಕಾಲ.

ರಂಗನ ತಾಯಿ, ರಮಾಬಾಯಿಗೆ ಕೆಲವು ದಿನಗಳಿಂದ ಪುಪ್ಪುಸ ವಿಕಾರದ ಬಾಧೆಯಾಗಿತ್ತು. ಕಳೆದ ಹೆರಿಗೆಯನಂತರ ಹೆಚ್ಚು ಅಶಕ್ತಳಾಗಿದ್ದಾಳೆಂದು ಮನೆಯಲ್ಲಿ ಆಗಾಗ ಅನ್ನುತ್ತಿದ್ದರು. ವಯಸ್ಸು ಚಿಕ್ಕದಿದ್ದರೂ ಹೆರಿಗೆಯ ಮೂಲಕ ಹಿರಿತನ–ಮುಪ್ಪು ಬಂದಂತೆ ಇತ್ತು. ಅಶಕ್ತತೆಯ ಕಾರಣದಿಂದ ಅವಳಿಗೆ ಏನೂ ತಡೆಯುತ್ತಿರಲಿಲ್ಲ. ಅಲ್ಲಲ್ಲಿಯ ವೈದ್ಯ–ಡಾಕ್ಟರುಗಳಿಂದ ನಿದಾನಿಸಿದ್ದಾಯಿತು. ಆದರೆ ಪ್ರಕೃತಿಯು ಸರಿಯಾಗಲಿಲ್ಲ. ‘ಈ ಅಶಕ್ತತೆಯು ಹೆರಿಗೆಯ ಮೂಲಕವಾಗಿಯೆ ಆಗಿದೆ. ಇನ್ನು ತಾಯ್ತನದಿಂದ ಅವರು ವಿಶ್ರಾಂತಿ ಪಡೆಯಬೇಕು’ ಎಂದು ಪ್ರತಿಯೊಬ್ಬರು ಉಪದೇಶಿಸುವವರೆ. ನಮ್ಮ ನಾಡಿನ ಹೆಂಗಳೆಯರ ಸಾವಿನ ಸುಂಕವು ಹೆಚ್ಚಾಗಿ ಹೆರಿಗೆಯಿಂದಲೆ.

ರಮಾಬಾಯಿಯ ಔಷಧೋಪಚಾರಕ್ಕಾಗಿಯೆಂದು ಮನೆಯವರೆಲ್ಲರೂ ಸೊಲ್ಲಾಪುರಕ್ಕೆ ಹೋಗಿ ಕೆಲದಿನದ ಮಟ್ಟಿಗೆಂದು ನೆಲಸಿದರು. ಅಲ್ಲಿ ನೆಲಸಿದ ಕೆಲವು ದಿನಗಳಲ್ಲಿಯೆ ಮನೆಯವರೆಲ್ಲರೂ ಗುದ್ದವ್ವನ ಬೇನೆಯಿಂದ ಹಾಸಿಗೆ ಹಿಡಿದರು. ಆಗ ಆ ಊರಲ್ಲಿ ಗುದ್ದವ್ವನ ಬೇನೆಯು ಒಳ್ಳೇ ರಭಸ ದಲ್ಲಿತ್ತು. ದಿನಾಲು ಊರಲ್ಲಿ ನೂರಕ್ಕೆ ಮಿಕ್ಕಿ ಜೀವಗಳು ಪಿಡುಗಿಗೆ ಆಹುತಿ ಯಾಗುತ್ತಿದ್ದವು. ರಮಾಬಾಯಿಯು ಗುಣಮುಖಳಾಗತೊಡಗಿದ್ದಳು. ಈ ಹೊಸ ಬಾಧೆಯನ್ನು ತಪ್ಪಿಸಲು ಎಲ್ಲರೂ ವಿಜಯಪುರಕ್ಕೆ ತಿರುಗಿ ಹೋಗ ಬೇಕೆಂದೂ ತಾನು ವಾರಕ್ಕೆರಡು ಸಲ ಔಷಧಿಯನ್ನು ಕಳಿಸಿಕೊಡುವ ಏರ್ಪಾ ಡನ್ನು ಮಾಡುವೆನೆಂದೂ ಡಾಕ್ಟರನು ಹೇಳಿದನು. ಅಂದಿನ ದಿನವೆ ಊರಿಗೆ ಹೊರಡುವ ಸಿದ್ಧತೆ ಮಾಡತೊಡಗಿದರು. ಟಾಂಗಾಗಾಡಿಗಳೂ ಬಂದುವು. ಊರಿಗೆ ಹೊರಡುವ ಗಡಿಬಿಡಿ; ರಮಾಬಾಯಿಯನ್ನು ಟಾಂಗೆಯಲ್ಲಿ ಕುಳ್ಳಿರಿಸಿ ಉಳಿದವರೂ ಕೂಡುವುದರಲ್ಲಿದ್ದರು. ರಂಗನ ಮೂರುನಾಲ್ಕು ವರುಷದ ತಮ್ಮನೊಬ್ಬನಿಗೆ ಜ್ವರ ಹೆಚ್ಚಿತ್ತು. ಅವನನ್ನು ಸ್ಥಳಾಂತರಿಸುವುದು ಹೇಗೆ ಎಂದು ವಿಚಾರಿಸುತ್ತ, ಕೊನೆಗೆ ಕರೆದುಕೊಂಡು ಹೋಗಬೇಕೆಂದು ನಿರ್ಧರಿಸಿ ಹಾಸುಗೆಯ ಬಳಿ ಬಂದು ನೋಡುತ್ತಾರೆ—ಮೃತದೇಹ! ಯಾರ ಲಕ್ಷಕ್ಕೂ ಬಾರದೆಯೆ ಮಗುವಿನ ಪ್ರಾಣಹೋಗಿದೆ! ಮನೆಯಲ್ಲಿ ಎಲ್ಲರೂ ಜಡ್ಡಿನವರೆ! ಏಳಲಾರದೆ ಹಾಸಿಗೆ ಹಿಡಿದವರನ್ನು, ಏಳಬಹುದಾದವರು ಉಪಚರಿಸುತ್ತಿದ್ದರು. ಇತ್ತ ರಮಾಬಾಯಿಯ ಜಡ್ಡು; ಅತ್ತ ಮಗುವಿಗೆ ಬೇನೆ. ಸದಾಕಾಲ ಆ ಮಗುವಿನ ಹತ್ತರದಲ್ಲಿಯೊಬ್ಬರು ಕೂಡುವಂತೆ ಇರಲಿಲ್ಲ. ಅಂತೂ ಸಾವು—ಆಕಸ್ಮಾತ್ತಾದ—ಅನಿಶ್ಚಿತವಾದ—ಅರ್ಥವಾಗದ—ಆದರೂ ಭಯವನ್ನುಂಟು ಮಾಡುವ—ಸಾವು ಬಂತು. ಸಾವಿನ ಅರ್ಥವು ತಿಳಿಯದೆ ಇದ್ದರೂ ಅದರ ಸ್ಪಷ್ಟ ಕಲ್ಪನೆ ಮಾತ್ರ ರಂಗನ ಮನಸ್ಸಿನಲ್ಲಿ ಮೊದಲು ಸಲ ಮೂಡಿತು. ಹಿಂದಕ್ಕೆ ತೀರ ಚಿಕ್ಕವನಿದ್ದಾಗ—೩-೪ ವರುಷದವನಿದ್ದಾಗ, ಚಿಕ್ಕ ತಂಗಿ ಯೊಬ್ಬಳು ಗತಿಸಿದಾಗ ಮನೆಯವರೆಲ್ಲರೂ 'ಗೊಳೊ' ಎಂದು ಸುತ್ತು ವರಿದು ಅತ್ತುದರ ಮಸುಕು ಕಲ್ಪನೆಯು ಬರತೊಡಗಿತು. ಯಾರಿಗೂ ತಿಳಿ ಯದ, ಎಲ್ಲರಿಂದಲೂ ಮುಚ್ಚಿಡಲೆತ್ನಿಸಿದ, ಒಂದು ತರದ ಉದ್ವಿಗ್ನತೆಯು ರಂಗನ ಮುಖದಲ್ಲಿ ಮರೆಮಾಡಿಕೊಂಡಿತು.

ವಿಜಯಪುರಕ್ಕೆ ಮರಳಿದ ಮೇಲೆ ಮನೆಯಲ್ಲಿ ರಂಗ ಮತ್ತು ಅವನ ಅಜ್ಜ ( ತಾಯಿಯ ತಂದೆ ) ಇವರಿಬ್ಬರ ಹೊರತಾಗಿ ಎಲ್ಲರೂ ಹಾಸಿಗೆ ಹಿಡಿದವರೆ. ಕೆಲಸಮಾಡಲು ಆಳುಗಳು ಕೂಡ ದೊರೆಯುವಂತಿಲ್ಲ. ಮನೆಗೆಲಸದ ಸರತಿ ರಂಗನಿಗೂ ಬಂತು. ಕೆಲಸವೆಂದರೆ ಎಂತಹದು ! ನೀರು ತರುವುದು; ಬಟ್ಟೆ ಒಗೆವುದು; ಅಡುಗೆ ಮಾಡುವುದು; ಮುಸುರೆ ತಿಕ್ಕುವುದು; ಎಲ್ಲವೂ ಕೆಲಸವೆ. ಇದುವೆ ಮೊದಲನೆಯ ಸಲ ಅವನು ಮನೆಗೆಲಸ ಮಾಡಿದುದು. ಮಮತೆಯು ತಾಯಿಯಿದ್ದುದರಿಂದ ಯಾವ ಕೆಲಸದ ಹೊರೆಯೂ ಅವನ ಮೇಲೆ ಬಂದಿರ ಲಿಲ್ಲ. ಇಂದು ತಾಯಿಯೆ ಬೇನೆಯಿಂದ ಬಳಲುತ್ತಿದ್ದಾಳೆ. ತಾಯಿ ಮಗನಿ ಗಾಗಿ ದುಡಿಯುವಳು; ಮಗನು ತಾಯಿಗಾಗಿ ದುಡಿಯಬೇಡವೆ ? ಅಜ್ಜನ ವಿನೋದವು, ತಾಯಿಗೆ ಗುಣವಾಗುತ್ತಿರುವುದು, ರಂಗನನ್ನು ಉಲ್ಲಾಸಿಯಾಗಿ ಮಾಡಿದ್ದುವು, ಎಂಥ ಕೆಲಸವಿದ್ದರೂ. ಆದರೆ ಕೆಲಸ ಮುಗಿಸಿಕೊಂಡು ಮನೆಯ ಬಾಗಿಲ ಬಳಿ ಕುಳಿತಾಗ, ಸದ್ದಿಲ್ಲದೆ ಸ್ಮಶಾನಕ್ಕೆ ಸಾಗುವ ೨೦-೩೦ ಹೆಣಗಳನ್ನು ನೋಡುವುದು ! ಜೀವ ಮರಣಗಳ ಭೇದವೆ ಇಲ್ಲದಂತಾಗಿತ್ತು. ಜೀವನದಲ್ಲಿ ಒಂದು ತರದ ಅನಾಸ್ಥೆ ಬರತೊಡಗಿತು. ಯಾರಿಗೂ ತಿಳಿಯ ದಂತೆ, ಅವನಿಗೆ ಕೂಡ ತಿಳಿಯದಂತೆ, ರಂಗನ ಮುಖದ ಮೇಲೆ ಅನುಭವ ದಿಂದ ಹಣ್ಣಾದಂತಹ ಛಾಯೆ ಮೂಡುತ್ತಿದ್ದಿತು ಆ ಕಾಲಕ್ಕೆ.

ದಿನದಿನಕ್ಕೆ ರಮಾಬಾಯಿಯ ಪ್ರಕೃತಿ ಸುಧಾರಿಸತೊಡಗಿತು. ತನಗಾಗಿ ಮಗನು ಎಷ್ಟು ದುಡಿಯುವನಲ್ಲ ಎಂದು ಒಳಗೊಳಗೆ ಕಳವಳ. ನಗುವಾತಿ ನಿಂದಲೆ ಅವನನ್ನು ಹೊಗಳಿ ಹುರಿದುಂಬಿಸುತ್ತಿದ್ದಳು. ರಂಗನಿಗೆ ಅದೊಂದು ಹಬ್ಬ. ಅವಳ ಹಾಸಿಗೆಯ ಮೇಲೆಯೆ ಕುಳಿತು ಅವಳೊಡನೆ ಮಾತನಾ ಡುವುದು ಅವನಿಗೊಂದು ರಸದೂಟ. ಅದೆಂತಹ ಸುಖ ! ಆ ಸುಖದಲ್ಲಿಯೆ ಅವನ ನಿದ್ರೆ ಸುಖವಾಗುತ್ತಿತ್ತು. ಮತ್ತು ಆ ನಿದ್ರೆಗೆ ಇನ್ನೂ ಬಾಧೆ ಬೇಡವೆಂದೊ ಅವನು ಮಗ್ಗುಲಮನೆಯಲ್ಲಿ ಮಲಗುತ್ತಿದ್ದನು.

ವಿಜಯಾದಶಮಿಯ ಸಮಯ. ಇಡಿ ಊರಿಗೆ ಸಾವಿನ ಕರಿಮುಸುಕು ಆವರಿಸಿ ದಿನಕ್ಕೆ ೨೦-೨೫ ಆಹುತಿಯಾಗುತ್ತಿದ್ದರೂ ವಿಜಯಾದಶಮಿಯೆಂದ ಮೇಲೆ, ಹಬ್ಬದ ಸೋಗು ಬಾರದಿರುವುದೆ ! ಸಾವು ಸಮೀಪ ಬಂದರೂ

'ಹಬ್ಬಮಾಡಿ ಬರುವೆ ತಡೆ' ಎಂದು ಸಾವಿಗೂ ಸೊಪ್ಪುಹಾಕದು ನಮ್ಮ ಜನ! ಹಬ್ಬದ ಪ್ರಮಾಣ, ಲವಲವಿಕೆ, ಸಡಗರ, ಕಡಿಮೆಯಾಗಿದ್ದರೂ ನಡೆದಿತ್ತು ಹಬ್ಬ. ಈ ಸಾವು–ಸಡಗರದ ವಿಚಿತ್ರ ಸಮ್ಮೇಲನದ ವಿಚಾರ ಮಾಡುತ್ತಲೆ ರಂಗನು ಒರಗಿದ; ಜೊಂಪು ಹತ್ತಿತು. ಎಂದೂ ಕನಸ್ಸಿಲ್ಲದಂತಹ ಗಾಢನಿದ್ರೆ ರಂಗನದು. ಆದರೆ ಅಂದು ಮಾತ್ರ ಕನಸು ಕಾಣುತಲಿದ್ದಾನೆ. ಅದೆಂತಹ ಕನಸು! ತಾಯಿಯು ಅವನನ್ನು ಒಂದೆ ಸವನೆ ಕೂಗಿ ಕೂಗಿ ಕರೆಯುತ್ತಿದ್ದಾಳೆ. ಇದೇನು! ರಾತ್ರಿ ತನ್ನನ್ನು ಕರೆಯುವುದೇಕೆ? ಎಂಬ ವಿಚಾರದಿಂದ ಎಚ್ಚರಾಯಿತು. ಕತ್ತಲೆಯಲ್ಲಿ ಯಾರೊ ಅವನ ಕೈಹಿಡಿದಂತಾಯಿತು, ಎಳೆದಂತಾಯಿತು. ಎದ್ದು ನೋಡುತ್ತಾನೆ. ತನ್ನನ್ನು ನಿಜವಾಗಿಯೆ ಯಾರೊ ಕರೆಯಲು ಬಂದಿದ್ದಾರೆಂದು ತಿಳಿದು ಬಂತು. ನಿಜ! ತಾಯಿಯೆ ತನ್ನನ್ನು ಕರೆಸಿದ್ದಾಳೆ. ತಾಯಿಗೆ ಏನು ಬೇಕಾಗಿದೆಯೊ ಎಂದು ಧಾವಿಸಿ ತಾಯಿಯ ಹಾಸಿಗೆ ಬಳಿ ಬಂದ. ಆದರೆ....ಅಲ್ಲಿ ಕಂಡುದು ವಿಚಿತ್ರ ದೃಶ್ಯ. ರಂಗನು ತಾಯಿಯ ಕಡೆಗೆ ನೋಡಿದ. ಅವಳು ನಿಸ್ತೇಜಳಾಗಿದ್ದಾಳೆ. ರಮಾಬಾಯಿಯು ರಂಗನನ್ನು ಕರೆದಳು; ಹತ್ತಿರ ಕರೆದಳು. ನಗಲಾರದ ನಗೆಯಿಂದ 'ಹೆದರುವೆಯಾ' ಎಂದಳು. ರಂಗನ ಬಾಯಿಯಿಂದ ಮಾತುಗಳು ಬಾರವು. 'ನಿನ್ನ ತೊಡೆಯ ಮೇಲೆ ನನ್ನ ತಲೆಯನ್ನಿಡಲಾ!' ಎಂದು ನೋಡಿದಳು ರಂಗನೆಡೆಗೆ. ಮಾತಿಲ್ಲದೆ ಮುಂದೆ ಸರಿದನು ರಂಗ. ತಾಯ ತಲೆಯನ್ನು ತೊಡೆಯ ಮೇಲಿಟ್ಟುಕೊಂಡ. ರಂಗನ ಮೈಮೇಲೆ ಕೈಯಾಡಿಸುತ್ತ ಅಲ್ಲಿ ನಿಂತವರೊಡನೆ ಮಾತು ನಡೆಸಿದಳು. ರಂಗನಿಗೂ ಕೆಲವು ಮಾತು ಹೇಳಿದಳು. ಆ ಮೇಲೆ ಎಲ್ಲರಿಗೂ 'ನಮಸ್ಕಾರ' ಎಂದು ಕೈಮುಗಿದಳು. ತನ್ನ ತಮ್ಮನಿಗೆ ಕೈಮುಗಿವಾಗ....ಕೈ....ನೆಲಕ್ಕೆ....ಬಿದ್ದವು. ಮಾತು ಮುಗಿಯಿತು.

ಒಮ್ಮೆಲೆ ಸುತ್ತೆಡೆಯಿಂದಲೂ ದುಃಖದ ದನಿ ಬಂತು. ರಂಗನಿಗೆ ಅಳಲು ಬರಲಿಲ್ಲ. ಮೋರೆಯಮೇಲೆ ಉದ್ವಿಗ್ನತೆ ತುಂಬಿಬಂದಿತ್ತು. ಎಂದೂ ತುಂಬಿಬಾರದ ಕೊರೆತವು ಕಾಣತೊಡಗಿತು. ಅಳುವುದು ಅವನಿಗೆ ಗೊತ್ತೇ ಇಲ್ಲ. ತನ್ನ ದುಃಖ ತನಗೆ—ತನ್ನ ಮಟ್ಟಿಗೆ. ಇದಕ್ಕಾಗಿ ಅನಿವಾರ್ಯವಾದಾಗ್ಯೂ ಅಂತರ್ದಾಹವನ್ನು ತಡೆಯುವ ರೂಢಿ ಇದೆ ಅವನಿಗೆ. ಎದೆಯುರಿಯ ಬೇಗೆಯು

ಮೊಗದ ಮೇಲೆ ಕಾಣಿಸಿಕೊಳ್ಳುವುದು. ಹೆಚ್ಚು ವಯಸ್ಸಾದ, ಹಣ್ಣಾದ ಕಳೆ ಬರತೊಡಗಿತು.

ಅಂದಿನ ಕನಸಿನಲ್ಲಿಯ ತಾಯಿಯ ಕೂಗು ರಂಗನನ್ನು ಎಚ್ಚರಿಸಿತು. ತನ್ನ ತಾಯಿ ಮಾತನಾಡಿಸಿದರೂ ಮಾತನಾಡಲು ಆಗಲಿಲ್ಲ. ಇನ್ನು ಮಾತ ನಾಡುವುದು ಯಾರ ಸಲುವಾಗಿ? ತಾಯಿಯೆ ಅವನಿಗೆ ಸ್ಫೂರ್ತಿಯ ಸೆಲೆ. ಅಂದು ನಿಂತ ಮಾತು ಕೊನೆವರೆಗೂ ನಿಂತುಬಿಟ್ಟಿತು. ಮಾತು ಕಡಮೆ ಯಾಯಿತು. ವಿಚಾರ ಹೆಚ್ಚಾಯಿತು. ತನ್ನಲ್ಲಿಯ ದುಗುಡವನ್ನು ಹೆರವರಿಗೆ ಹೇಳುವುದು ಅವನ ಸ್ವಭಾವವಲ್ಲ. ಒಳಗೊಳಗೆಯೆ ಕುದಿಯುವುದು; ಬೇಯು ವುದು; ಹಣ್ಣಾಗುವುದು. ಒಳಗಿನ ವಿಚಾರವು ಹೆಚ್ಚಾಗಿ ಹೊರಗೆ ಬರುವುದು. ಬೆಂದುಬರುವುದರಿಂದ ಅದರ ಕಾವು ಹೆಚ್ಚು; ಉರಿ ಹೆಚ್ಚು; ಸಿಡಿತ ಹೆಚ್ಚು. ಈ ಬೇಗೆಯಿಂದ ಅವನ ಮನದ ಮಾರ್ದವವು ಕಮರಿ ಹೋಯಿತು. ಅವನಾಡುವ ಮಾತಿನಲ್ಲಿ, ಬರೆವಣಿಗೆಯಲ್ಲಿ ಒರಟುತನವು ಬರತೊಡಗಿತು. ಸ್ವಭಾವದಲ್ಲಿ ಸಿಡುಕುತನವೂ ಬರತೊಡಗಿತು. ಮೌನವು ಮನೆಮಾಡಿ ಕೊಂಡಿತು. ಇಂದಿಗೂ ಸಭೆಯಲ್ಲಿ, ಆ ಕ್ಷಣದಲ್ಲಿ, ಬೇಕಾದ ವಿಷಯದಮೇಲೆ ಮಾತನಾಡಬಹುದಾದ ಶ್ರೀರಂಗರಿಗೆ, ಮನೆಯಲ್ಲಿ ಭೆಟ್ಟಿಯಾದರೆ ಆಡಲು ಹೆಚ್ಚಿನ ಮಾತುಗಳೇ ತೋಚುವುದಿಲ್ಲ. ಸಭೆಯಲ್ಲಿ ಮಾತನಾಡುವುದು ವಿಚಾರದ ಆವೇಗಕ್ಕೆ. ಆ ಮಾತು ಮುಗಿದಮೇಲೆ ಸ್ವಭಾವ ವಿರುದ್ಧವಾಗಿ ನಡೆದುದಕ್ಕೆ ಒಮ್ಮೊಮ್ಮೆ ಆಯಾಸ. ಅದಕ್ಕೆ ವಿಶ್ರಾಂತಿ—ಮೌನ.

ತಾಯಿ ತೀರಿದ ಮೇಲೆ ಇನ್ನು ತನ್ನ ಜೊತೆಗೆ ಯಾರೂ ತನ್ನವರು ಇಲ್ಲವೆಂಬ ವಿಚಾರವು ಬಂತು ರಂಗನಿಗೆ. ತಾನು ಏನು ಮಾಡಿದರೂ ಹೊಣೆ ಗಾರಿಕೆ ತನ್ನದೆ ಎಂಬುದರ ಅರಿವಾಯಿತು. ತಾನು–ತಾನು–ತನ್ನಷ್ಟಕ್ಕೆ ತಾನು ಎಂಬ ವಿಚಾರವೂ ಅವನಲ್ಲಿ ಮನೆಮಾಡಿಕೊಂಡಿತು. ಸಮುದ್ರದಂತಹ ತಾಯಿ ಇದ್ದಾಗ ಎಲ್ಲ ಹೊಣೆಯನ್ನು ಅವಳ ಮೇಲೆ ಹಾಕಿ ಅವಳಿಂದ ಸದಾ ಸ್ಫೂರ್ತಿಯನ್ನು ಪಡೆಯುತ್ತಿದ್ದ. ಆದರೆ ಅಂದಿನಿಂದ ತನ್ನ ಸ್ಫೂರ್ತಿ ತಾನೆ; ಹೊಣೆಗಾರನೂ ತಾನೆ! ಹೊಣೆಗಾರಿಕೆ ತಾಯಿಯ ಮೇಲೆ ಇದ್ದಾಗ ವಿಧೇಯ ನಾಗಿ ನಡೆದುಕೊಂಡ! ತಾನೆ ಹೊಣೆಗಾರನೆಂದು ತಿಳಿದುಬಂದ ಮೇಲೆ ವಿಧಾಯಕ ಕಾರ್ಯಕ್ರಮಗಳಿಗೆ ಮನಸ್ಸು ಹಾಕತೊಡಗಿದ.

ಅಲ್ಲಿ ಮಧ್ಯದಲ್ಲಿ ಎದ್ದು ಕಾಣುವವನೇ ರಂಗ. ಸುತ್ತಲೂ ಹುಡುಗರ ನೆರವಿ. ಅವನ ಹಾವಭಾವಗಳು ಅವನು ಆವೇಶದಿಂದ ಮಾತಾಡುತ್ತಿರುವುದನ್ನು ಸೂಚಿಸುವವು. ಅದೇನು ಆವೇಶ ಅವನಿಗೆ ಅಂದು! ಅವನ ಹುರಿದುಂಬಿಸುವ ಮಾತುಗಳು ಕೇಳಿಸಿದವು. “ ನೀವೇನು ಕೈಲಾಗದವರೆ, ಬುದ್ಧಿ ಇದೆ; ಮೈಯಲ್ಲಿ ಗಟ್ಟಿಗತನವಿದೆ; ನಿಮ್ಮದೇ ಆದ ಸ್ಥಾನವಿದೆ. ಹೀಗಿದ್ದು ನೆರೆನಾಡಿನಿಂದ ಬಂದು ನೆಲೆಸಿದ ಮರಾಟಿಗರಿಗೆ ಸೊಪ್ಪು ಹಾಕುವದು ಸರಿಬಾರದ ಮಾತು. ನೀವು, ನೀವಾಗಿ ಬಾಳಬೇಕಿದ್ದರೆ ಒಟ್ಟುಗೂಡಿರಿ; ಸಂಸ್ಥೆಯನ್ನು ಕಟ್ಟಿರಿ; ಸಂಸ್ಥೆಯ ಮುಖಾಂತರ ಕನ್ನಡಿಗರಿಗೆ ಅರಿವು ತಂದು ಕೊಡಿರಿ. ’ ಎಂದು ಹೇಳಿದ.

ಈ ಸಂಗತಿಯು ಅವನು ಏಳನೆ ಇಯತ್ತೆಯಲ್ಲಿ ಓದುತ್ತಿರುವಾಗ ಸಂಭವಿಸಿತು. ಅದರ ಮೂಲಕಾರಣವು ಅಂದು ಶಾಲೆಯಲ್ಲಿ ಎದ್ದ ಕನ್ನಡ ಮರಾಠಿ ವಾದದ ದುಃಖಾಂತವು. ವಿಜಯಪುರದಲ್ಲಿ ಬಾಲಮಾರುತಿ ಸಂಸ್ಥೆ ಎಂಬ ಒಂದು ಮರಾಠಿ ಹುಡುಗರ ಸಂಸ್ಥೆಯಿತ್ತು. ಆ ಸಂಸ್ಥೆಯ ಅನೇಕ ಹುಡುಗರು ರಂಗನ ವರ್ಗದಲ್ಲಿಯೇ ಇದ್ದರು. ಆ ಸಂಸ್ಥೆಯ ಬೆಂಬಲದಿಂದ ಕೆಲ ಮರಾಠಿ ಹುಡುಗರಲ್ಲಿ ಕನ್ನಡಿಗರ ವಿಷಯವಾಗಿ ತೀರ ಪರಕೀಯ ಭಾವವು ತಲೆದೋರತೊಡಗಿತು. ಹಾಗೆಯೇ ಒಂದು ದಿನ, ಆ ಮರಾಠಿ ಹುಡುಗರಿಗೂ ಕೆಲ ಕನ್ನಡ ಹುಡುಗರಿಗೂ ಮಾತಿಗೆ ಮಾತು ಬೆಳೆದು, ಕೈಗೆ ಕೈ ಹತ್ತಿತು. ಇದನ್ನು ತಡೆದುಕೊಳ್ಳುವದು ರಂಗನಿಗಾಗಲಿಲ್ಲ. ನಮ್ಮ ಪ್ರಾಂತಕ್ಕೆ ಹೊಟ್ಟೆ ಹೊರಕೊಳ್ಳುವ ಉದ್ದೇಶದಿಂದ ಬಂದ ಮರಾಟಿಗರ ಈ ಉದ್ದಾಮತನವು ಅವನಿಗೆ ಸರಿಬರಲಿಲ್ಲ. ಅವರ ಈ ಪ್ರವೃತ್ತಿಯನ್ನು ಎದುರಿಸುವದಕ್ಕೆ ಕನ್ನಡಿಗರದೊಂದು ಸಂಸ್ಥೆಬೇಕೆಂದು ನಿರ್ಧರಿಸಿ, ಅಂದು ವೀರಾವೇಶದಿಂದ ಮಾತಾಡಿದನು.

ಅವನಾಡಿದ ಮಾತು ಗಾಳಿಯೊಡನೆ ಕೂಡಿ ತೇಲಿ ಹೋಗಲಿಲ್ಲ. ಮುಂದೆ ಸ್ವಲ್ಪ ದಿವಸಗಳಲ್ಲಿಯೇ ಅದೇ ವರ್ಷದ ಬೆನಕನ ಹಬ್ಬಕ್ಕೆ ಶ್ರೀ ತ್ರಿವಿಕ್ರಮನ ಗುಡಿಯಲ್ಲಿ ಶ್ರೀಮಾನ್ ಜೆ. ಎಮ್. ದೇಶಪಾಂಡೆಯವರ ಹಸ್ತದಿಂದ ‘ ಕರ್ನಾಟಕ ಬಾಲಮಿತ್ರ ಸಂಘ ’ ವೆಂಬ ಸಂಸ್ಥೆಯ ಸ್ಥಾಪನೆಯಾಯಿತು. ಅದಕ್ಕೆ ಸೇರಿಸಿಯೇ ‘ ಶ್ರೀ ವಿದ್ಯಾರಣ್ಯ ಪುಸ್ತಕ ವಾಚನಾಲಯ ’ ವೆಂಬ

ಒಂದು ವಾಚನಾಲಯವನ್ನು ಸುರುವುಮಾಡಿದರು. ಹಟತೊಟ್ಟು ಸುರು ಮಾಡಿದ ಸಂಸ್ಥೆಯು ಎರಡುಮೂರು ವರ್ಷ ಒಳ್ಳೇ ಭರದಿಂದ ಸಾಗಿತು. ಸಂಸ್ಥೆಯ ನಡುಗಂಬದಂತಿದ್ದ ರಂಗನು ಕಾಲೇಜ ಸೇರಿದ. ಉಳಿದ ಸಂಸ್ಥೆಯ ಸದಸ್ಯರು ಸಂಸ್ಥೆಯನ್ನು ಆದರ್ಶ ಸಂಸ್ಥೆಯನ್ನಾಗಿ ಮಾಡಬೇಕೆಂದು ಹಂಬಲಪಡುತ್ತಿದ್ದವರಾದರೂ ಹೊಟ್ಟೆಹೊರಕೊಳ್ಳುವ ಹೊಣೆಗಾರಿಕೆಯು ಬೇಗನೆ ಬಂದದ್ದರಿಂದ ಆ ಸಾರ್ವಜನಿಕ ಸಂಸ್ಥೆಯು ಕಮರಿಹೋಯಿತು.

ಇದೊಂದು ನಮ್ಮ ನಾಡಿನ ದುರ್ದೈವ. ನಮ್ಮ ಸಂಸ್ಥೆಗಳು ಪ್ರಾರಂಭ ವಾಗುವಾಗ ಎಷ್ಟು ಜನರು ಸೇರುವರೋ ಅಷ್ಟೇ ಜನರು ಉಳಿಯುವರು. ಅದೇನೊ ಬೇರೆ ಜನರು ಬಂದು ಸೇರುವದಿಲ್ಲ. ಇದೇನು ಸಂಸ್ಥೆಯೊಳಗಿನ ಸದಸ್ಯರ ದೋಷವೋ ಸಂಸ್ಥೆಯ ಹೊರಗಿನ ಜನತೆಯ ತಪ್ಪೋ ತಿಳಿಯು ದಾಗಿದೆ. ಹೊಸ ಜನರನ್ನು ಆಕರ್ಷಿಸಿಕೊಂಡು, ತಮ್ಮವರನ್ನಾಗಿ ಮಾಡಿ ಕೊಂಡು, ಸಂಸ್ಥೆಯ ಆಡಳಿತದ ಸೂತ್ರವನ್ನು ಅವರ ಕೈಯಲ್ಲಿರಿಸಲು ಒಳಗಿನವರಿಗೆ ವಿಶ್ವಾಸವಿರಬೇಕು. ನಾಡಿನ ಏಳ್ಗೆಗಾಗಿ ಕಟ್ಟಿದ ಸಂಸ್ಥೆಗಳು ನಾಡವರ ಪೋಷಣೆ ಇಲ್ಲವೆ ಕಮರಿ ಹೋಗುವ ಸ್ಥಿತಿಗೆ ಬರದಂತೆ ನೋಡಿ ಕೊಳ್ಳುವದು ಜನತೆಯ ಕರ್ತವ್ಯ. ಕರ್ತವ್ಯಚ್ಯುತಿಯೇ ನಮ್ಮ ಸಂಸ್ಥೆಗಳು ಅಂತವಾಗಿದೆ.

ಇನ್ನೂ ಒಂದು ಕಾರಣವು ಇದೆ. ಸಂಸ್ಥೆಗಳ ಬಾಲ್ಯಾವಸ್ಥೆಯಲ್ಲಿ ಹುರುಪು ಹೆಚ್ಚಾಗಿರುವದರಿಂದ ಪ್ರತಿಫಲವನ್ನಪೇಕ್ಷಿಸದೆ ಕಾರ್ಯ ಮಾಡು ವಂತಹ ಸ್ವಯಂಸೇವಕರು ಸಿಕ್ಕುವರು. ಆದರೆ ದಿನ ಕಳೆದಂತೆ ಸಂಸ್ಥೆಯ ಹೊಣೆಯೂ ಹೆಚ್ಚಾಗುವದು; ಕಾರ್ಯಕರ್ತರ ಕೌಟುಂಬಿಕ ಭಾರವೂ ತಲೆ ತಿನ್ನುವದು. 'ಮೊದಲು ಹೊಟ್ಟೆಯ ಪಾಡು, ಆ ಮೇಲೆ ನಾಡು' ಎಂಬ ಸ್ಥಿತಿಗೆ ಬರುವದು. ಇಂತಹ ಸಮಯದಲ್ಲಿ ಮೊದಲಿನವರು ತಮ್ಮ ಬೇರೆ ಕಾರ್ಯದ ಸಲುವಾಗಿ ಸಂಘದ ಹೊಣೆಯನ್ನು ಕಡಿಮೆಮಾಡಿಕೊಂಡರೆ ಅದನ್ನು ಹೊರುವವರು ಸ್ವಯಂಸೇವಕರಾಗಿ ಬಂದರೆ ಸಂಸ್ಥೆ ನಡಿಯುವದು. ಇಲ್ಲವಾದರೆ ನಮ್ಮ ಸಂಸ್ಥೆಗಳೆಲ್ಲವೂ ನಾಯಿಯ ಚತ್ತರಿಗೆಯಂತೆ.

ರಂಗ ಸುರುಮಾಡಿದ ಸಂಸ್ಥೆಯು ತನ್ನ ಮೂರುವರ್ಷದ ಅವಧಿಯಲ್ಲಿ ವಿಶೇಷ ಮುಂದುವರೆದಿತ್ತು. ಶ್ರೀಯುತರಾದ ಶೇಠ ಜಮುನಾಲಾಲ ಬಜಾಜ,

ಸಿ. ರಾಜಗೋಪಾಲಾಚಾರ್ಯರ್, ಆರ್. ವೆಂಕಟರಾಮು, ಮಾರ್ಮಡ್ಯೂಕ್ ಪಿಕ್‌ಥಾಲ್ ಮೊದಲಾದ ಮಹನೀಯರು, ಆ ಸಂಸ್ಥೆಗೆ ಭೆಟ್ಟಿಕೊಟ್ಟಿದ್ದರು. ಹಿರಿಯರ ಹರಕೆಯು ಆ ಸಂಸ್ಥೆಯು ಚಿರಾಯುವಾಗಲೆಂದಿದ್ದರೂ ರಂಗನ ಸಲಹೆ ಸೂಚನೆಗಳಿಲ್ಲದ ಮೂಲಕ, ಅವನಷ್ಟು ಶಕ್ತರು ಹೊಣೆ ಹೊರದ ಮೂಲಕ, ಆ ಸಂಸ್ಥೆಯ ಗತಿಯು....ಹೇಳಬೇಕಾದುದೇನಿದೆ?

೧೯೨೧ನೆಯ ಜೂನ ತಿಂಗಳಲ್ಲಿ ರಂಗನು ಪುಣೆಯ ಡೆಕ್ಕನ್ ಕಾಲೇಜ ಸೇರಿದ. ಆ ಕಾಲಕ್ಕೆ ನಮ್ಮ ನಾಡಿನಲ್ಲಿ ಕಾಲೇಜುಗಳೆ ಇದ್ದಿಲ್ಲ. ಧಾರವಾಡದ ಕರ್ನಾಟಕ ಕಾಲೇಜು ಪ್ರಾರಂಭವಾಗಿ ಒಂದೆರಡು ವರುಷಗಳಾಗಿದ್ದುವು. ಕಾಲೇಜು ಹೊಸದಿದ್ದುದರಿಂದ ಜನತೆಗೆ ಇನ್ನೂ ಅಲ್ಲಿಯ ಶಿಕ್ಷಣದ ಬಗೆಗೆ ಆದರ ಹುಟ್ಟಿರಲಿಲ್ಲ. ನೆರೆನಾಡಿಗೆ ತಮ್ಮ ಹುಡುಗರನ್ನು ಕಲಿಯಲು ಕಳಿಸುವ ತ್ರಾಣವಿದ್ದವರು ಪುಣೆ ಮುಂಬಯಿಗಳಿಗೆ ಕಳಿಸುತ್ತಿದ್ದರು. ಅಲ್ಪವೆಚ್ಚದಲ್ಲಿಯೆ ಹುಡುಗರಿಗೆ ಉಚ್ಚಶಿಕ್ಷಣ ಕೊಡಿಸಬೇಕೆಂದವರು, ಕನ್ನಡನಾಡಿನಲ್ಲಿಯೆ ವಿದ್ಯಾಲಯವು ಪ್ರಾರಂಭವಾಗಿದೆಯೆಂದು ಅಭಿಮಾನ ಪಡುವವರು ಮಾತ್ರ ಧಾರವಾಡದ ಕರ್ನಾಟಕ ಕಾಲೇಜಕ್ಕೆ ತಮ್ಮ ಹುಡುಗರನ್ನು ಕಳಿಸುತ್ತಿದ್ದರು.

೧೯೨೦ನೆಯ ಇಸ್ವಿಯ ವರೆಗೆ ಕನ್ನಡನಾಡಿಗೊಂದು ಕಾಲೇಜು ಕೂಡ ಇದ್ದಿಲ್ಲವೆಂಬ ಮಾತು ನೆನಪಿನಲ್ಲಿಡತಕ್ಕುದಾಗಿದೆ. ಉಚ್ಚ ಶಿಕ್ಷಣಕ್ಕಾಗಿ ನೆರೆನಾಡಾದ ಮಹಾರಾಷ್ಟ್ರಕ್ಕೆ ಹುಡುಗರು ಹೋಗುತ್ತಿದ್ದರು. ಅಲ್ಲಿಯ ವಾತಾವರಣದಲ್ಲಿ ನಾಲ್ಕು–ಆರು ವರುಷಗಳನ್ನು ಕಳೆದು, ಆ ವಾತಾವರಣವನ್ನು ಮೈಗೂಡಿಸಿಕೊಂಡು ಬರುತ್ತಿದ್ದ ನಮ್ಮ ನಾಡಿನ ಹುಡುಗರು ಕನ್ನಡನಾಡಿನ-ನುಡಿಯ ಬಗ್ಗೆ ಅಷ್ಟೊಂದು ಉಜ್ವಲರಾಗಿರುತ್ತಿದ್ದಿಲ್ಲ. ಆಡುವ ಮಾತಿನಲ್ಲಿ ಆಚಾರ ವಿಚಾರಗಳಲ್ಲಿ ಮರಾಟಿಯ ಪ್ರಭಾವವು ಒಡೆದು ಕಾಣುತ್ತಿತ್ತು.

ಉಚ್ಚ ಶಿಕ್ಷಣಕ್ಕಾಗಿ ಪುಣೆ–ಮುಂಬಯಿಗಳಿಗೆ ಹೋಗಬೇಕಾಗುತ್ತಿದ್ದಿತು. ಆದರೆ ಡೆಕ್ಕನ್ ಕಾಲೇಜ ಸೇರುವವರು ವಿಶಿಷ್ಟ ವಿಚಾರವಿದ್ದವರೆ ಆಗಿರುತ್ತಿದ್ದರು. ಅದೊಂದು ವಸತಿ–ವಿದ್ಯಾಲಯ ಮತ್ತು ಸಿರಿವಂತರ ನೆಲೆವೀಡು. ಪುಣೆಯ ಫರ್ಗ್ಯೂಸನ್ ಕಾಲೇಜನ್ನು ‘ ಭಟಜಿ ’ ಕಾಲೇಜೆಂದು ಬೀಳುಗಳೆದು ಮೇಲ್ಮೆಯ ಮೋಹದಲ್ಲಿ ಲೋಲಾಡುತ್ತಿದ್ದರು ಕೆಲ ಕನ್ನಡಿಗರು. ಸಿರಿವಂತಿಕೆಯ ಸೋಗಿನವರು ಡೆಕ್ಕನ್ ಕಾಲೇಜನ್ನು ಸೇರುತ್ತಿದ್ದರು.

ಡೆಕ್ಕನ್ ಕಾಲೇಜು ಪುಣೆಯ ಊರಿನಿಂದ ಸ್ವಲ್ಪ ದೂರದಲ್ಲಿದೆ. ಪುಣೆಯಿಂದ ಕಡಕಿಯ ಕಡೆಗೆ ಹೋಗುವ ದಾರಿಯ ಬಲ ಭಾಗಕ್ಕೆ ಇದೆ. ಊರಿನಿಂದ ದೂರದಲ್ಲಿರುವುದರಿಂದ ದೊಡ್ಡೂರಿನ ಗಲಭೆ ಅಲ್ಲಿ ಇಲ್ಲ. ಸಮೀಪದಲ್ಲಿಯೆ ನದಿಯು ಹರಿಯುತ್ತಿರುವುದರಿಂದ ವಿಹಾರಕ್ಕೆ ವಿಶೇಷ ಅನುಕೂಲ. ಸುತ್ತು ಮುತ್ತಲು ಗಿಡ-ಮರಗಳು; ವಿದ್ಯಾಲಯವು ವನ ಮಧ್ಯದಲ್ಲಿದೆಯೊ ಎನ್ನಿಸುವುದು. ಈ ಪ್ರಶಾಂತ ವಾತಾವರಣಕ್ಕೆ ಮೆಚ್ಚಿ ಕೆಲ ಅಭ್ಯಾಸಿ ವಿದ್ಯಾರ್ಥಿಗಳು ಆ ಕಾಲೇಜಕ್ಕೆ ಬರುತ್ತಿದ್ದರು. ಊರಿನಿಂದ ದೂರದಲ್ಲಿರುವುದರಿಂದಲೂ, ವಸತಿ ವಿದ್ಯಾಲಯದ ಮಾದರಿಯಿರುವುದರಿಂದಲೂ ಸಿರಿವಂತಿಕೆಯ ಸೋಗಿನ ಮೂಲಕವೂ ಊರಲ್ಲಿಯ ವಿದ್ಯಾರ್ಥಿಗಳು ಅಲ್ಲಿಗೆ ಬರುವದು ಕಡಿಮೆ.

ರಂಗನು ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಸಾಕಷ್ಟು ಹೆಚ್ಚು ಗುಣಗಳನ್ನು ದೊರಕಿಸಿದ್ದರೂ ಕಾಲೇಜದಲ್ಲಿ ಮೊದಲನೆಯ ಸ್ಥಾನ ಪಡೆಯಲಾಗಲಿಲ್ಲ. ಏಳನೆಯ ಇಯತ್ತೆಯನ್ನು ಎರಡನೆಯ ಸಲ ಕಲಿಯಬೇಕಾದುದರಿಂದ ಉಂಟಾದ ಅನಾಸ್ಥೆಯ ಮೂಲಕವೊ ತಾಯಿ ತೀರಿದ ಉದ್ವಿಗ್ನತೆಯ ಮೂಲಕವೊ ಮೊದಲಸ್ಥಾನವನ್ನು ಪಡೆಯಲು ಆಗಲಿಲ್ಲ. ಮೊದಲ ವರುಷ ದಲ್ಲಿ ೩ನೆಯ ಸ್ಥಾನವಾದರೂ ಮುಂದಿನ ಮೂರು ವರುಷಗಳಲ್ಲಿ ಮಾತ್ರ ಮೊದಲನೆಯ ಸ್ಥಾನವು ರಂಗನಿಗೆ ಮೀಸಲಾಯಿತು.

ಕಾಲೇಜು ಸೇರಿದ ರಂಗನು 'ರಂಗ' ನಾಗಿಯೆ ಉಳಿಯಲಿಲ್ಲ. ಅವನ ವೇಷ-ಮಾತು ಅವನಿಗಾಗಿ ಬೇರೊಂದು ಹೆಸರನ್ನು ತಂದುಕೊಟ್ಟುವು· ಉಡುತೊಡುವುದೆಲ್ಲ ಖಾದಿ. ತಲೆ ನುಣುಪಾಗಿ, ಬಾಲವುಳ್ಳದು. ಅದೆ ಇಣುಕುತ್ತಿದ್ದ ಕುಡಿ ಮೀಸೆ; ಮಾತುಮಾತಿಗೆ ಬೆರೆಸುವ ಸಂಸ್ಕೃತ ವಾಕ್ಯಗಳು; ಕಾಲೇಜದ ವಾತಾವರಣಕ್ಕೆ ಸರಿಹೋಗದಷ್ಟು ಅವನ ಮಡಿ. ಆ ಕಾಲದ ವಾತಾವರಣಕ್ಕೆ ತಕ್ಕಂತೆ, ಸ್ವದೇಶಿ ವ್ರತ. ಸಕ್ಕರೆಯನ್ನು ಮುಟ್ಟುತ್ತಿದ್ದಿಲ್ಲ. ವೃತ-ನಿಯಮ-ಉಪವಾಸ ಮಾಡುವವರು ಹುಡುಗ ರಂಗನಾಗಿರಲಿಲ್ಲ. ಹಿರಿತನದಲ್ಲಿ ಕಾಲಿಡುತ್ತಿದ್ದ ರಂಗಾಚಾರ್ಯರು, 'ಆಚಾರ್ಯ' ಶಬ್ದಕ್ಕೆ ಒಪ್ಪುತ್ತಿದ್ದರು. ಗೆಳೆಯರು ಬಾಯಿ ತುಂಬ 'ಆಚಾರ್ಯ' ಎನ್ನುವಷ್ಟು ತಾಳ್ಮೆ ಇಲ್ಲದವರಿರುವುದರಿಂದ ರಂಗಾಚಾರ್ಯರು ಸಲುಗೆಯ 'ಆಚಾರಿ' ಯಾದನು.

ಆಚಾರ್ಯರ ಬುದ್ಧಿಶಕ್ತಿ ತೀಕ್ಷ್ಣವಿದ್ದುದರಿಂದಲೂ ಪಾಠಶಕ್ತಿ ಅಸಾಮಾನ್ಯವಿದ್ದುದರಿಂದಲೂ ಜಾಣನೆಂಬ ಹೆಮ್ಮೆಯ ಮೂಲಕವೂ ಅಭ್ಯಾಸವು ಭಾರವೆನಿಸುತ್ತಿರಲಿಲ್ಲ. ದಿನಕ್ಕೆ ಆಗೊಂದು ಗಂಟೆ, ಈಗೊಂದು ಗಂಟೆ ಕಾಲ ಓದಿದರಾಯಿತು; ಆಚಾರ್ಯರ ಅಂದಿನ ಅಭ್ಯಾಸದ ಕಾರ್ಯಕ್ರಮವು ಮುಗಿದಂತಾಯಿತು. ಉಳಿದ ವೇಳೆಯನ್ನು ಕಳೆಯುವುದು ಹೇಗೆ ಎಂಬದೊಂದು ಬಿಡಿಸಲಾರದ ಪ್ರಶ್ನೆಯಾಗಿತ್ತು. ಓದುವುದು ಬೇಸರವೆಂದು ಒಬ್ಬನೆ ಕುಳಿತರೆ ತಾಯಿಯ ನೆನಪಾಗುವುದು. ಯಾರ ಜೊತೆಯಲ್ಲಿರಬೇಕೆಂದರೆ ಸುಮ್ಮನೆ ಇರಲಾಗುತ್ತಿರಲಿಲ್ಲ. ಮಾತನಾಡುವುದು ಬೇಕಿಲ್ಲ. ಜೊತೆಯಲ್ಲಿದ್ದಾಗ ಮಾತನಾಡದೆ ಬೇರೆ ಉಪಾಯವಿಲ್ಲ. ಗೆಳೆಯರ ಸಮೂಹದಲ್ಲಿ ತಾನು ಜಾಣನೆನಿಸಿಕೊಳ್ಳಬೇಕೆಂಬ ಹಂಬಲ. ವಾದವೆದ್ದರೆ ಗೆಲ್ಲಬೇಕೆಂಬ ಹುಮ್ಮಸ್ಸು–ಹಟ. ಇದು ಪ್ರತಿನಿತ್ಯದ ತಿಕ್ಕಾಟವಾಯಿತು. ಏಕಾಂಗಿಯಾಗಿ ಇರುವುದು ಬೇಕಾಗಿದ್ದರೂ ಹರಟೆಹೊಡೆಯುತ್ತಿದ್ದ; ಹರಟೆಹೊಡೆಯುವ ಪ್ರಸಂಗ ಬರುತ್ತಿತ್ತು.

ಆಚಾರ್ಯರ ಮಾತು ಒಳ್ಳೇ ರಸವತ್ತಾಗಿರುತ್ತಿತ್ತು. ಸ್ವತಃ ಮಾತನಾಡಲು ಬೇಕಿರದಿದ್ದರೂ ಗೆಳೆಯರಲ್ಲಿ ಪ್ರಾಮುಖ್ಯತೆ ಸಿಕ್ಕುವುದೆಂದು ಅನಿಯಮಿತ ಹರಟೆ. ಹರಟೆಯಲ್ಲಿ ನಗುವಿನ ಅಂಶವೆ ಹೆಚ್ಚು. ಮಾತಾಡಿ ನಗಿಸುವುದು, ಆಚಾರ್ಯರ ಸ್ವಭಾವವೆ ಆಗಿತ್ತು. ಈ ಗುಣವು ಅವರಿಗೆ ಅವರ ಅಜ್ಜನ ಸಹವಾಸದಿಂದ ಬಂದಿರಬಹುದೆಂದು ಊಹಿಸಬಹುದಾಗಿದೆ. ಯಾವುದಾದರೊಂದು ಸಂಗತಿಯನ್ನು ಹೇಳುವಾಗ್ಗೆ ಮಾತಿನಲ್ಲಿ ಬರುವ ಏರಿಳಿತಗಳು, ಹಾವ ಭಾವಗಳು, ಕೇಳುವವರನ್ನು, ಮಂತ್ರ ಮುಗ್ಧರನ್ನಾಗಿ ಮಾಡುತ್ತಿದ್ದುವು. ಹರಟೆಗೆ ವಿಷಯ ಇಂತಹದೆ ಎಂದು ನಿರ್ಬಂಧವಿದ್ದಿಲ್ಲ. ವಯೋಮಾನಕ್ಕೆ ಅಸ್ವಾಭಾವಿಕವಲ್ಲದ ಶೃಂಗಾರ ವಿಷಯಗಳೂ ಬರುತ್ತಿದ್ದುವು. ಆಚಾರ್ಯರ ಶೃಂಗಾರ, ಕಾವ್ಯಮಯವಾಗಿರುತ್ತಿತ್ತು. ಅದಕ್ಕೆ ಅವರ ಗೆಳೆಯರು ಅನ್ನುತ್ತಿದ್ದರು. ‘ ಹರಟೆಗೆ ಕಾವೇರಬೇಕಾದರೆ ಆಚಾರಿ ಬೇಕು ’ ಎಂದು.

ಡೆಕ್ಕನ್ ಕಾಲೇಜದ ಆವಾರದಲ್ಲಿ ಕನ್ನಡಿಗರ ಹರಟೆಗಾಗಿಯೆ ಒಂದು ಸ್ಥಳ ಕಾದಿಟ್ಟಂತೆ ಇತ್ತು. ವಸತಿಯ ಪಶ್ಚಿಮ ಪಕ್ಕದ ಸಮೀಪದಲ್ಲಿ ಒಂದು ದೊಡ್ಡ ಮರವಿದೆ. ಅದರ ನೆರಳಿನಲ್ಲಿ ನೆರೆಯುತ್ತಿದ್ದಿತು ಕನ್ನಡಿಗರ ಹರಟೆಯ

ಕೊಟ ಹರಟೆಗೆ ಪ್ರಸಿದ್ಧರು ಕನ್ನಡಿಗರು. ಹರಟೆ ಹೊಡೆಯಲು ಅವಶ್ಯ ಬೇಕಿದ್ದ ಆಲಸ್ಯ ಅವರಲ್ಲಿ ಸಾಕಷ್ಟು ಇದೆ. ಯಾವುದೊಂದು ಬೀದಿಯಲ್ಲಿ ಗಟ್ಟಿಯಾಗಿ ಹರಟೆ ಹೊಡೆಯುತ್ತ ಒಂದು ಗುಂಪು ಹೊರಟಿದ್ದರೆ ಅದು ಕನ್ನಡಿಗರದೆಂದು ಹೇಳುವ ಅವಶ್ಯಕತೆಯೆ ಇಲ್ಲ

ಹರಟೆ ಹೊಡೆಯುವುದೂ ಒಂದು ಕಲೆಯೆ ವಿಷಯವಿಲ್ಲದೆ ಮಾತ ನಾಡುವುದು ವಿಷಯವಿದ್ದುದರಕಿಂತಲೂ ಗಡುಚು ವಿಷಯವಿಲ್ಲದೆ, ಎರಡನೆ ಯವರಿಗೆ ಬೇಸರ ಬರದಂತೆ, ಹರಟೆ ಹೊಡೆಯುವುದು ಜಾಣತನ. ಈ ಜಾಣತನದ ಹರಟೆಹೊಡೆಯುವುದು ಆಚಾರ್ಯರಿಗೆ ಮೈಗೂಡಿಕೊಂಡಿದೆ ಅದು ಕನ್ನಡಿಗರದೊಂದು ವೈಶಿಷ್ಟ್ಯ ಅದಕ್ಕೆ ಮೂಲಕಾರಣವು ಉಂಡುಟ್ಟು ಸುಖದಿಂದಿರುವ ಕನ್ನಡಿಗರ ಸೌಭಾಗ್ಯದಲ್ಲಿದ ಹೊಟ್ಟೆ ತುಂಬಿದಾಗ ಹರಟೆ. ಹೊಟ್ಟೆಗೆ ಹಿಟ್ಟಿಲ್ಲದಿದ್ದರೆ ಹರಟೆಗೆ ಹುರುಳು ಎಲ್ಲಿಂದ ಬರಬೇಕು ?

ಆಚಾರ್ಯರ ಕಾಲಹರಣದ ಎರಡನೆಯ ಕಾರ್ಯಕ್ರಮವೆಂದರೆ, ಸಿನಿಮಾ–ನಾಟಕಗಳಿಗೆ ಹೋಗುವುದು ಇರುವುದು ಊರಿನಿಂದ ದೂರ. ಸಿನಿಮಾ ಗೃಹವು ಸೈನ್ಯದ ವಸಹತಿನಲ್ಲಿ, ಊರಿನ ಆ ತುದಿ ನಾಟಕಗೃಹವು ಊರಿನ ಮಧ್ಯದಲ್ಲಿ ಸಿನಿಮಾ–ನಾಟಕಗಳಿಗೆ ಹೋಗಿ ಬರುವುದೆಂದರ ಅದೊಂದು ಸಾಹಸದ ಕೆಲಸವೆ ಆಗುತ್ತಿತ್ತು. ಅದಕ್ಕಾಗಿಂದೆ ಯಾವಾಗಲೂ ಗುಂಪು ಕಟ್ಟಿಕೊಂಡು ಹೋಗುತ್ತಿದ್ದರು. ಇಲ್ಲಿ ನೋಡಬಹುದು ಕನ್ನಡಿಗರ ಸಂಘ ಶಕ್ತಿಯನ್ನು.

ಸಿನಿಮಾ-ನಾಟಕಗಳಿಗೆ ಹೋಗುವುದು ಕಾಲಹರಣವೆಂದು ಕಂಡರೂ ಮನೋರಂಜನೆಗಾಗಿ ಎಂದು ಎನಿಸಿದರೂ ಅವುಗಳ ಪರಿಣಾಮವು ಆಚಾರ್ಯರ ವಿಚಾರಿ ಮನಸ್ಸಿನ ಮೇಲೆ ಒಂದು ರೀತಿಯಲ್ಲಿ ಆಯಿತು. ಹರಟೆಯ ಕಾಲದ ಮಾತಿನಲ್ಲಿಯ ಏರಿಳಿತ, ಹಾವ ಭಾವಗಳು, ಆಚಾರ್ಯರ ನಟನೆಯ ಸಾಮರ್ಥ್ಯವನ್ನು ಸೂಚಿಸುತ್ತಿದ್ದರ, ಸಿನಿಮಾ ನಾಟಕಗಳನ್ನು ಹವ್ಯಾಸದಿಂದ ನೋಡುವುದು, ನಾಟ್ಯಕಲೆಯ ಬಗ್ಗೆ ಅವರ ಆಸಕ್ತಿಯನ್ನು ತೋರಿಸುವುದು.

ನಾಟ್ಯಕಲೆಯು ಆಚಾರ್ಯರಲ್ಲಿ ತೀರ ಚಿಕ್ಕವಯಸ್ಸಿನಲ್ಲಿಯೆ ಬೇರೂರಿದೆ ತಾಯಿಯ ಹಟಸ್ವಭಾವವು, ದುಃಖವನ್ನು ಹತ್ತಿಕ್ಕುವುದು, ಆಚಾರ್ಯರಿಗೆ

ನಟನೆಯ ಪ್ರಥಮ ಪಾಠಗಳಾದುವು. ದುಃಖವಾಗಿದ್ದರೂ ಆಗಿಲ್ಲವೆಂಬಂತೆ ತೋರಿಸುವುದು ನಟನೆಯಲ್ಲವೆ ? ಚಿಕ್ಕವರಿದ್ದಾಗ ನಾಟಕವಾಡಿ ಬಿಡುತ್ತಿದ್ದುದು ಗೊತ್ತಿದೆ. ಬರೆಯುವ ಶಕ್ತಿ ಬರಲುತೊಡಗಿದಂತೆ ನಾಟಕಗಳನ್ನು ಬರೆಯುವ ಚಟವೂ ಬರತೊಡಗಿತು. ಇಂಗ್ಲಿಷ ಶಾಲೆಯಲ್ಲಿದ್ದಾಗಲೆ 'ಸ್ವಾರ್ಥತ್ಯಾಗ' ವೆಂಬ ನಾಟಕವನ್ನು ಬರೆದಿದ್ದು, ಕರ್ನಾಟಕದ ಕುಲಪುರೋಹಿತರೆಂದೆನಿಸಿ ಕೊಳ್ಳುವ ಶ್ರೀ ಆಲೂರ ವೆಂಕಟರಾಯರೆಡೆಗೆ ಅಭಿಪ್ರಾಯಕ್ಕೆ ಅದನ್ನು ವಾಸೂಮಾಸ್ತರರು ಕಳಿಸಿದ್ದರು. 'ಹಿರಿಯ ನಾಟಕಕಾರನಾಗುವ ಶಕ್ತಿ ಹುಡುಗ ನಲ್ಲಿದೆ' ಎಂದು ಅಭಿಪ್ರಾಯ ಪಟ್ಟರು ರಾಯರು. ಅದುವೆ ಆಚಾರ್ಯರಿಗೆ ಮೊದಲನೆಯ ಸ್ಫೂರ್ತಿ. ಪುಣೆಯಲ್ಲಿ ಓದುವುದು ಬೇಸರವಾಗಿ ಕಾಲಹರಣ ಮಾಡುವುದಕ್ಕೆಂದು ನಾಟಕ-ಸಿನಿಮಾಗಳಿಗೆ ಹೋಗುತ್ತಿದ್ದುದು ಮೊಳಕೆಯ ಲ್ಲಿದ್ದ ನಾಟ್ಯಕಲೆಗೆ ನೀರೆರೆದಂತಾಯಿತು. ಇಂಟರ ವರ್ಗದಲ್ಲಿದ್ದಾಗ 'ಇದೇ ಸಂಸಾರ' 'ಕನ್ನಡ ಶಾಮ' ಎಂಬ ಎರಡು ನಾಟಕಗಳನ್ನು ಬರೆದರು ಆಚಾರ್ಯರು. *

'ಸ್ವಾರ್ಥತ್ಯಾಗ'ವನ್ನು ಬರೆದುದು ೧೯೨೦ರ ಸುಮಾರು. ಮಹಾತ್ಮಾ ಗಾಂಧಿಯವರ ಅಹಿಂಸೆಯ ತತ್ವವು ಭಾರತದ ಕ್ಷಿತಿಜದ ಮೇಲೇರಿ ಬರುವ ಕಾಲವದು. ಆ ಸಮಯದ ವಾತಾವರಣವನ್ನು ಚಿತ್ರಿಸುವುದು ಆ ನಾಟಕವು. ಅದರಲ್ಲಿ ಕಾಣಬರುವವರು ಮುಖ್ಯವಾಗಿ ನಾಲ್ಕು ಜನರು. ಅರಸನೊಬ್ಬ— ದುಷ್ಟನು– ಪ್ರಜೆಗಳನ್ನು ಹಿಂಸಿಸುವವ. ತನ್ನ ಸುಖಸೌಲಭ್ಯಗಳಿಗಾಗಿ ಪ್ರಜೆ ಗಳನ್ನು ಹತ್ತಿಕ್ಕುವವ. ಅವನಿಗೊಬ್ಬ ಮಂತ್ರಿ—ಉಪದೇಶಕ. ಅರಸನು ದುಷ್ಟನಾದರೆ ಅವನ ಉಪದೇಶಕನು ಹೇಗೆ ಇರಬೇಕು ? ಆ ಮಂತ್ರಿಯ ಹೆಸರು ದುರ್ಮತಿ. ನಾಟಕದ ನಾಯಕನು ದುರ್ಜಯನೆಂಬುವನು. ಅವನು ಮಹಾಸತ್ವಶಾಲಿ, ಎದೆಗಾರ; ಅಹಿಂಸೆಯು ಅವನ ಅಲುಗು. ಲೋಕ ನಾಯಕನಾಗಿ ಜನತೆಯ ಹಿತವನ್ನು ಬಯಸುವವನು. ಆ ದುಷ್ಟ ಅರಸನು ಮಂತ್ರಿಯಾದ ದುರ್ಮತಿಯ ಉಪದೇಶದಂತೆ ಲೋಕನಾಯಕನಾದ

* 'ಸ್ವಾರ್ಥತ್ಯಾಗ' 'ಕನ್ನಡಶಾಮ' ಈ ಎರಡು ನಾಟಕಗಳ ಕೈಬರಹದ ಪ್ರತಿಗಳನ್ನು ಯಾರೊ ಗೆಳೆಯರು ಒಯ್ದವರು ತಿರುಗಿ ತಂದು ಕೊಡಲಿಲ್ಲ. ಅವು ಈಗ ಇವರ ಹತ್ತಿರ ಇಲ್ಲ.

ದುರ್ಜಯನನ್ನು ದಂಡಿಸುವನು. ಕಾರಾಗ್ರಹದಲ್ಲಿರಿಸುವನು. ' ಜನತೆಯ ಸೇವೆ ಮಾಡಲು ಸ್ವಾರ್ಥತ್ಯಾಗ ಮಾಡಿ ಮುಂದೆ ಬಂದವರು, ಎಡರು ಬಂದರೆ ಎದೆ ಗೆಡುವರೆ ? ನಮ್ಮ ಕಾರ್ಯವನ್ನು ನಾವು ಶಾಂತರೀತಿಯಿಂದ ಸಾಗಿಸಿದರೆ ಸಾಕು. ನಮ್ಮಲ್ಲಿ ಉತ್ಸಾಹ ಉಕ್ಕುತ್ತಿದ್ದರೆ ಹತ್ತಿಕ್ಕುವುದು ಯಾರಿಂದ ಸಾಧ್ಯ? ನಿಮ್ಮ ಗುರಿಯನ್ನು ತಿಳಿದು ಮುಂದೆ ಸಾಗಿರಿ. ಮುಂದೆ ಸಾಗುವವರಿಗೆ ವಿಜಯವು ಬಂದೆ ಬರುವುದು ' ಎಂದು ತನ್ನ ಅನುಯಾಯಿಗಳಿಗೆ ಸಂದೇಶ ವಿತ್ತು ಸೆರೆಮನೆಯ ವಾಸಿಯಾಗುವನು.

ಅವನ ವೀರವಾಣಿ ಜನತೆಯಲ್ಲಿ ತಿಳಿವಳಿಕೆಯನ್ನುಂಟುಮಾಡುವುದು. ತಮ್ಮ ಹಕ್ಕು ಬಾಧ್ಯತೆಗಾಗಿ ಒಟ್ಟುಗೂಡುವರು. ' ನಮ್ಮ ನಾಯಕನನ್ನು ಬಿಡಿರಿ—ಇಲ್ಲವೆ ನಮ್ಮನ್ನೂ ಹಿಡಿಯಿರಿ—ಸೆರೆಮನೆಯಲ್ಲಿ ಹಾಕಿರಿ ' ಎಂದು ಕೂಗ ತೊಡಗುವುದು ಜನತೆ. ಆ ಅರಸನಿಗೆ ಮಗಳೊಬ್ಬಳು ಇರುವಳು. ತನ್ನ ತಂದೆಯ ವರ್ತನವು ಅವಳಿಗೆ ಸೇರುವುದಿಲ್ಲ. ಅತ್ಯಾಚಾರದಿಂದ ದುರ್ಜಯ ನನ್ನು ಬಂಧಿಸಿದ್ದು ಅವಳಲ್ಲಿ ಕಳವಳವನ್ನುಂಟುಮಾಡುವುದು. ಮಗಳ ಮನನೊಯ್ಯುವುದಲ್ಲ ಎಂದು ಅರಸನ ಅಂತರಂಗದ ಕಳವಳ: ಮಗಳಿಗಾಗಿ ದುರ್ಜಯನನ್ನು ಬಿಡುಗಡೆಮಾಡಿದರೆ ಅರಸುತನದ ತನ್ನ ಬಿಗುವು ಸಡಿಲಾ ಗುವುದೆಂಬ ಹೆದರಿಕೆ. ಎಚ್ಚತ್ತ ಜನತೆಯನ್ನು ಹತ್ತಿಕ್ಕಲು ಹವಣಿಸಿದರೆ ಉಕ್ಕೇರುವುದು ಅವರ ಉತ್ಸಾಹವೆಂಬುದು ಬೇರೆ, ಮುಂಬರುವ ಬೆದರಿಕೆ. ಈ ಇಕ್ಕಟ್ಟನ್ನು ಪಾರಾಗಲು, ದುರ್ಮತಿಯ ಹಂಚಿಕೆಯಂತೆ, ಅರಸನು ಲೋಕ ನಾಯಕನನ್ನು ಬಿಡುಗಡೆ ಮಾಡುವನಲ್ಲದೆ, ತನ್ನ ಮಗಳನ್ನು ಅವನಿಗೆ ಕೊಟ್ಟು ಮದುವೆ ಮಾಡುವನು.

ಬರುವ ಪಾತ್ರಗಳು—ಸನ್ನಿವೇಶಗಳು ಸೂಚ್ಯವಾಗಿವೆ. ದುರ್ಮತಿ—ದುರ್ಜಯವೆಂಬ ಹೆಸರುಗಳು ತಮ್ಮ ಆಳವನ್ನು ಹೇಳುವುವು. ದುರ್ಜಯನ ವಿಜಯವು—ಅಹಿಂಸೆಯ ವಿಜಯವು. ಅರಸನ ಮಗಳ ಕೈಯನ್ನು ದುರ್ಜಯನು ಹಿಡಿದು ತಾತ್ಪೂರ್ತಿಕ ಸಂತೋಷಪಡುವುದು — ಆ ಕಾಲದ ಮಾಂಟೆಗ್ಯೂ ಸುಧಾರಣೆಯಿಂದ ಜನತೆ ಸಂತುಷ್ಟರಾದ ಸೂಚನೆ. ' ಸ್ವಾರ್ಥತ್ಯಾಗ 'ವು ಸೂಚ್ಯ ಪಾತ್ರ—ಸಂನಿವೇಶಗಳ ನಾಟಕವು.

ಚಿಕ್ಕ ವಯಸ್ಸಿನಲ್ಲಿ ಬರೆದುದರಿಂದ ಅದರಲ್ಲಿ ಅನೇಕ ದೋಷಗಳಿರಬಹುದು. ಆದರೆ ದೋಷಸಹಿತವಾಗಿದ್ದರೂ ಮುಂಬರುವ ಒಳ್ಳೆಯ ಕೃತಿಯು ತಳಹದಿಯಾಗಿದ್ದುದನ್ನು ಯಾರು ಮರೆಯುವಂತಿಲ್ಲ. ಅದು ಕಳೆದುದರಿಂದ, ಅದೆಲ್ಲವನ್ನು ಕತೆಯೆಂಬಂತೆ ಹೇಳಬೇಕಾದುದು ವಿಷಾದ ಸಂಗತಿ.

'ಸ್ವಾರ್ಥತ್ಯಾಗ'ದ ನಂತರ ಬಂದುದು 'ಇದೇ ಸಂಸಾರ' ಅದನ್ನು ಬರೆದುದು ೧೯೨೩ನೆಯ ಮೇ-ಇಂಟರ ವರ್ಗದಲ್ಲಿದ್ದಾಗ. 'ಸ್ವಾರ್ಥತ್ಯಾಗ'ವನ್ನು ಬರೆದಾಗ ದೇಶದಲ್ಲಿಯ ರಾಷ್ಟ್ರೀಯ ಚಳವಳವು ಒಳ್ಳೆ ರಭಸದಲ್ಲಿದ್ದುದರಿಂದ ಅದರ ಪ್ರಭಾವವು ತರುಣನಾದ ರಂಗನ ಮೇಲೆ ಆಯಿತು. ೧೯೨೩ ಬರುವಷ್ಟರಲ್ಲಿ ಚಳವಳದ ಜೋರು ಕಡಿಮೆಯಾಗುವುದರಲ್ಲಿತ್ತು. ಯಾವ ಪ್ರಾಸಂಗಿಕ ವಿಷಯವೂ ಆಕರ್ಷಕವಿದ್ದಿಲ್ಲ. ಪುಣೆಗೆ ಬಂದ ಮೇಲೆ, ಅಲ್ಲಿ ಮರಾಠಿ ನಾಟಕಗಳನ್ನು ನೋಡುವುದು ಹೆಚ್ಚಾಯಿತು. ಆ ಪ್ರಭಾವದಿಂದ ಬಂದುದು 'ಇದೇ ಸಂಸಾರ.'

'ಇದೇ ಸಂಸಾರ'ದಲ್ಲಿ ಈ 'ಸಂಸಾರ'ದ ಚಿತ್ರವಿದೆ. ಆ ಕಾಲದ ಸಮಾಜದ ಚಿತ್ರವಿದೆ. ಆ ಕಾಲದಲ್ಲಿಯ ಸಮಸ್ಯೆಗಳಿವೆ. ಹಳ್ಳಿಯನ್ನು ಬಿಟ್ಟು ಜನತೆಯು ಪಟ್ಟಣಕ್ಕೆ ಬರತೊಡಗಿತ್ತು. 'ಹಳ್ಳಿಯನ್ನು ಬಿಟ್ಟರೆ ಹಾಳಾಗುವೆವು' ಎಂದು ಹಿರಿಯರಾದವರು ಉಸುರುತ್ತಿದ್ದರು. ತರುಣರಿಗೆ ಪಟ್ಟಣವಾಸವು ಆಕರ್ಷಕವಾಗಿತ್ತು. ಈ ಅಂತರಕ್ಕೆ ಮೂಲಕಾರಣವು ಹಳೆ ಹೊಸ ವಿದ್ಯೆಗಳ ತಾಕಲಾಟ. ಭಾರತದ ಜೀವನವು ಒಕ್ಕಲುತನದ ಜೀವನವು. ಅದಕ್ಕಾಗಿ ಹಳ್ಳಿಯೆ ವಾಸವಾಗಿರಲಿಕ್ಕೆ ಯೋಗ್ಯ; ಹಳೆಯ ಸಾಂಪ್ರದಾಯಿಕ ವಿದ್ಯೆಯೆ ಯೋಗ್ಯ ಎಂದು ಹಳೆಬರ ಮತ. ಮುಂದುವರೆಯುವ ತರುಣರಿಗೆ, ಮುಂದರಿದ ಪಾಶ್ಚಾತ್ಯ ವಿದ್ಯೆಯು ಮೋಹಕವಾಗಿತ್ತು. ಹಳ್ಳಿಯಲ್ಲಿ ಕೊಳೆಯುವುದಕ್ಕಿಂತ ಪಟ್ಟಣಕ್ಕೆ ಬಂದು ವಿದ್ಯೆಗಲಿತು, ಮುಂದಾಗಿ, ತಮ್ಮ ದೇಶವನ್ನು ಮುಂದೆ ತರಬೇಕೆಂಬಾಸೆ. ಸಾಂಪ್ರದಾಯವಂತರಿಗೆ ಹೊಸದೆಂದರೆ ಹೆದರಿಕೆ. ತರುಣರಿಗೆ ಹಳೆಯದೆಂದರೆ ಹೇಸಿಕೆ. ಈ ತಿಕ್ಕಾಟವು ಒಳ್ಳೆ ತುರಸಿಯಲ್ಲಿತ್ತು ಆಗ. ಇದು ಆ ನಾಟಕದ ತಳಹದಿ. ಆ ತಳಹದಿಯ ಮೇಲೆ ಎದ್ದಿದೆ ಸಮಸ್ಯೆಗಳ ಕಟ್ಟಡ.

ಹೊಸ ವಿಷಯವು ಪ್ರಯೋಗಾವಸ್ಥೆಯಲ್ಲಿದ್ದಾಗ ಅದರಿಂದ ಕೆಲ ಮಟ್ಟಿಗೆ ಹಾನಿಯುಂಟಾಗಬಹುದು. ಆ ತರಹದ ತಾತ್ಪೂರ್ತಿಕ ಹಾನಿ ಯಾವ ಪ್ರಯೋಗದಲ್ಲಿಯೂ ಕಂಡುಬರುವುದು. ಹೊಸ ಕಟ್ಟಡವನ್ನು ಕಟ್ಟಬೇಕಾದರೆ ಹಳೆಯದನ್ನು ಬೀಳುಗೆಡಿಸಬೇಕಾಗುವುದು. ಹಳೆಯದು ಮಾಯವಾಗಿ ಹೊಸದು ನಿರ್ಮಾಣವಾಗಬೇಕಾದರೆ ಅಪಘಾತಗಳು ಸಂಭವಿಸಬಹುದು; ಅಪಘಾತಗಳು ಬರುವುದು — ಅಕಸ್ಮಾತ್ತಾಗಿ — ಅದೂ ಅಜ್ಞಾನದಿಂದ. ಅಜ್ಞಾನದ ಮುಸುಕನ್ನು ತೆಗೆದೊಗೆದರೆ, ಜ್ಞಾನದೀಪದಿಂದ ಎಲ್ಲವೂ ನಿಚ್ಚಳ ವಾಗುವುದು. ಮುಂದಿನ ಸುಖಕ್ಕಾಗಿ ಇಂದು ಕಷ್ಟಪಡಬೇಕಾಗುವುದು.

ಹೊಸ ವಿದ್ಯೆಯಿಂದ ಹುಡುಗ–ಹುಡಿಗೆಯರ ಮೇಲೆ ಆಗುವ ದುಷ್ಪರಿಣಾಮವು, ಹುಡಿಗೆಯರು ನಿರ್ಲಜ್ಜರಾಗುವರೆಂದು; ಹುಡುಗರು ಅವಿಧೇಯರಾಗುವರೆಂದು. ಬುದ್ಧಿ ಬೆಳೆಯುವುದರಿಂದ ಶ್ರದ್ಧೆಯು ಕಡಮೆಯಾಗುವದು. ಹೊಸದನ್ನಾಶಿಸುವುದು ಬುದ್ಧಿ, ಹಳೆಯದಕ್ಕೆ ಅಂಟಿಕೊಳ್ಳಬೇಕೆಂಬುದು ಅಂತಃಕರಣ, ಇದೇ ತೊಡಕು. ಬುದ್ಧಿಗೆ ಪ್ರಾಧಾನ್ಯ ಕೊಡಬೇಕೊ ಅಂತಃಕರಣವನ್ನು ಆಳಗೊಡಬೇಕೊ ? ಈ ವಿಚಾರಗಳು ಕಂಡುಬರುತ್ತಿದ್ದ ಆಗಿನ ಕಾಲದ ಸಮಸ್ಯೆಗಳು: ವಿಧವೆಯರ ಗೋಳು, ಒಬ್ಬ ಗಂಡನು—ಮೊದಲ ಹೆಂಡತಿ ಜೀವದಿಂದಿರುವಾಗ್ಗೆ–ಇನ್ನೊಬ್ಬಳನ್ನು ಮದುವೆ ಮಾಡಿಕೊಳ್ಳುವುದು.

ಇಡಿ ಸಮಾಜವೆ ವಸ್ತು. ಅದರೊಳಗಿನ ಆ ಕಾಲದ ಸಮಸ್ಯೆಗಳೆ ಪ್ರಾಶಸ್ತ್ಯವನ್ನು ಪಡೆಯುವುವು. ಹೊಸ ಶಿಕ್ಷಣದಿಂದ ಆಗಬಹುದಾದ ಲಾಭ ಹಾನಿಗಳೆ ಆ ನಾಟಕದ ಜೀವಾಳ.

ಪಾತ್ರಗಳು ಪ್ರಾತಿನಿಧಿಕರೂಪವನ್ನು ತಳೆದವುಗಳಾಗಿವೆ. ಹಳೆಯದರ ಹಿರಿಮೆಯನ್ನು ಹೆಮ್ಮೆಯಿಂದ ಹೇಳಿಕೊಳ್ಳುವ ದಿನಹೋದ ಆಚಾರ್ಯ, ಮುಗ್ಧ ಮಾಧವಾಚಾರ್ಯರು. ಹೊಸ ಯುಗದ ಕಹಳೆಯನ್ನೂದುವ ತರುಣ ನಾಯಕ–ಶಾಮರಾಯ. ಈ ಹಳೆ ಹೊಸ ಪ್ರಸಂಗಗಳಿಂದ ತನ್ನ ಪ್ರಸಂಗ ವನ್ನು ಸಾಧಿಸಿಕೊಳ್ಳಲು ಬಯಸುವ ಸಂಧಿಸಾಧಕ-ಪ್ರಸಂಗರಾಯ. ಪತಿಯೆ ತನ್ನ ಪರದೈವತವೆಂದೂ ಶೀಲವೆ ತನ್ನ ಸೊತ್ತು ಎಂದೂ ತಿಳಿದುಕೊಂಡ ಸಂಪ್ರದಾಯವಂತಿ–ಸುಶೀಲೆ—ಶಾಮರಾಯನ ಮೊದಲಹೆಂಡತಿ. ಸಮಾಜದ

ನೀತಿಯನ್ನು ವಿನಯದಿಂದ ಸಹಿಸುವ ವಿನಯವತಿ, ವಿಧವೆ—ಸುಶೀಲೆಯ ಅಕ್ಕ. ಕಲಿತಿರುವೆನೆಂಬ ಹೆಮ್ಮೆಯಿಂದ ಏನು ಮಾಡಿದರೂ ಸರಿಯೆ ಎಂದೆನ್ನುವ ಮೇಧಾವಿನಿ—ಶಾಮರಾಯನ ಕಾಲೇಜದ ಗೆಳತಿ—ಶಾಮರಾಯನ ಎರಡನೆಯ ಹೆಂಡತಿ. ಈ ಮುಖ್ಯಪಾತ್ರವರ್ಗವಲ್ಲದೆ ಹಿರಿಯ ಪಾತ್ರಗಳಿಗೆ ಪೋಷಕವಾಗುವಂತೆ ಬರುವ ಕಿರಿಯ ಪಾತ್ರಗಳೆಂದರೆ : ಸೋಮಾರಿಪಂತ—ನಿರುದ್ಯೋಗಿ ಬ್ರಾಹ್ಮಣ. ಗಂಡನಿಗೆ ತಕ್ಕ ಹೆಂಡತಿ—ನಿದ್ರಾವತಿ. ದಿವಾಕರ ಭಟ್ಟ–ಊರ ಜೋಯಿಸ. ಕುಟಿಲರಾಯ—ಊರೊಳಗಿನ ನಿರುದ್ಯೋಗಿ ಕುಚೋದ್ಯಗಾರ. ಭೀಮಸಿಂಗ—ಪದ್ಮಸಿಂಗರೆಂಬ ಇಬ್ಬರು ಆಳುಗಳು.

ಪಾತ್ರಗಳ ಹೆಸರುಗಳು ಅವುಗಳ ಗುಣಧರ್ಮವನ್ನು ಸೂಚಿಸುವುವು. ಇದೊಂದು ರಂಗಾಚಾರ್ಯರ ವೈಶಿಷ್ಟ್ಯ.

ಶಾಮರಾಯನು ಮಾಧವಾಚಾರ್ಯರ ಸಾಕುಮಗನು. ಪ್ರಸಂಗರಾಯನು ಶಾಮರಾಯನ ಗೆಳೆಯನು. ಪ್ರಸಂಗರಾಯನು ಕೆಲದಿನಗಳ ಮಟ್ಟಿಗೆಂದು ಶಾಮರಾಯನ ಊರಿಗೆ ಬರುವನು. ಸ್ತ್ರೀ ವ್ಯಾಮೋಹಕ್ಕೆ ಒಳಗಾದವನು ಗೆಳೆತನದ ಗಡಿಗಳನ್ನು ಗಣನೆಗೆ ತರುವುದಿಲ್ಲ. ಪ್ರಸಂಗನು ಶಾಮನ ಹೆಂಡತಿಯಲ್ಲಿ ಕೀಳುಮನವನ್ನು ತೋರುವನು; ಸುಶೀಲೆಯ ಮನಸ್ಸನ್ನು ಸೆಳೆದುಕೊಳ್ಳಲು, ಬಗೆಬಗೆಯಾಗಿ ಹವಣಿಸುವನು. ಸಂಪ್ರದಾಯವಂತೆ ಸುಶೀಲೆ, ಆವನ ಮಾತಿಗೆ ಮರುಳಾಗುವುದಿಲ್ಲ. ಪ್ರಸಂಗನು, ಸುಶೀಲೆಯ ಎದುರು ಶಾಮು–ಮೇಧಾವಿನಿಯರ ಪ್ರಣಯವನ್ನು ಹೇಳಿ ಭೇದೋಪಾಯದಿಂದ ತನ್ನ ಲಾಲಸೆಯನ್ನು ಪೂರ್ತಿಗೊಳಿಸಲೆತ್ನಿಸುವನು. ಆದರೆ ಸುಶೀಲೆಯು,—ಸು—ಶೀಲೆಯೆ. ಗಂಡನು ತನ್ನ ಸುಖಕ್ಕಾಗಿ ಬೇರೊಂದು ಮದುವೆಯಾಗುತ್ತಿದ್ದರೆ ಅದು ತನಗೆ ಸಮ್ಮತವೆಂದೆನ್ನುವಳು; ಗಂಡನ ಸುಖವೆ ತನ್ನ ಸುಖವೆನ್ನುವಳು.

ವಿಷಯಾಸಕ್ತನಾದ ಪ್ರಸಂಗನು, ಇದಿಲ್ಲ ಮತ್ತೊಂದು ಎಂದು, ಸುಶೀಲೆಯ ಅಕ್ಕ ವಿಧವೆಯಾದ ವಿನಯವತಿಯ ಮೇಲೆ ಕೈಮಾಡುವನು. ಅವಳು ಇವನ ನೀಚತನವನ್ನು ಎದುರಿಸುವಳು. ವಿಧವೆಯಾಗಿದ್ದರೂ ;ತನ್ನ ಕಷ್ಟವನ್ನು ಹತ್ತಿಕ್ಕಿಕೊಂಡು ಕಷ್ಟದಲ್ಲಿಯೆ ಸುಖ ತಿಳಿದುಕೊಳ್ಳುವಳವಳು.

ತನ್ನ ಎರಡನೆಯ ಪ್ರಯತ್ನವೂ ವಿಫಲವಾಯ್ತೆಂದು ವಿನಯವತಿಯ ಬಗ್ಗೆ ಆಚಾರ್ಯರ ಮೇಲೆ ಅಸಹ್ಯ ಆರೋಪವನ್ನು ಹೊರಿಸಿ, ಶಾಮರಾಯನ ಮನಸ್ಸನ್ನು ಕೆಡಿಸುವನು.

ತರುಣನಾದ ಶಾಮನು ಪ್ರಸಂಗನ ಮಾತನ್ನು ನಂಬಿ ಆಚಾರ್ಯರನ್ನು ದೂರುವನು. ಪ್ರಸಂಗನ ಜಾಲ ಇಲ್ಲಿಗೆ ಮುಗಿಯಲಿಲ್ಲ. ಶಾಮನಿಗೆ ಅವನ ಕಾಲೇಜದ ದಿನಗಳನ್ನು ನೆನಪಿಗೆ ತಂದುಕೊಟ್ಟು ಶಾಮನನ್ನು ಎಚ್ಚರಿಸುವನು. ತನ್ನ ಮೊದಲನೆಯ ಮದುವೆ, ಕಲಿಯದೆ ಇದ್ದ ಹುಡುಗಿಯೊಡನೆ ತನ್ನ ತಾಯಿ-ತಂದೆಗಳ ಒತ್ತಾಯದಿಂದ ಆದುದರಿಂದ ತನ್ನ ಬುದ್ಧಿಗೆ ಸರಿಹೋಗುವ ಸಹಚರಿಯನ್ನು ಹುಡುಕಬೇಕೆಂದು ಕಲಿತವಳಾದ ಮೇಧಾವಿನಿಯ ಮೇಲೆ ಶಾಮನು ಪ್ರೇಮ ಮಾಡುವನು. ಸುಶೀಲೆಯ ಸಂಗಸುಖವನ್ನು ತಾನು ಹೊಂದ ಬೇಕೆಂದು ಪ್ರಸಂಗರಾಯನು ಶಾಮನಿಗೆ ಮೇಧಾವಿಯೊಡನೆ ಎರಡನೆಯ ಮದುವೆಯನ್ನು ಮಾಡುವನು. ಶಾಮನೂ ಮಾಡಿಕೊಳ್ಳುವನು. ಸುಶೀಲೆ–ಮೇಧಾವಿನಿಯರಿಬ್ಬರು ಶಾಮನ ಹೆಂಡತಿಯರಾಗಿದ್ದರೂ ಅವರಿಬ್ಬರಲ್ಲಿ ಅದೆಷ್ಟು ಅಂತರ! ತ್ಯಾಗಬುದ್ಧಿ ಸುಶೀಲೆಯದು; ಭೋಗಕ್ಕಾಗಿ ಬಂದವಳು ಮೇಧಾ ವಿನಿಯು; ಹಿರಿದಾದ ಹಾರೈಕೆಯಿಟ್ಟುಕೊಂಡು ಬರುವಳು—ಅದರ ಪೂರೈಕೆ ಯಾಗದಿರಲು ಅಸಂತುಷ್ಟಳಾಗುವಳು. ಆ ಅಸಂತುಷ್ಟತೆಯು ಮೂಡುವ ಕಾಲಕ್ಕೆ ಪ್ರಸಂಗನು ತನ್ನ ಬಲೆಯನ್ನು ಒಡ್ಡುವನು. ಅವನ ಬಲೆಗೆ ಸುಶೀಲೆ–ವಿನಯವತಿಯರು ಬೀಳಲಿಲ್ಲ. ಅವರು ತಮ್ಮ ಸ್ಥಿತಿಯನ್ನು ಅರಿತಿದ್ದರು. ಆದರೆ ಮೇಧಾವಿನಿಗೆ ತನ್ನ ಸ್ಥಿತಿ, ದುಸ್ಥಿತಿ, ಯಾವುದೂ ತಿಳಿದಿದ್ದಿಲ್ಲ. ಎಂತಲೆ ಪ್ರಸಂಗನ ಬಲೆಗೆ ಬಿದ್ದಳು. ಅದು ಶಾಮನಿಗೆ ತಿಳಿವುದು. ಶಾಮನು ಅವರಿಬ್ಬರ ಕೈಕೂಡಿಸುವನು....ಅದೇ ಅವನ ಜೀವನದ ಅಳಿಗಾಲದ ಪ್ರಾರಂಭ. ಅವನಿಗೆ ಭ್ರಮೆ–ಭ್ರಾಂತಿ—ಹುಚ್ಚು.

ವಿನಯವತಿಯು ತನ್ನ ಮನಸ್ಸಿನಂತೆ ವರ್ತಿಸಲಿಲ್ಲವೆಂದು, ಪ್ರಸಂಗನು ಅವಳನ್ನು ಇರಿಯುವನು. ಪ್ರಸಂಗ–ಮೇಧಾವಿನಿಯರ ವರ್ತನವನ್ನು ಆಚಾ ರ್ಯರು ತಿರಸ್ಕರಿಸತೊಡಗುವುದರಿಂದ ಅವರಿಬ್ಬರು ಆಚಾರ್ಯರನ್ನೂ ಕೊಲ್ಲಬೇಕೆಂದು ಬೇರೆ ಬೇರೆಯಾಗಿಯೆ ಹೋಗುವರು. ಆದರೆ ಕತ್ತಲೆ ಇದ್ದುದರಿಂದ ಒಬ್ಬರನ್ನೊಬ್ಬರು ಇರಿದುಕೊಂಡು ಸಾಯುವರು. ವಿನಯವತಿಯ

ಹತ್ಯೆಯ ಸುದ್ದಿಯನ್ನು ಕೇಳಿ, ಸುಶೀಲೆಯು ಆತ್ಮಹತ್ಯೆಮಾಡಿಕೊಳ್ಳುವಳು. ಆಚಾರ್ಯರು ಪೆಚ್ಚಾಗುವರು—ಶಾಮನು ಹುಚ್ಚಾಗುವನು.

ಸನ್ನಿವೇಶಗಳು ಸ್ವಾರಸ್ಯ ಪೂರ್ಣವಾಗಿವೆ. ಒಂದನ್ನೊಂದು ಅನಿವಾರ್ಯವಾಗಿ ಹಿಂಬಾಲಿಸುವುದರಿಂದ ನಾಟಕದಲ್ಲಿ ಏಕಸೂತ್ರತೆ ಇದೆ; ತಾರುಣ್ಯದ ಆವೇಗಕ್ಕೆ ತಕ್ಕಂತೆ ಕೆಲ ಭಯಾನಕ ದೃಶ್ಯಗಳು—ಸಂನಿವೇಶಗಳು ಬಂದಿವೆ. ಎಳೆವಯಸ್ಸಿನ ಅನನುಭವಿಕತನದ ಮೂಲಕ ಸಮಸ್ಯೆಗೆ ಸಮರ್ಪಕ ಉತ್ತರವು ಸಿಕ್ಕದಿರಲು, ಅಂತವೆ ಸಹಜವಾಗುವುದು.

ಸಂಭಾಷಣೆಯಲ್ಲಿ ತೀವ್ರತೆಯಿಲ್ಲ. ಸಂಭಾಷಣೆಗಳ ಬದಲು, ಆಯಾ ಪಾತ್ರಗಳು ಭಾಷಣ ಮಾಡುತ್ತಿರುವಂತಿವೆ. ತಮ್ಮ ಮಾತಿನ ಸಮರ್ಥನೆಯನ್ನು ಸ್ವಲ್ಪ ಮಾತಿನಲ್ಲಿ ಸರಿಯಾಗಿ ಮಾಡಲು ಬಾರದೆ ಇರುವುದು ಬರಹಗಾರನ ಅಶಕ್ತತೆಯನ್ನು ತೋರಿಸುತ್ತವೆ. ಕೇಳುವವರಿಗೆ ತಿಳಿಯುವಂತೆ ಮಾರ್ಮಿಕವಾಗಿ ಹೇಳುವುದು ಬೇಕು. ನಾಟಕವು ರಂಗಭೂಮಿಯ ದೃಷ್ಟಿಯಿಂದ, ನಟರ ದೃಷ್ಟಿಯಿಂದ ಬರೆದಂತೆ ಇಲ್ಲ. ಕೆಲವು ವಿಚಾರಗಳನ್ನು ಜನತೆಯ ಮುಂದೆ ಇಡಲು, ನಾಟಕವನ್ನು ಕಲ್ಪಿಸಿ, ಬೇರೆ ಬೇರೆ ಪಾತ್ರಗಳಿಂದ ಅವರ ಸ್ವಭಾವ ಗುಣಕ್ಕೆ ತಕ್ಕಂತೆ ಮಾತುಗಳನ್ನಾಡಿಸಿದ್ದಾಗಿದೆ. ಹಿಡಿತ ಕಡಿಮೆ, ಹುಡಿಯೆ ಹೆಚ್ಚು. ಸಿಡಿಮಾತುಗಳಿಗಿಂತ ಉದ್ದುದ್ದ ಮಾತುಗಳು-ಭಾಷಣ; ಮಾತಿನಲ್ಲಿ ಅಲಂಕಾರಿಕ ವರ್ಣನೆ ಹೆಚ್ಚು. ಮಾತು ಮರ್ಮಕ್ಕೆ ತಾಗಿ ಕೇಳುವವರನ್ನು ಕಾವ್ಯದಲ್ಲಿ ತೇಲಿಸಿ, ಎಚ್ಚರಿಸದೆ ಉಯ್ಯಾಲೆಯಾಡಿಸುವುದು.

ಒಂದೆಡೆಯಲ್ಲಿ,

**ಪ್ರಸಂಗ :** (ಬಲುಮೆಯಿಂದ ವಿನಯುವತಿಯ ಕೈಹಿಡಿದು) ಅಹಾ! ಸಂಧ್ಯಾಕಾಲದಂತೆ ಕೆಂಪೇರಿದ ನಿನ್ನ ಕಪೋಲಗಳ ಕಾಂತಿಯು ಎಂತಹ ಮನೋಹರವಾಗಿದೆ! ಸಂಧ್ಯಾಕಾಲದ ತರುವಾಯದ, ನಿರಭ್ರವಾದ ಆಕಾಶದ ಬಯಲಿನೊಳಗೆ ಗಂಭೀರವಾಗಿ ಬೇಟೆಯಾಡುವ ಚಂದ್ರನ ಚಿನ್ನದ ರಥದ ಚಿಗುರೆಗಳಂತೆ ನಿನ್ನ ಈ ಕಣ್ಣುಗಳು ಹೇಗೆ ಕುಣಿಯಹತ್ತಿವೆ! ಹಾಲಕಡಲಿನಲ್ಲಿ ಹೋಯ್ದಾಡುವ ತೆರೆಗಳಂತೆ, ಚಂದ್ರನಿಂದ ಹೊರಸೂಸುವ ಬೆಳ್ದಿಂಗಳದ ಕಿರಣಗಳಂತೆ ನಿನ್ನ ಈ ಕೋಮಲ ಕೈಗಳು ಎಷ್ಟು ಸುಖದಾಯಕವಾಗಿವೆ! ಸುಂದರೀ ನೋಡು, ಆಕಾಶವನ್ನೇ ನೋಡು. ಆನಂದವನ್ನು ಬೀರುವ, ಆನಂದದಿಂದ ಕುಣಿಯುವ ಚಂದ್ರನ ಆನಂದಾಶ್ರುಗಳೆ ಎಂಬಂತೆ

ತಾರಕೆಗಳು ಹೇಗೆ ಅಂದವಾಗಿ ತೋರಹತ್ತಿವೆ! ಕಾಮ ಪೀಡಿತನಾದ ಚಂದ್ರನು ಬಿಡುವ ನಿಶ್ವಾಸದಂತೆ—ಚಂದ್ರನ ನಿಶ್ವಾಸದಂತೆ— ಈ ಮಂದಮಾರುತನು ಹೇಗೆ ಮೈದಣಿ ಬೀಸಹತ್ತಿರುವನು? ಹುಚ್ಚಿ, ಇಂತಹ ಸೃಷ್ಟಿಯು ಸೊಬಗಿನಲ್ಲಿ ಯಾವತ್ತು ಜಡಾಜಡ ಪದಾರ್ಥಗಳೂ ಸುಖೋಪಭೋಗದ ಆಸ್ವಾದವನ್ನು ತೆಗೆದುಕೊಳ್ಳುತ್ತಿರಲು ನೀನೊಬ್ಬಳೆ ದುಃಖದ ಹಾಸುಗೆಯಲ್ಲಿ ಕೊರಗುವುದು ಈ ಪ್ರಸಂಗನಿಗೆ ಸಹನವಾದೀತೆ? ದೀನರಕ್ಷಕನಾದ ಈ ಪ್ರಸಂಗನು ಹೀನರನ್ನೂ ಸಹ ಹಿಂದುಳಿಯಗೊಡುವುದಿಲ್ಲ. ವಿನಯೆ, ವಿಚಾರಮಾಡು. ವರ್ಷಾನುವರ್ಷ, ಯುಗಾನುಯುಗ ವಿಚಾರಮಾಡಿದರೂ ಕೂಡ ನಿನ್ನ ಮೇಲಿನ ಈ ಪ್ರಸಂಗನ ಪ್ರೇಮದಲ್ಲಿ ಕೊರತೆ ಬಾರದು.

ಮತ್ತೊಂದೆಡೆಯಲ್ಲಿ,

**ಶಾಮ:** ಅಯ್ಯೋ! ನೋಡಿದೆಯಾ, ಹೇಗೆ ಬಾಯಿಯನ್ನು ಮುಚ್ಚಿರುವಳು! ಪಾಪ ರಾಜ್ಯದ ರಾಜಧಾನಿಯಾದ ತನ್ನ ಮನಸ್ಸಿನ ಕೋಟೆಯ ಬಾಗಿಲಿಗೆ ಹೇಗೆ ಭದ್ರವಾಗಿ ಬೀಗ ಹಾಕಿರುವಳು ನೋಡು. ಕೋಟೆಯನ್ನು ಹಗಲಿರುಳು ಕಾಯುವ ಕಾವಲುಗಾರರಂತೆ ಕಣ್ಣುಗಳನ್ನು ಹೇಗೆ ತೆಗೆದಿಟ್ಟುರುವಳು ನೋಡು. ನಮ್ಮ ನಿಮ್ಮನ್ನು ಹುಟ್ಟಿಸಿದ ದೇವನೇ ಇವಳನ್ನಾದರೂ ಜಗತ್ತಿನ ಮೇಲೆ ಉಗುಳಿರುವನೆ? ಇವಳಿಂದ ಜಗತ್ತಿಗೆ ಬರುವ ದುಃಖರಾಶಿಯನ್ನು ತಿಳಿಯದ ದೇವನು ಸರ್ವಜ್ಞನೆ? ಛೀ, ಎಲ್ಲಿಯ ದೇವ, ಎಲ್ಲಿಯ ಸರ್ವಜ್ಞ. ಶಾಮರಾಯಾ ಹೆದರಬೇಡ. ಸಜ್ಜನರಿಗೆ ದೇವನಿಲ್ಲ. ಸರಳ ಸ್ವಭಾವದವರನ್ನು ವಂಚಿಸಲು ಇವಳಂತಹ ಪಾಪಿಗಳು ಉಪಯೋಗಿಸುವ ಮಾಯೆಯ ಬಡಿಗೆಯೇ ದೇವ. ನಿಜವಾಗಿ ದೇವನೊಬ್ಬನಿದ್ದರೆ ಇಂತಹ ಪ್ರಸಂಗಗಳಲ್ಲಿ ಅಡಗಿಕೊಳ್ಳುತ್ತಿದ್ದನೆ? ಇಲ್ಲವೆಂಬುದನ್ನು ಮುಚ್ಚಿಡುವ ಉದ್ದೇಶದಿಂದಲೆ ಅವನು ಅಗಮ್ಯನು, ಅಗೋಚರನು, ಎಂದು ಬೊಗಳುತ್ತಿರುವನು. ನಡೆ ಇಂತಹ ದೇವನೂ ಬೇಡ. ಇಂತಹ ಅವನ ನಾಯಿಗಳೂ ಬೇಡ. ವಿವೇಕದ ಚೂರಿಯಿಂದ ಆ ಹುಚ್ಚು-ವಿಶ್ವಾಸದ ಬೇಟೆಯ ಮೇಳವನ್ನು ಇರಿದು ಬಿಡುವೆ.

ಹೀಗೆ ಮಾತುಗಳು ಉದ್ದುದ್ದವಾಗಿರುವುದರಿಂದ ಗತಿಯ ವೇಗವು ಕಡಿಮೆಯಾಗುವುದು. ಶ್ರೀರಂಗರ ಈಗಿನ ಶೈಲಿಯ ಮಾತುಗಳ ಉದಾಹರಣೆಯನ್ನು ಆಗ ಕಾಣಬಹುದು.

**ಪ್ರಸಂಗ:** ಒಲಿದರೆ ಅಲ್ಲವೆ ಒಳಿತಾಗುವುದು?

**ವಿನಯವತಿ:** ಒಲಿಯುದ್ದರಿಂದಲೇ ಒಲಿಯು ಸ್ತ್ರೀಯರಿಗೆ ಬಿಟ್ಟಿಲ್ಲ.

**ಪ್ರಸಂಗ:** (ತಲೆದೂಗಿ) ಧನ್ಯ ನಿಮ್ಮ ಮಾತನಾಡುವ ಜಾಣತನ !

**ಆಚಾರ್ಯ:** ಪ್ರಸಂಗ ! ಮಾತನಾಡುವ ಜಾಣರೇ ಇತ್ತೀಚೆಗೆ ಬಹಳ ಜನರಾಗಿದ್ದಾರೆ. ಸಮಾಜ ಸುಧಾರಣೆಯಂತೆ ! ರಾಷ್ಟ್ರ ಸುಧಾರಣೆಯಂತೆ ! ನೈತಿಕ ಸುಧಾರಣೆಯಂತೆ ! ಪೇಟೆಯೊಳಗಿನ ಧಾರಣೆಯಂತೆ ಅಗ್ಗವಾಗಿ ಹೋಗಿವೆ.

*　　　*　　　*

**ವಿನಯವತಿ:** ಅದರಲ್ಲಿ ತಪ್ಪು ಯಾವುದು ? ಕರ್ಮದಿಂದ ಮುಕ್ತಿಯೆಂದು ಭಗವದ್ಗೀತೆಯಲ್ಲಿ ಹೇಳಿಲ್ಲವೆ ? ನನ್ನ ತಂಗಿಗೆ ಮುಕ್ತಿ ಸಿಗಲೆಂದು ಅವಳನ್ನು ಗೃಹಕರ್ಮದಲ್ಲಿ ತೊಡಗಿಸಿರುವೆ.

**ಪ್ರಸಂಗ:** ಹೀಗೆ ಕರ್ಮ—ಕರ್ತೃ—ಕ್ರಿಯಾಪದಗಳಿಂದ ಮುಕ್ತಿಯಾಗಬೇಕಾದರೆ ಪಾಣಿನಿಗೆ ಮುಕ್ತಿಗಳ ಮುಕ್ತಾಮಾಲೆಯು ದೊರಕಬೇಕಾಗಿತ್ತು.

*　　　*　　　*

**ಸೋಮಾರಿ:** ಶಾಮರಾಯನು ಅವಸರದಿಂದ ಮೊದಲನೆಯ ಮದುವೆಯನ್ನು ಮಾಡಿಕೊಂಡ. ಈಗ್ಗೆ ಎರಡನೆಯ ಮದುವೆಯ ಅವಸರ ಮಾಡಹತ್ತಿದ್ದಾನೆ.

*　　　*　　　*

**ಪದ್ಮಸಿಂಗ:** ನೀನು ಉತ್ತರ ಕೇಳಿದರೆ ಅವನು ದಕ್ಷಿಣ ತೋರಿಸುವನು. ನಡೆ, ಉತ್ತರ ದೊರೆಯುವುದರೊಳಗಾಗಿ ಪೂರ್ವದ ಸೂರ್ಯನು ಪಶ್ಚಿಮಕ್ಕೆ ಬರುವನು.

*　　　*　　　*

**ಪ್ರಸಂಗ:** ಹುಚ್ಚೀ, ನಿನ್ನ ಒಳಗಿನ ದೇವರು ಒಡೆದು ನೀರಾಗಿ ಹೇಗೆ ನಿನ್ನ ಕಣ್ಣೊಳಗಿಂದ ಹರಿದು ಓಡಹತ್ತಿರುವನು, ನೋಡು ! ವಿನಯವತಿ, ಕಣ್ಣೀರು ಸುರಿಸಬೇಡ; ಹುಬ್ಬುಗಂಟಿಕ್ಕ ಬೇಡ. ಅಯ್ಯೊ ! ಎಳೆಹರೆಯದಲ್ಲಿ ಕುಂಕುಮದಿಂದ ಕಂಗೊಳಿಸಬೇಕಾದ ಈ ನಿನ್ನ ಹಣೆಯನ್ನು ಹುಬ್ಬು ಗಂಟೆಗಳಿಂದ ಹೆಣೆಯ ಬೇಕಾಯಿತಲ್ಲವೆ ? ಥೀ ! ಇದೇನು ಹಣೆಯೆ ? ಸಾವಿರಾರು ವರುಷಗಳಿಂದ ಸರಿಮಾಡಿಕೊಳ್ಳದೆ ಸಾಗಿದ ನಿನ್ನ ಸಮಾಜದ ಹಡಗವನ್ನು ಒಡೆದು ಮುಳುಗಿಸುವ ಬಂಡೆಕಲ್ಲಾಗಿದೆ.

ಭಾಷಾಶೈಲಿಯು ಅಲಂಕಾರಿಕವಾಗಿದೆ. ಓದುಗರಿಗೆ—ಕೇಳುಗರಿಗೆ ನೇರವಾಗಿ ಮುಟ್ಟುವ ಬದಲು ವಿಚಾರಿಸುವ ಯೋಗ ತಂದು ಕೊಡುವವು. ನಾಟಕದಲ್ಲಿಯ ಮಾತುಗಳು ತಿಳಿಯಾಗಿ ಕೇಳಿದೊಡನೆ ತಿಳಿವಳಿಕೆಯನ್ನುಂಟು ಮಾಡುವಂತಹವಿರಬೇಕು. ಇದೆಲ್ಲ ಸಂಸ್ಕೃತ ಕಾವ್ಯಾಭ್ಯಾಸದ ಪ್ರಭಾವ.

ಈ ನಾಟಕದಲ್ಲಿ ಬರುವ ಹಾಡುಗಳು ಮರಾಠಿ ನಾಟಕದ ಹಾಡುಗಳ ಸರಣಿಯನ್ನು ಅನುಸರಿಸಿವೆ. ಕಾಲೇಜದಲ್ಲಿದ್ದಾಗ ಆಗಾಗ್ಗೆ ಮರಾಠಿ ನಾಟಕಗಳನ್ನು ನೋಡುತ್ತಿದ್ದುದರ ಫಲವೆ. ಹಾಡಿಲ್ಲದೆ ನಾಟಕವಾಗುವುದೆಂತು, ಎಂದು ಆಗಿನ ಜನರ ವಿಚಾರವಾಗಿತ್ತು. ನಾಟಕವನ್ನು ಬರೆದಾಗ ಹಾಡುಗಳು ಇದ್ದಿಲ್ಲ. ೧೯೩೯–೩೦ನೆಯ ಇಸ್ವಿಯಲ್ಲಿ ಶ್ರೀ ಆಳವಣಿ ನಾರಾಯಣರಾಯರ ಸಹವಾಸದಲ್ಲಿದ್ದಾಗ ಬರೆದುವು. ಆಳವಣಿಯವರು, ರಾಗ, ಮಾದರಿಗಳನ್ನು ಹೇಳುವುದು; ಆಚಾರ್ಯರು ಅವನ್ನು ಕನ್ನಡಕ್ಕೆ ಇಳಿಸುವುದು. ಕೆಲಕೆಲವು ಹಾಡುಗಳಿಗೆ ಏನೂ ಅರ್ಥವೆ ಆಗುವುದಿಲ್ಲ. ಕನ್ನಡ ಭಾಷೆ, ಹಿಂದುಸ್ತಾನೀ ರಾಗ. ನಾಟಕಗಳಲ್ಲಿ ಒಂದೆರಡು ಹಾಡುಗಳಿದ್ದರೆ, ಅಷ್ಟೆ ಜನತೆಗೆ ಸಮಾಧಾನ. ಈ ಚಟವಾದರೂ ಜನತೆಗೆ ಮರಾಟೀ ನಾಟಕಗಳನ್ನು ನೋಡಿಯೆ ಬಂದುದು. ಆದರೆ ನಾಟಕಗಳಲ್ಲಿ ಪದ್ಯಗಳಿರುವುದು ಸಂಸ್ಕೃತದಲ್ಲಿಯೆ ಪ್ರಾರಂಭವಾಗಿದೆ. ಮಾದರಿಗಾಗಿ :

**'ಬಾರೆ ಪಾಂಡುರಂಗಾ' ಎಂಬಂತೆ 'ಮಾಲಕಂಸ'**

**ತೋರೆ ಚಂದಕುಂದಾ । ತಾರೆ ಬೇರೆಯುಂದಾ ।**
**ಜಾತದಿರೆ ಸುಮುಕಂದಾ । ಬಾಳುಹಾಳು ॥**
**ಕೆಳಮೇಲೆನಿಪೀ ನಾನಾ, ಉಳಿಯೆ ತೆರನಾ ।**
**ಕೇಳೀ ನ್ಯಾಯವೇನಾ । ಬಾಳು ಹಾಳು ॥**
**ಚರಾಚರಾವನ್ನೆ ಸರಿಗಾಣೆ ಭಾವನೆ ।**
**ಬಾರೆ ಬಾಳು ತಾನೆ । ಚನ್ನರನ್ನ ॥**

**'ಶಾಂತವಾಹೊ ಮಾನಸಾ' ಎಂಬಂತೆ.**

**ಸಾಲದಯ್ಯಾ ಜೀವನಾ । ಸಾಲ ಕೇಳೆ ಬರುವೆನಾ ।**
**ಮರೆಸೆನೆನ್ನ ಮನವನಾ । ದೂಡೆ ಬಡವರ ಯಾತನಾ ।**
**ಜಾಣನೆನುತಾ ಮರೆಯೆನಾ । ದೇ—ವಾ ಕೊಡೆ ಜನಕೆ ಜ್ಞಾನಾ ॥**

ಇದೆಲ್ಲ ವಾತಾವರಣದ ಪ್ರಭಾವವೆ. ಇನ್ನೊಂದು ಆಗಿನ ವಾತಾವರಣದ ಚಿತ್ರವು ನಾಟಕದಲ್ಲಿ ಬಂದಿರುವುದು. ಸೋಮಾರಿಪಂತನ ಆಲಸಿಗರ ಕೂಟವು ಡೆಕ್ಕನ್ ಕಾಲೇಜದ ಕನ್ನಡಿಗರ ಹರಟೆಯ ಕೂಟದ ಪ್ರತಿಬಿಂಬವೆ:

**ಸೋಮಾರಿಪಂತ:** ನಾವು ಯಾವ ಸಂಘವನ್ನು ತೆಗೆಯಬೇಕೆನ್ನುವೆವು ಗೊತ್ತಿದೆಯೆ ? ಇಂತಹ ಸಂಘವನ್ನು ತೆಗೆಯುವ ಮೊದಲನೆಯ ಮಾನವು ಕನ್ನಡಿಗರಾದ ನಮಗೆ

ಸಲ್ಲುವುದು ಅಭಿಮಾನದ ಸಂಗತಿ. ಕನ್ನಡಿಗರಿಗೆ ಯೋಗ್ಯವಾದ ಬೇರೆ ಸಂಘವು ಯಾವುದು ? ಆಲಸ್ಯರ ಸಂಘ ! ಸೋಮಾರಿತನದ ಸಂಘ, ಆಲಸಿಗರ ಕೂಟ. ನನ್ನ ಆಲಸಿಗೆಳೆಯರೆ, ಆಲಸ್ಯದ ಗುಣ ವರ್ಣನೆಯನ್ನು ಎಷ್ಟೊಂದು ಹೇಳಲಿ ! ಆಲಸ್ಯವೆಂದರೆ ಗೀತೆಯಲ್ಲಿಯ ಕರ್ಮದ ಅನಾಸಕ್ತಿಯು. ಆಲಸ್ಯವೆಂದರೆ ಭರತಖಂಡದ ಜೀವನಜ್ಯೋತಿಯು. ಆಲಸ್ಯವೆಂದರೆ ಕರ್ನಾಟಕದ ಜೀವಾಳವು ಶರೀರ ಸಾಧನೆಗೆ ಆಲಸ್ಯದಂತಹ ಹಿತಕರ ಔಷಧವು ಮತ್ತೊಂದಿಲ್ಲ.

ಹುಡುಗತನದಲ್ಲಿ :ಬರೆದುದರಿಂದ ಹೆಚ್ಚು ಹುಡಿಯಿದ್ದರೂ ಮಡಿಯೆಂದು ಸದಾಕಾಲ ಕಾದಿಡಲು ಯೋಗ್ಯವಾದ ಮನಹಿಡಿಯುವಂತಹ ಮಾತುಗಳಿವೆ:

'ನಮ್ಮ ನಿಮ್ಮ ಸುಖದುಃಖಗಳಲ್ಲಿ ಪರಮಾತ್ಮನೆಂಬ ಮೂರನೆಯ ವಸ್ತುವಿನ ವಿಚಾರವೇಕೆ ? ಕಣ್ಣಿಗೆ ಕಂಡದ್ದನ್ನು ಮೊದಲು ಅನುಭವಿಸದೆ ಕಾಣಿಸದ್ದರ ವಿಷಯವಾಗಿ ಬುದ್ಧಿಯನ್ನು ಹಾಳುಮಾಡುವುದು ಸರಿಯೆ ? '

'ಸುಖವೆ ಪುಣ್ಯ, ದುಃಖವೇ ಪಾಪ ! '

'ಈ ಆಯುಷ್ಯವು ಯಾವುದಕ್ಕೆ ಸಾಲುವುದು ? ಕೆಟ್ಟದ್ದಕ್ಕೂ ಸಾಲದು; ಒಳಿತಕ್ಕೂ ಸಾಲದು. '

'ಎಲ್ಲಿ ಬಂದರೇನು ? ಅನ್ಯಾಯದಿಂದ ಕಳವಳಗೊಂಡ ಮನಸ್ಸಿಗೆ ಎಲ್ಲಿ ಹೋದರೂ ಸುಖ ದೊರಕದು. ಮಾನವ ಮಾತ್ರರ ಮನಸ್ಸಿನ ಸಮಾಧಾನಕ್ಕಾಗಿ ಶೋಧಿಸಿದ ಶಾಬ್ದಿಕ ವಸ್ತುವೇ ಸುಖವು. '

'ಸಾವಿಗೆ ಅಂಜುವೆಯಾ ? ಮಾಡುವುದನ್ನು ಮಾಡಿದ ಮೇಲೆ ಜೀವದಿಂದಾದರೂ ಇರುವುದು ಏನು ಉಪಯೋಗ ? '

'ದೇವನು ಮಾಡುವುದಿಲ್ಲ, ದೇವನು ಬಿಡುವುದಿಲ್ಲ; ಮಾಡಿದವ ಬಿಡುವ, ಬಿಟ್ಟವ ಮಾಡುವ. '

'ಅನ್ಯರನ್ನು ದೂಷಿಸಿದರೆ ತನ್ನನ್ನು ಪೋಷಿಸಿದಂತೆ ಆಗುವುದೆಂದು ತಿಳಿದಿರುವಿರಾ ? '

ಒಟ್ಟಿನಲ್ಲಿ ಈ ನಾಟಕವು 'ಶ್ರೀರಂಗ'ರ ಪ್ರತಿಮೆಯನ್ನು ಚಿಕ್ಕ ವಯಸ್ಸಿನಲ್ಲಿ ತೋರುವುದು. ರಂಗಾಚಾರ್ಯರೆ ಈ ನಾಟಕದಲ್ಲಿ ಒಂದೆಡೆ ಹೇಳಿದ್ದಾರೆ: 'ನಾನು ಕಾವ್ಯ ಬರೆಯಬೇಕೆಂದು ಮಾಡಿದ್ದಿಲ್ಲ; ನಾಟಕ ಬರೆಯಲು ಹೋದೆ; ಅದು ಕಾವ್ಯವಾಯಿತು. ' ಇದು ಸತ್ಯವಿದೆ. ಅದಕ್ಕೆಯೆ ನಾಟಕ ಬರೆಯುವುದು ಮುಗಿದ ಮೇಲೆ, I am surprised to find myself ready to offer this play to the public ಎಂದಿರಬಹುದು. 'ಸ್ವಾರ್ಥತ್ಯಾಗ'ಕ್ಕೆಯೆ

ಶ್ರೀ ಆಲೂರ ವೆಂಕಟರಾಯರು, 'ಹಿರಿಯ ನಾಟಕಕಾರನಾಗುವ ಶಕ್ತಿ ಹುಡುಗನಲ್ಲಿದೆ' ಎಂದಿದ್ದರು. ಆ ನಾಟಕವು ಇಂದು ಕಳೆದು ಹೋಗಿದೆಯೆಂದು ತಿಳಿದರೂ ಈ ನಾಟಕದಲ್ಲಿ ವೆಂಕಟರಾಯರ ಭವಿಷ್ಯದ ಸಮರ್ಥನೆ ಇದೆ.

ಈ ನಾಟಕ ಬರೆದು ಮುಗಿಸಿದ ಮೂರು ನಾಲ್ಕು ತಿಂಗಳಿಗೆ 'ಕನ್ನಡ ಶಾಮ' ಎಂಬ ವಿಡಂಬನೆ (Farce) ಯೊಂದನ್ನು ಬರೆದರು ರಂಗಾಚಾರ್ಯರು. ಅದೂ ಈಗ ಇಲ್ಲದಾಗಿದೆ. ಇದನ್ನು ಬರೆಯಲು ಪ್ರಚೋದನವಾಡಿದುದು ಒಂದು ಸಂಗತಿ. ೧೯೨೩ನೆಯ ಡಿಸೆಂಬರ ಸುಮಾರು, ಡೆಕ್ಕನ್ ಕಾಲೇಜಕ್ಕೆ ಕೆಲವು ಮೈಸೂರಿನ ವಿದ್ಯಾರ್ಥಿಗಳು ಬಂದರು. ಅವರಾಡುವ ಮಾತಿನ ರೀತಿಯು ಉತ್ತರ ಕರ್ನಾಟಕದವರಿಗೆ ನಗೆಯನ್ನುಂಟುಮಾಡಿತು. ಅದರಲ್ಲಿಯೂ 'ಗಂಟು ಬಿದ್ದಿತು' ಎಂಬ ಮಾತು, ಭಾಷೆಯ ರೀತಿಯು ಕಡೆಗೆ ಮನಸ್ಸನ್ನು ಜಗ್ಗಿತು. 'ಏನು ಗಂಟು ಬಿತ್ತು' ಎಂದು ಕೇಳಿದಾಗ, 'ನಮ್ಮ ಗಂಟು ಬಿದ್ದಿತು' ಎಂದು ಉತ್ತರ ಬಂತು. 'ಕೆಳಗೆ ಬಿತ್ತು' ಎಂಬರ್ಥದಿಂದ ಒಬ್ಬರು ಹೇಳಿದರು. 'ಸಂಧಿಸು' 'ಎದುರಾಗು' ಎಂಬರ್ಥವನ್ನು ಮಾಡಿಕೊಂಡರು ಮತ್ತೊಬ್ಬರು. ಭಾಷೆಗೆ ಪ್ರಾದೇಶಿಕ ಸ್ವರೂಪವಿದೆ. ಬೇರೆ ಬೇರೆ ಪ್ರದೇಶದಲ್ಲಿ ಅವೇ ಶಬ್ದಗಳನ್ನು ಬೇರೆ ಬೇರೆ ಅರ್ಥ-ಸಂದರ್ಭದಲ್ಲಿ ಬಳಸುವುದರಿಂದ, ಬೇರೆ ಬೇರೆ ಪ್ರದೇಶದವರು ಒಂದೆಡೆ ಸೇರಿದರೆ ಆಗುವುದು ಮೋಜು. 'ಕನ್ನಡ ಶಾಮ'ದಲ್ಲಿ ಇದೆ—ಇತ್ತು ಇಂತಹ ಮೋಜು.

ಅದರಲ್ಲಿ ಕನ್ನಡ ಭಾಷೆಯ ಅಂದಿನ ಅಸಾಹಾಯ್ಯ ಪರಿಸ್ಥಿತಿಯ ಬಣ್ಣನೆಯಿದೆ. ಪ್ರಾದೇಶಿಕ ವೈವಿಧ್ಯ ಒಂದು ಕಡೆ; ಸ್ಥೂಲವಾಗಿ, ಮೈಸೂರು ಕನ್ನಡ; ಉತ್ತರದ ಕನ್ನಡ. ಉತ್ತರದಲ್ಲಿ, ಧಾರವಾಡ ಕನ್ನಡ; ಕಾರವಾರ ಕನ್ನಡ; ಬೆಳಗಾವಿ ಕನ್ನಡ; ವಿಜಾಪುರ ಕನ್ನಡ. ಬಳ್ಳಾರಿ ಕನ್ನಡ, ಮಂಗಳೂರ ಕನ್ನಡ, ಕೊಡಗಿನ ಕನ್ನಡ ಎಂದೂ ವಿಭಾಗ ಮಾಡಬಹುದು. ಎಲ್ಲವೂ ಕನ್ನಡವಾಗಿದ್ದರೂ ಅಲ್ಲಲ್ಲಿಯ ಸ್ಥಾನಿಕ ಬಳಕೆಯ ಮೂಲಕವೂ ಸಮೀಪದ ಪರಭಾಷೆಯ ಪ್ರಭಾವದಿಂದಲೂ ಅಲ್ಲಲ್ಲಿಯ ಭಾಷೆಯ ರೂಪವೆ ಬದಲಾಗುವುದು. ಇದರಿಂದ ಒಮ್ಮೊಮ್ಮೆ 'ಇದು ಕನ್ನಡ'ವೆ ಎಂಬ ಸ್ಥಿತಿಗೆ ಬರಬೇಕಾಗುವುದು. ಎರಡನೆಯ ದಾಳಿಯು, ಕನ್ನಡದ ಮೇಲೆ— ಹೆಚ್ಚಾಗಿ ಉತ್ತರದ ಕನ್ನಡದ ಮೇಲೆ—

ಮರಾಠಿಯದು. ಕನ್ನಡದಲ್ಲಿ ಮರಾಠಿಯ ಪದಪ್ರಯೋಗ ಮಾಡುವುದು ಅಸಹ್ಯವಾಗಿತ್ತು. ' ನಮಗೆ ಸೇರುತ್ತದೆ ' ಎಂದು ಇದ್ದಲ್ಲಿ ' ನಮಗ ಆವಡತದ' ಎಂದೂ ' ಅದನ್ನು ಅಂಟಿಸು' ಎಂದಿರಬೇಕಿದ್ದಲ್ಲಿ 'ಅದನ್ನು ಚಿಟಕಾಯಿಸೊ' ಎಂಬದೂ ತಲೆತಿನ್ನುವ ವಿಷಯವಾಗಿತ್ತು. ಮೂರನೆಯದು, ಆರ್ಯಭಾಷೆಯ ಪ್ರಭಾವ- ಸಂಸ್ಕೃತ ಶಬ್ದಗಳಿರಬೇಕೆಂದು ಒಂದು ಪಕ್ಷ. ಈ ಮೂರು ಪಕ್ಷದವರ-ಶ್ರಾದ್ಧವನ್ನು ಮಾಡಲೋಸುಗ ಅದೇ ತಲೆಯೆತ್ತುತ್ತಿದ್ದ ಅಚ್ಚ ಕನ್ನಡದ ತಲೆತಿರುಕರು. ಆಗ ಕನ್ನಡವು ನಾಲ್ಕು ಮೊಗದ 'ಬ್ರಹ್ಮ' ವಾಗಿತ್ತು. ಒಬ್ಬರ ಮಾತು ಮತ್ತೊಬ್ಬರಿಗೆ ಸಂಪೂರ್ಣವಾಗಿ ತಿಳಿಯುತ್ತಿರಲಿಲ್ಲ; ನಾಲ್ವರ ಮಾತುಗಳೂ ನಾಲ್ಕು ದಿಕ್ಕನ್ನೇ ತೋರಿಸುತ್ತಿದ್ದುವು. ಇದೇ ಮೋಜು. ಅದೇ ಚಿತ್ರಿತವಾಗಿದೆ 'ಕನ್ನಡ ಶಾಮ'ದಲ್ಲಿ. ಭಾಷೆಗೆ ವೈವಿಧ್ಯವಿರ ಬೇಕೆಂದು ಕೆಲವರ ಮತವಿದೆ. ಆದರೆ ಏಕಸೂತ್ರತೆ ಬೇಡವೆಂದು ಯಾರೂ ಅನ್ನಲಾರರು. ಒಬ್ಬರ ಮನಸ್ಸಿನಲ್ಲಿಯದನ್ನು ಮತ್ತೊಬ್ಬರು ತಿಳಿದುಕೊಳ್ಳಲು ಭಾಷೆಯೆ ಯೋಗ್ಯ ಮಾಧ್ಯಮ.

ಕನ್ನಡಿಗರು ಪರಪ್ರಾಂತಕ್ಕೆ ಕಲಿಯಲು ಹೋಗುತ್ತಿದ್ದುದರ ಒಂದು ಒಳ್ಳೆಯ ಪರಿಣಾಮವು ಕಂಡುಬರುವುದು. ವಿಚಾರಿಗಳಿಗೆ, ಕನ್ನಡದ-ಕರ್ನಾಟ ಕದ-ಅಸಾಹಾಯ್ಯಕೆಯ ಚಿತ್ರವು ಸ್ಪಷ್ಟವಾಗಿಬರುತ್ತಿತ್ತು. ಎರಡನೆಯ ಪ್ರಾಂತ ದೊಂದಿಗೆ ತುಲನೆ ಮಾಡುವಾಗ ನಮ್ಮ ನಾಡಿನ ಪರಡಿಯು ಪಾತಾಳವನ್ನು ಮುಟ್ಟುತ್ತಿದ್ದುದರ ಅರಿವು ಬರುತ್ತಿತ್ತು. ತಾರುಣ್ಯದಲ್ಲಿ ಉಕ್ಕುತ್ತಿರುವ ಉತ್ಸಾಹದ ಮೂಲಕ ತಾಯ್ನಾಡಿಗೆ ತನ್ನ ಸೇವೆಯನ್ನು ಸಲ್ಲಿಸಬೇಕೆಂದು ಹುಮ್ಮಸ್ಸು ಬರುವುದು. ಯಾವುದೊಂದು ದಿಕ್ಕಿಗೆ ಕಾರ್ಯ ಮಾಡಲು ತೊಡಗಿದರೆ ಮತ್ತೊಂದು ಹಿಂದು ಬೀಳುವುದಲ್ಲ, ಎಂದು ಕಳವಳವಾಗುವುದು. ತನ್ನಂತೆ ಇತರ ಕಲಿತ ಕನ್ನಡಿಗರು ಕಾರ್ಯಮಾಡುವುದಿಲ್ಲವಲ್ಲ, ಎಂದು ರೊಚ್ಚು. 'ಅವರು ಮಾಡದಿದ್ದರೆ ಬಿಡಲಿ ನನ್ನಲ್ಲಿಯ ಉತ್ಸಾಹಕ್ಕೇನು ಕಡಿಮೆ' ಎಂದು ಸುತ್ತಲೂ ಕೈಹಾಕಲು ಹೋಗುವುದು ತಾರುಣ್ಯದ ಉತ್ಸಾಹ. ದಿನಕಳೆ ದಂತೆ ಅನುಭವವು ಬರತೊಡಗಿ, ಕದಡಿದ ನೀರು ತಿಳಿಗಟ್ಟುವಂತೆ, ಸುತ್ತಲಿನ ಹತ್ತೆಂಟು ಧ್ಯೇಯಗಳು ಬತ್ತಿ, ಹರಿದಾಡುವುದು ನಿಂತು, 'ತನ್ನ'ದೆಂದು ಒಂದನ್ನು ಗುರಿಮಾಡಿಕೊಳ್ಳುವುದು ಮನ. ನಿಜವಾದ ಕಾರ್ಯವು ಆ ಮೇಲೆ.

ಪಾಠದಕಿಂತ ಪ್ರವಚನದಲ್ಲಿಯೆ ಆಚಾರ್ಯರ ಉತ್ಸಾಹವು ಉಪಯೋಗವಾಗುತ್ತಿತ್ತು. ಓದುವುದು ಬೇಸರ–ಓದಿದ್ದನ್ನೇ ಏನು ಓದುವುದು ಎಂದು. ನಿಯತಕಾಲಿಕ ಪರಿಕ್ಷೆಯೆಂದರೆ ತಲೆಶೂಲೆ. ಒಮ್ಮೆ ಆರು ತಿಂಗಳ ಪರಿಕ್ಷೆಯನ್ನು ತಪ್ಪಿಸಬೇಕೆಂದು ಮೂಡಿತು ಆಚಾರ್ಯರ ಮನಸ್ಸಿನಲ್ಲಿ. ಅದು ಇಂಟರದಲ್ಲಿದ್ದಾಗ. ಕಾಲೇಜದ ಮುಖ್ಯಾಧ್ಯಾಪಕರು ಆಗ ವಿಲ್ಕಿನ್‌ಸನ್‌ರು; ಅವರೆಡೆಗೆ ಹೋಗಿ ನಿಂತು: 'ನಾನು ಊರಿಗೆ ಹೋಗಬೇಕಾಗಿದೆ, ತಾಯಿಯ ಶ್ರಾದ್ಧ ಬಂದಿದೆ' ಎಂದರು. 'ಎಷ್ಟು ದಿನ ಬೇಕು ಅದಕ್ಕೆ' ಎಂದು ಕೇಳಿದರು ಮುಖ್ಯಾಧ್ಯಾಪಕರು. 'ಏನಿಲ್ಲೆಂದರೂ ೪–೫ ದಿನಗಳು ಬೇಕಾಗುವವು; ಮುಖ್ಯ ಧರ್ಮಕಾರ್ಯ' ಎಂದರು ಆಚಾರ್ಯರು, ಗಂಭೀರಭಾವವನ್ನು ತಾಳಿ. ಆಚಾರ್ಯರ ಮಾತಿನ ರೀತಿಯನ್ನೂ ಮುಖಮುದ್ರೆಯನ್ನೂ ನೋಡಿ, ನಿಜವಿರಬಹುದೆಂದು ನಂಬಿ, 'ಆಗಬಹುದು' ಎಂದು ಅಪ್ಪಣೆಕೊಟ್ಟರು. ಊರಿಗೆ ಜಿಗಿದರು ಆಚಾರ್ಯರು, ಪರೀಕ್ಷೆ ತಪ್ಪಿಸಿ. ತಾಯಿಯ ಶ್ರಾದ್ಧವು ನೆವವಾಗಿದ್ದರೂ ಪರೀಕ್ಷೆಯ ಶ್ರಾದ್ಧ ಮಾತ್ರ ಆಯಿತು.

ಹುಚ್ಚು ಹುಡುಗಾಟವು ಬಿಚ್ಚಿಬಯಲಿಗೆ ಬಂದಾಗ ಮೋಜು ಹೆಚ್ಚು. ವಿಲ್ಕಿನ್‌ಸನ್‌ರಿಗೆ 'ಶ್ರಾದ್ಧ' ಎಂಬ ಹೆಸರುಗೊತ್ತಿತ್ತು. ಆದರೆ ಅದರ ವಿಧಾನದ ಬಗೆಗೆ ಗೊತ್ತಿದ್ದಿಲ್ಲ. ಪಾಶ್ಚಾತ್ಯರಿಗೆ, ತಿಳಿದುಕೊಳ್ಳಬೇಕೆಂಬ ಕುತೂಹಲ ಹೆಚ್ಚು. ಒಮ್ಮೆ ಅವರು, ಕಾಲೇಜದ ಮತ್ತೊಬ್ಬ ಅಧ್ಯಾಪಕರಾದ ಎಂ. ಜಿ. ಶಾಸ್ತ್ರಿ, ಅವರು ಮಾತನಾಡುತ್ತ ಕುಳಿತಾಗ, ಸಹಜವಾಗಿ ಕೇಳಿದರು, 'ಶ್ರಾದ್ಧ' ಮಾಡಲು ವೇಳೆ ಎಷ್ಟು ಬೇಕು, ಎಂದು. ಅದಕ್ಕೇನು! ಹೆಚ್ಚೆಂದರೆ ೧ ಗಂಟೆ ಕಾಲ, ಎಂದು ಉತ್ತರವಿತ್ತರು ಶಾಸ್ತ್ರಿಗಳು. ಪಾಪ! ಶಾಸ್ತ್ರಿಗಳಿಗೇನು ಗೊತ್ತು ಆಚಾರ್ಯರ ಹುಡುಗಾಟ. ವಿಲ್ಕಿನ್‌ಸನ್‌ರು ಏನೂ ತಿಳಿಯಗೊಡಲಿಲ್ಲ ಶಾಸ್ತ್ರಿಗಳಿಗೆ.

ಪರೀಕ್ಷೆಯ ಕಾಲ ಮುಗಿದ ಮೇಲೆ ಆಚಾರ್ಯರು ಸಕಾಲಕ್ಕೆ ಬಂದು ಕಾಲೇಜನ್ನು ಸೇರಿದರು. ಮುಖ್ಯಾಧ್ಯಾಪಕರು ಕರೆಸಿದರು ಆಚಾರ್ಯರನ್ನು. ಅದರ ಕಾರಣವು ಆಚಾರ್ಯರಿಗೆ ತಿಳಿಯದು. ತಮ್ಮ ಉನ್ಮಾದದಲ್ಲಿಯೆ ಹೋದರು; ತಿರುಗಿ ಬರುವಾಗ ಮಾತ್ರ ಮೋರೆ ಪೆಚ್ಚಾಗಿತ್ತು. ಶಿಷ್ಯವೃತ್ತಿ ಸಿಗುತ್ತಿದ್ದ ವಿದ್ಯಾರ್ಥಿಯಿದ್ದು ಸುಳ್ಳು ಹೇಳಿ ಪರೀಕ್ಷೆ ತಪ್ಪಿಸಿದ್ದಕ್ಕೆ ಅವರ

ವೇತನವನ್ನು ನಿಲ್ಲಿಸಲಾಗುವುದೆಂದೂ ವಿಶ್ವವಿದ್ಯಾಲಯದ ಪರೀಕ್ಷೆಗೆ ಮುಂಚೆ ವಿದ್ಯಾಲಯದಲ್ಲಿ ಆಗುವ ಪೂರ್ವ ಪರೀಕ್ಷೆಯಲ್ಲಿ ಮೇಲೆ ಬಂದರೆ ವೇತನದ ಹಣವನ್ನು ತಿರುಗಿ ಕೊಡಲಾಗುವುದೆಂದೂ ನುಡಿದಿದ್ದರು ಮುಖ್ಯಾಧಾಪಕರು.

ಆಚಾರ್ಯರನ್ನು ಬಡಿದೆಬ್ಬಿಸಿದ ಹಾಗಾಯಿತು. ಮೊದಲಸ್ಥಾನ ಹೋಗುವುದಲ್ಲ, ಎಂದು ತಳಮಳ. ವಿದ್ಯಾರ್ಥಿ ವೇತನವನ್ನು ಕಸಿದು ಕೊಂಡರಲ್ಲ, ಎಂದು ಅವಮಾನ. ಕುನಸಿನ ಹಾವಿನಂತೆ, ಕಳೆದುಹೋದ ರತ್ನವನ್ನು ಪಡೆಯಬೇಕೆಂದು, ತಮ್ಮ ಜಾಣತನದ ಪ್ರದರ್ಶನವನ್ನು ಮಾಡ ಬೇಕೆಂದೂ ಪ್ರತಿಜ್ಞೆಯನ್ನುಮಾಡಿ ಪ್ರಾರಂಭಮಾಡಿದರು. ಇಷ್ಟಾಗುವುದ ರೊಳಗೆ ಜನೆವರಿ ತಿಂಗಳು ಮುಗಿಯುತ್ತ ಬಂದಿತ್ತು.

ಕಾಲೇಜದಲ್ಲಿ ನಡೆದ ಸಂಗತಿಯನ್ನು ಆಚಾರ್ಯರೇನು ಊರಿಗೆ ತಿಳಿಸಿದ್ದಿಲ್ಲ. ಆದರೆ ಹಿತಸಾಧನೆಯೆ ತಮ್ಮ ಗುರಿಯೆಂದು ಮಾಡಿಕೊಂಡ ಗೆಳೆಯರು, ಕಾಲೇಜದ ವೃತ್ತವನ್ನು ಆಚಾರ್ಯರ ಮನೆಗೆ ಮುಟ್ಟುವಂತೆ ಮಾಡಿದರು. ಮನೆಯಿಂದ ಮಾರುತ್ತರಗಳೂ ಸಿಡಿಮಾತುಗಳ ಪುಡಿಕೆಗಳೂ ಬರತೊಡಗಿದವು. ಅಭ್ಯಾಸದ ಒತ್ತಡ ಒಂದೆಡೆ, ಮನೆಯವರಿಂದ 'ಸನ್ಮಾನ' ಮತ್ತೊಂದೆಡೆ; ಕಾಲೇಜದಲ್ಲಿಯ ಅವಮಾನ ಮೂರನೆಯದಾಗಿ, ಆಚಾರ್ಯರ ಮನಃಶಾಂತಿ ಭಂಗವಾಗತೊಡಗಿತು. ತಮ್ಮ ಮನದುರಿಯನ್ನು ಹೊರಗೆಹಾಕಿ ಅದರ ಬೇಗೆಯನ್ನು ಕಡಿಮೆ ಮಾಡಿಕೊಳ್ಳುವುದು ಅವರ ಸ್ವಭಾವಕ್ಕೆ ಒಗ್ಗದು. ಒಳಗೆಯೆ ಹತ್ತಿಕ್ಕುವುದು. ಸಹನೆಗೂ ಒಂದು ಮಿತಿಯಿದೆ. ಮಿತಿಮೀರಿ ಹತ್ತಿಕ್ಕಿದರೆ, ಪುಟಿದು ಹೊರಗೆ ಬರುವುದು— ತನ್ನದೆ ಆದ ದಾರಿಯಿಂದ. ಹಾಗೆಯೆ ಆಯಿತು.

ತಮ್ಮ ಹಾವಭಾವಗಳ ಮೇಲೆ ಆಚಾರ್ಯರ ಅಳವು ತಪ್ಪತೊಡಗಿತು. ಓದುವುದು ನಿಂತಿತು. ತಲೆಯೂ ಗೋಡೆಯೂ ಕೇವಲ ಬಂಧುಗಳಾದರು. ಗೋಡೆಗೆ ತಲೆಯು ಹಾಯತೊಡಗಿತು. ತಲೆಯು ಗಟ್ಟಿಯೊ ಗೋಡೆಯು ಗಟ್ಟಿಯೊ ಎಂಬುದು ನಿರ್ಣಯವಾಗಬೇಕಾಗಿತ್ತು. ಇದರ ನಿರ್ಣಯದ ಮೊದಲೆ, ಪರೀಕ್ಷೆಯ ದಿನದ ನಿರ್ಣಯವು ಆಗಿಹೋಗಿತ್ತು. ಇವರ ತಲೆಯ ನಿರ್ಣಯಕ್ಕೆ ಬಂದರು, ಡಾಕ್ಟರರು. ಮೊದಲನೆಯದಾಗಿ, ಪರೀಕ್ಷೆಗೆ

ಕೂಡಬಾರದೆಂದೂ ಕುಳಿತರೆ, ಪರೀಕ್ಷೆಯ ಕಾಲದಲ್ಲಿ ಹಣೆಗೆ ಬರ್ಫವ ಪಟ್ಟಿಯನ್ನು ಬಡೆದುಕೊಂಡು, ಪರೀಕ್ಷೆ ಮುಗಿದಕೂಡಲೆ ಕತ್ತಲೆ ಕೋಣೆಯಲ್ಲಿ ಕಣ್ಣು ಮುಚ್ಚಿಕೊಂಡು ಕೂಡ್ರಬೇಕೆಂದೂ ವಿಧಿಸಿದರು.

ಪರೀಕ್ಷೆಯ ಮೊದಲ ದಿನ. ಆಚಾರ್ಯರ ಹಟವು ಡಾಕ್ಟರರ ಉಪದೇಶವನ್ನು ಕಡೆಗಣಿಸಿ, ತನ್ನ ಸ್ಥಾನವನ್ನು ಸಾಧಿಸಿಕೊಂಡಿತು. ಮೊದಲನೆಯ ಪೇಪರು, ಗಣಿತದ ಮೊದಲಭಾಗವಾಗಿತ್ತು. ಮೂರು ಗುಣಗಳಿಗೆ ಮಿಕ್ಕಿ ಸಿಕ್ಕಲಿಲ್ಲ ಆಚಾರ್ಯರಿಗೆ. ಹಟವು ಹಾರಿಹೋಯಿತು. ಬರ್ಫದ ಪಟ್ಟಿಯು ಬಂತು ಹಣೆಗೆ; ಕತ್ತಲೆ ಕೋಣೆಯವಾಸವೂ ಆಯಿತು ಕೆಲಕಾಲ. ಎರಡನೆಯ ಪೇಪರು ಸುಖವಾಗಿ ಸಾಗಿತು. ಮುಂದಿನ ದಿನಗಳು ಸಾವಧಾನವಾಗಿ ಕಳೆದವು. ಪರಿಣಾಮವೂ ಹೊರಬಿತ್ತು. ಆಚಾರ್ಯರಿಗೆ ಸಿಕ್ಕಿತ್ತು ಎರಡನೆಯ ತರಗತಿ: ಮೊದಲ ತರಗತಿ ತಪ್ಪಿತು. ಶಿಷ್ಯವೃತ್ತಿಯು ತಪ್ಪಲಿಲ್ಲ. ಕಳೆದುಕೊಂಡುದೂ ಮರಳಿಬಂತು. ಆಚಾರ್ಯರ ಮೊಗದಲ್ಲಿ ಗೆಲುವು ಕಾಣುತ್ತಿತ್ತು.

ಬಿ. ಎ. ವರ್ಗಕ್ಕೆ ಬಂದ ಕೂಡಲೆ ಬುದ್ಧಿ ಬಂತು ಆಚಾರ್ಯರಿಗೆ. ಗಣಿತ ವಿಷಯವು ಗುಣದೊರಕಿಸಲು ಅನುಕೂಲವಾದುದೇನೊ ನಿಜ. ಆದರೆ, ಲೆಕ್ಕದ ವಿಚಾರ ಒಮ್ಮೊಮ್ಮೆ ಕಕ್ಕಾವಿಕ್ಕಿಯಾಗಿ ಮಾಡುವುದು. ಬಂದರೆ ೧೦೦ಕ್ಕೆ ೧೦೦ ಗುಣ; ಇಲ್ಲದಿರೆ, ಒಂದೇ ಒಂದು—ಪೂಜಿಯೂ ಆಗಬಹುದು. ಗುಣಕ್ಕಾಗಿ ಲೆಕ್ಕದ ಅಧೀನವಾಗಬಾರದೆಂದು ತಮ್ಮ ಅಧೀನದಲ್ಲಿದ್ದುದು, ಲೆಕ್ಕಿಸದೆ ಗುಣಗಳನ್ನು ಪಡೆಯುಬಹುದೆಂಬುದು, ಮನೆತನದ ವಿಷಯವಾದ ಸಂಸ್ಕೃತವನ್ನೆ ಆಯ್ದುಕೊಂಡರು. ಜೊತೆಯ ಭಾಷೆ ಕನ್ನಡ. ಕನ್ನಡದ ಜೊತೆಯು ಅದೊಂದು ಸಾಹಸವನ್ನಾಗಿಯೆ ಮಾಡಿತು. ಡೆಕ್ಕನ್ ಕಾಲೇಜದಲ್ಲಿ ಕನ್ನಡ ಕಲಿಸುವ ಏರ್ಪಾಡು ಇದ್ದಿಲ್ಲ. ಆಚಾರ್ಯರು ಮುಂದೆ ಬಿದ್ದು ಮುಖ್ಯಾಧ್ಯಾಪಕರನ್ನು ಕಂಡು ತಾವು ಮನೆಯಲ್ಲಿ ಓದುವುದಾಗಿಯೂ ತಮಗೆ ಅನುಮತಿ ಕೊಡುವುದಾಗಿಯೂ ಬಿನ್ನವಿಸಿಕೊಂಡರು. ಆಚಾರ್ಯರ ಉತ್ಸಾಹಕ್ಕೆ ಅಪ್ಪಣೆ ಸಿಕ್ಕಿತು. ಮಿತ್ರರಿಬ್ಬರನ್ನು ಹುರಿದುಂಬಿಸಿ, ಕನ್ನಡವನ್ನು ಜೊತೆ ವಿಷಯವಾಗಿ ಮಾಡಿಕೊಳ್ಳಲು ಹೇಳಿದರಲ್ಲದೆ, ಅವರಿಗೆ ಕನ್ನಡದ ಅಭ್ಯಾಸವನ್ನು ಹೇಳುವ ಹೊಣೆಯನ್ನು ಹೊತ್ತುಕೊಂಡರು.

ಅಭ್ಯಾಸದ ಜೋರು ಹೆಚ್ಚಾದಂತೆ ಆಟದ ಜೋರು ಹೆಚ್ಚಾಯಿತು. ಗೆಳೆಯ ಮುದ್ಲಿಯಾರನು 'ನಾವಾಟ'ದ ಕಾರ್ಯದರ್ಶಿ ಇದ್ದುದರಿಂದ ಬೇಕಾದಾಗ ವಿಹರಿಸುವ ಆಸ್ಪದವಿತ್ತು. ಟೆನ್ನಿಸ್, ಕ್ರಿಕೆಟ್ಟುಗಳು ಬೇರೆ ಆಟಗಳು. ಟೆನ್ನಿಸ್‌ನಲ್ಲಿ ಗತಿಯು ಹಾಗೆ ಹಾಗೆಯೆ. ಆದರೆ ಕ್ರಿಕೆಟ್ಟಿನಲ್ಲಿ ತುಸು ಮುಂದೊರೆದಿದ್ದರು. ಅಲ್ಲಿ ಒಂದು ಅಪಘಾತವು ಆ ಆಟವನ್ನೂ ಬಿಡಿಸಿತು. ವಿಕೆಟ್ ರಕ್ಷಣೆಮಾಡುವಾಗ ಚಂಡು ಬಂದು ಬಲವಾಗಿ ಆಚಾರ್ಯರ ಮುಸುಡೆಗೆ ಬಡಿಯಿತು. ಎರಡು ಹಲ್ಲು ಕಳಚಿದುವು. ಹಲ್ಲು ಮುರಿಯುವಂತಹ ಸಿಟ್ಟೇನೊ ಆ ಚಂಡಿಗೆ!

'ಮುರಿದುದು ಹಲ್ಲು; ನನ್ನ ಮೂಗಿಗೇನಾಗಿದೆ' ಎಂದು ಮೂಗು ಮೇಲೆ ಮಾಡಿಕೊಂಡೆ ಇರುತ್ತಿದ್ದರು. ಎಂಥ ಏಟು ಬಿದ್ದರೂ ಆಚಾರ್ಯರ ಮೂಗು ಮೇಲೆಯೆಂಬುದನ್ನು ಸೂಚಿಸುವುದಕ್ಕೆ ಬಿ. ಎ. ದಲ್ಲಿ ಮೊದಲ ವರ್ಗದಲ್ಲಿ ಕಾಲೇಜಕ್ಕೆ ಮೊದಲಿಗರಾಗಿ ಬಂದರು. ೧೦೦ಕ್ಕೆ ೬೪ರಷ್ಟು ಗುಣಗಳು ಬಂದಿದ್ದುವು. ಕಾಲೇಜದ ಫೆಲೊಗಳಲ್ಲಿ ಮೊದಲಸ್ಥಾನ ಆಚಾರ್ಯರದು. 'ಆದ್ಯ' ಎಂಬ ಅಡ್ಡಹೆಸರಿಗೆ ಒಪ್ಪುತ್ತಾರೆ ಆಚಾರ್ಯರು!' ಎಂದವರನೇಕರು.



ನಾಲ್ಕನೆಯ ಸ್ಥಿತಿ:

# ಜಾಗಿರದಾರ

'ಆಚಾರ್ಯರು' ಆಯ್. ಸಿ. ಎಸ್‌ಕ್ಕೆ ಹೋಗುವವರಂತಲ್ಲ!' ಎಂದು ಸಹಾಧ್ಯಾಯಿಗಳು ಮಾತನಾಡುತ್ತಿದ್ದರು. ಕೆಲವರಿಗೆ ಆ ಸುದ್ದಿಯು ಮೋಜೆನಿಸಿರಬಹುದು. ಅದಕ್ಕೆಯೆ, 'ಏನು ಆಚಾರ್ಯರು! ಏನು ಅವರ ವೇಷಭೂಷಣ! ಎಲ್ಲಿಯ ಆಯ್. ಸಿ. ಎಸ್‌ಉ.' ಎಂದು ಅವರು ನಗೆಯಾಡಿದರು. ಆಚಾರ್ಯರಿಗಾಗಿ ಅಭಿಮಾನ ತಾಳುವವರು, 'ವೇಷವೇನು? ಬೆಳಗಾಗುವುದರೊಳಗೆ ಬದಲು ಮಾಡಲುಬಹುದು. ಮುಖ್ಯ ಬೇಕಾದುದು ಚಿಕ್ಕ ವಯಸ್ಸು-ಚುರುಕು ಬುದ್ಧಿ' ಎಂದು ಸಮರ್ಥಿಸುತ್ತಿದ್ದರು. ಅಂತಃಕರುಣಿ ಗೆಳೆಯರು ವಿಕಾರವಶರಾಗಿ, 'ನಮ್ಮ ಆಚಾರಿ ಮುಂದೆ ಜಜ್ಜ ಆಗುವವ' ಎಂದು ಹೆಮ್ಮೆಯ ಕೈಯಿಂದ ಎದೆ ತಟ್ಟಿಕೊಳ್ಳುತ್ತಿದ್ದರು.

ಆಚಾರ್ಯರ ಆಯ್. ಸಿ. ಎಸ್‌ದ ವಿಚಾರವು ಗೆಳೆಯರಿಗೆ ಗೊತ್ತಾದುದು, ಬಿ. ಎ. ಪರೀಕ್ಷೆಯಲ್ಲಿ ಮೊದಲನೆಯ ತರಗತಿಯಲ್ಲಿ ಬಂದ ನಂತರವೆ. ಆದರೆ ಆಚಾರ್ಯರಿಗೆ ಮಾತ್ರ ಬಿ. ಎ.ದ ಎರಡನೆ ವರುಷದ ಎರಡನೆಯ ಟರ್ಮಿನಲ್ಲಿಯೆ ಅದರ ವೇಧವು ತಗಲಿತ್ತು. ಎಲ್ಲರಕಿಂತಲೂ ಮುಂದೆ ಬಂದು ಮೆರೆಯಬೇಕೆಂದು ಹಂಬಲವಿದ್ದ ಆಚಾರ್ಯರಿಗೆ ಆಯ್. ಸಿ. ಎಸ್. ದ

ಮಾತು ಮೋಹಕವೆನಿಸಿತು. ಅಲ್ಲದೆ ಅಸಹಕಾರದ ಅಂದೋಲನದ ಜೋರು ಕಡಮೆಯಾಗಿದ್ದುದರಿಂದ 'ಸ್ವಾರ್ಥತ್ಯಾಗ'ದ ಮೋಹವು ಮಾಯವಾಗಿ, ಆತ್ಮಗೌರವದ ಆಸೆಯು ಕೊನರತೊಡಗಿತ್ತು. ಮುಂದಿನ ಗುರಿಯನ್ನೆ ಲಕ್ಷ್ಯವಾಗಿಟ್ಟುಕೊಂಡು ಬಿ. ಎ.ದ ಅಭ್ಯಾಸ ಸಾಗಿಸಿದ್ದರು. ಇಂಟರದಲ್ಲಿ ಒದಗಿದ ಅನವಸ್ಥೆಯನ್ನು ಮರೆಯಿಸುವಂತೆ ಮೇಲೆ ಬಂದರು ಆಚಾರ್ಯರು ಬಿ. ಎ.ದಲ್ಲಿ.

ಭಾರತದಲ್ಲಿಯೆ ನಡೆಯುತ್ತಿದ್ದ ಆಯ್. ಸಿ. ಎಸ್. ಪರೀಕ್ಷೆಗೆ ಕಟ್ಟಬೇಕೆಂದು ಹಂಬಲಿಸಿ, ಅರ್ಜಿ ಹಾಕಿದ್ದಾಯಿತು. ಸಂದರ್ಶನಕ್ಕೆ ಕರೆಯೂ ಬಂದಿತ್ತು. ಆದರೆ ಮನೆಯವರ ವಿಚಾರವು ಬದಲಾಯಿತು. ಆಚಾರ್ಯರ ಬುದ್ಧಿಯ ಆಳವನ್ನು ಕಂಡು, ಅವರು ಇಲ್ಲಿಯ ಪರೀಕ್ಷೆಗಿಂತಲೂ ಇಂಗ್ಲಂಡ ದಲ್ಲಿಯ ಪರೀಕ್ಷೆಯನ್ನೆ ಕಟ್ಟಬೇಕೆಂದು ನಿರ್ಧರಿಸಿದರು. ಒಂದು ವೇಳೆ ಆಯ್. ಸಿ. ಎಸ್. ಆಗದೆ ಹೋದರೆ 'ಬ್ಯಾರಿಸ್ಟರ' ಆಗಿಬರಲು ಅನುಕೂಲ ವಾಗುವುದೆಂದು ಎಣಿಸಿ, ಇಲ್ಲಿಯೆ ನಡೆಯುವ ಸಂದರ್ಶನವನ್ನು ಬಿಟ್ಟುಕೊಡು ವುದಾಗಿ ನಿಶ್ಚಯವಾಯಿತು.

ಗೆಳೆಯರಿಗೆ, ಸಂಬಂಧಿಕರಿಗೆ ಉಬ್ಬು. ಆಚಾರ್ಯರ ಮೊಗವೂ ಅರಳಿತು. ಹೆಜ್ಜೆಯು ದಿನದಿನಕ್ಕೆ ಮುಂದೆ ಬೀಳತೊಡಗಿತು. ಮುಂದರಿವ ಹೆಜ್ಜೆಯಂತೆಯೆ ಆಚಾರ್ಯರ 'ಮೂಗು' ಮೇಲಕ್ಕೇರತೊಡಗಿತು. ಹೊಸ ಹುರುಪು ಸೂಸತೊಡಗಿತು. ಸನ್ಯಾಸಿಯ ಮದುವೆಗೆ ಜುಟ್ಟು ಜನಿವಾರದಿಂದ ಮೊದಲಾಗಬೇಕೆಂಬಂತೆ, ಆಚಾರ್ಯರ ಸಂಚಾರದ ಸಿದ್ಧತೆಯು ಜುಟ್ಟಿನಿಂದಲೆ ಪ್ರಾರಂಭವಾಯಿತು. ನುಣ್ದಲೆಯು ಕಪ್ಪಾಗತೊಡಗಿತು. ಗೋಪಾದವು ಭೂಮಿಗಿಳಿಯಿತು. ತಲೆಯು ಬೆಳೆಯುವ ಚಿನ್ಹವು ತೋರತೊಡಗಿತು. ಮೀಸೆಯ ಕುಡಿಯು ತೀಡಲ್ಪಟ್ಟಿತು.

ಇಂಗ್ಲಂಡಕ್ಕೆ ಹೋಗಿಬರುವ ವೆಚ್ಚವು ನಿಜವಾಗಿಯೂ ಕಂಗೆಡಿಸುವಂತೆ ಇತ್ತು. ಆದರೆ, ಕಲಿಸಿದರೆ 'ಆಚಾರ್ಯ'ರು ಮುಂಬರುವ ಚಿನ್ಹಗಳು ಹೆಚ್ಚಾಗಿ ತೋರಿದ್ದರಿಂದ, ಸಾಲವಾದರೂ ಚಿಂತೆಯಿಲ್ಲ, ಅವರನ್ನು ಇಂಗ್ಲಂಡಕ್ಕೆ ಕಳುಹಿಸಬೇಕೆಂದು ಮನೆಯವರ ಮನದಲ್ಲಿ ಮೂಡಿತು. ದುಡ್ಡಿಗಾಗಿ ಅಲ್ಲಲ್ಲಿ

ಆಡ್ಡಾಡಬೇಕಾಯಿತು. ಸಾಹುಕಾರರಿಂದ ಕೆಲವು ಹಣ. ಇಚಲಕರಂಜಿಯ ಜಾಗೀರಿನವರಿಂದ ಕೆಲಮಟ್ಟಿಗೆ ಸಹಾಯವಾಯಿತು. ಮುಂಬಯಿಯ ಹಿಂದು ಎಜ್ಯುಕೇಶನ್ ಸೊಸಾಯಿಟಿಯವರು ಹೆಚ್ಚು ಹೊಣೆಯನ್ನು ವಹಿಸಿದರು. ಇದೆಲ್ಲವೂ ಸಾಲವೆ. ವಿದ್ಯಾರ್ಜನೆಗಾಗಿಯೆ ಸಾಲಕೊಡುವ ಸಂಸ್ಥೆಗಳಿದ್ದುದರಿಂದ ಬಡ್ಡಿಯ ಭಾರವು ಕಡಮೆಯಿತ್ತು. ಅಂತೂ ಭಾರತದ ದಂಡೆಯನ್ನು ಬಿಡುವಮುನ್ನ ಆಚಾರ್ಯರಿಗಾಗಿ ಸುಮಾರು ಹನ್ನೆರಡುಸಾವಿರ ರೂಪಾಯಿಗಳು ಸಿದ್ಧವಾಗಿದ್ದವು.

ಅಲ್ಲಲ್ಲಿ ಸತ್ಕಾರ ಸಮಾರಂಭಗಳಾಗತೊಡಗಿದುವು. 'ತನ್ನ ಜನರನ್ನು ಬಿಟ್ಟು ಹೋಗುವೆನಲ್ಲ' ಎಂದು ಒಳಗೆಯೆ ಕಳವಳ. ಮುಂದಿನ ಮಾನಕ್ಕಾಗಿ ಇಂದಿನ ದುಮ್ಮಾನ ಸಹಿಸಲೇಬೇಕೆಂದು ಅದನ್ನು ಹತ್ತಿಕ್ಕಿಡುತ್ತಿದ್ದರು. ಹೊಸ ಅನುಭವಕ್ಕಾಗಿ ಹುರುಪು. ತಾಯಿನಾಡಿನಿಂದ ಅಗಲಲು ಅಳುಕುತ್ತಿದ್ದಿತು ಮನವು. ತಾಯಿತೀರಿದ ಮೇಲೆ ನಿಜವಾಗಿ ದುಃಖವಾದುದು ಈ ಕಾಲಕ್ಕೆಯೆ. ಉತ್ಸಾಹ–ಉಮ್ಮಳದ ತಳಕಿನಿಂದ ವಿಚಿತ್ರವಾದ ವಿಕಾರವಾಗುತ್ತಿತ್ತು. ಅದರ ಛಾಯೆಯು ಮೊಗದಮೇಲೆ ಬಾರದಿರಲಿಲ್ಲ.

೧೯೨೫ನೆಯ ಎಪ್ರಿಲ್‌ದಲ್ಲಿ ಬಿ. ಎ. ಪರೀಕ್ಷೆಯಾಯಿತು. ಜೂನದಲ್ಲಿ ಪರಿಣಾಮು ತಿಳಿದು ಬಂತು. ಕಾಲೇಜದ ಮೊದಲ ಫೆಲೊ ಆದರು ಆಚಾರ್ಯರು. ಅಗಸ್ಟದಲ್ಲಿ ಭಾರತದ ಆಯ. ಸಿ. ಎಸ್. ಪರೀಕ್ಷೆಗೆ ಕರೆಬಂದುದು. ಕರೆ ಬರುವ ಮುಂಚೆಯೆ ವಿಚಾರ ಬದಲಾಗಿ ಪರದೇಶದ ಸಂಚಾರಕ್ಕಾಗಿ ಸಿದ್ಧತೆ ನಡೆಯಿತು. ಫೆಲೊ ಆಗಿ ಪಡೆದ ವೇತನವನ್ನು ಹಿಂತಿರುಗಿ ಕೊಡಬೇಕಾಯಿತು. ಸಪ್ಟಂಬರ ೩ನೆಯ ತಾರೀಖಿಗೆ ಸಿದ್ಧವಾಗಿತ್ತು, ಆಚಾರ್ಯರಿಗಾಗಿ ಪಾಸಪೋರ್ಟು. ಸಪ್ಟಂಬರ ೧೯ಕ್ಕೆ ಭಾರತದ ದಂಡೆಯನ್ನು ಬಿಟ್ಟರು ಆಚಾರ್ಯರು.

ತಾಯಿಯನ್ನು ಕಳೆದುಕೊಂಡು 'ತಾನು ತಾನಾದ' ಸ್ಥಿತಿ ಬಂದಾಗಲೆ ಹೊಣೆಗಾರಿಕೆಯ ಅರಿವು ಬಂದಿತ್ತು. ಅದೆಲ್ಲವೂ ಹುಡುಗತನದಲ್ಲಿಯಾದುದು. ಇಂದು ತಾಯನಾಡನ್ನು ಬಿಟ್ಟು ಬೇರೆನಾಡಿಗೆ ಹೋಗುವುದು 'ವಿರಹ' ದುಃಖವನ್ನುಂಟು ಮಾಡಿತು. ನಿಜವಾಗಿಯೂ ದುಃಖವಾಯಿತು. ತಾಯಿಯನ್ನು

ಕಳೆದುಕೊಂಡಾಗ ಪರದೇಶಿಯಾದುದು, ಇಂದು ಸ್ವಜನರನ್ನು ಬಿಟ್ಟು ನಿಜ ವಾಗಿಯೂ 'ಪರದೇಶಿ'ಯಾಗುವ ಯೋಗ ಬಂತು. ಆದರೆ ವಿರಹದ ಅನು ತಾಪವು ಕಡಮೆಯಾಗತೊಡಗಿತು, ಹಡಗವು ನಡೆಯತೊಡಗಿದಕೂಡಲೆ. ಅದು ಮುಂದೆ ಮುಂದೆ ಸಾಗಿದ ಹಾಗೆಲ್ಲ ಮುಂದೆ ಒದಗಿಬರುವ ವಿಚಾರ ಗಳೆ ಬರತೊಡಗಿದುದರಿಂದ ದುಃಖದ ಉಮ್ಮಳವು ಅಡಗಿತು.

ಆಚಾರ್ಯರಿಗೆ ಎಲ್ಲವೂ ಹೊಸದೆ. ಮನೆಯಲ್ಲಿ 'ರಂಗ'ನೆಂದು ಕರೆಯುವ ರೂಢಿ. 'ರಂಗ'ನೆಂದು ಕರೆಯುವ ಗೆಳೆಯರೂ ಅನೇಕ. 'ಆಚಾರಿ' ಎಂಬುದು ಕಾಲೇಜದಲ್ಲಿ ಪಡೆದ ಬಿರುದು. ಕಾಲೇಜದಲ್ಲಿರುವಾಗ 'ಆಚಾರಿ' ಎಂದೂ, 'ಆಚಾರ್ಯ' ಎಂದೂ 'ಆದ್ಯ' 'ಅಗರಖೇಡ' ಎಂದೂ ಕರೆಯುತ್ತಿದ್ದರು. ಆದರೆ ಈಗ 'ಆಚಾರಿ' ಮರೆಯಾಗಿ, 'ಮಿ. ಜಾಗಿರದಾರ' ಉದಯವಾಗಿದ್ದರು. ವೇಷವು ಆಚಾರಿಗೆ ಒಪ್ಪು ವುದಲ್ಲ. 'ಆಚಾರಿ' ಎಂದು ಕರೆಯುವ ಗೆಳೆಯರು ಸನಿಹದಲಿಲ್ಲ. ಯಾರು ಮಾತನಾಡಿದರೂ 'ಜಾಗಿರದಾರ' ಎಂತಲೆ. ಮೊದಲು ಮೊದಲು ಶಾಲೆಯ-ಕಾಲೇಜದ ರಜಿಸ್ಟರುಗಳಲ್ಲಿ ಬರೆಯುತ್ತಿದ್ದರೂ ಕರೆಯುತ್ತಿರಲಿಲ್ಲ. ಸಾಂಪ್ರ ದಾಯ ವಿರೋಧವು ಪ್ರಾರಂಭವಾಯಿತು. ಪೂರ್ವದಲ್ಲಿ 'ಆಚಾರಿ'ಯ ಅಸ್ತವಾಗಿ ಪಶ್ಚಿಮದಲ್ಲಿ ಉದಯವಾಯಿತು ಜಾಗಿರದಾರರದು.

ಹಟವು ಎಷ್ಟು ಅನುಕೂಲ ವಾತಾವರಣವನ್ನು ಕಲ್ಪಿಸಿಕೊಡುವುದಲ್ಲ! ಹಟದಿಂದ ಮಾಡುತ್ತಲಿದ್ದ ಸಂಗತಿಗಳು ಚಟವಾಗಲು ತೊಡಗುವುವು. ಎಳೆಯತನದಿಂದಲೂ ಹಟವನ್ನು ಸಾಧಿಸಿ, ಹಟವು ಜಾಗಿರದಾರರ ಚಟವಾಗಿ ಬಿಟ್ಟಿತ್ತು. ಸಮುದ್ರದ ಮೇಲೆ ಇದು ಮೊದಲನೆಯ ಸಲ ಪ್ರಯಾಣ ಮಾಡಿದುದು. 'ಆಚಾರ್ಯ' ಕುಲೋತ್ಪನ್ನರಾದುದರಿಂದ, ಜುಟ್ಟು-ಜನಿವಾರ ಗಳಿಂದಲಕ್ಕೃತರಾದುದರಿಂದ, ದೇಶದಲ್ಲಿದ್ದಾಗ ಆಹಾರ-ವಿಹಾರಗಳಲ್ಲಿ ಹೆಚ್ಚಾಗಿ ಬಿಗುವು ಇದ್ದಿತು. ಪರದೇಶಯಾತ್ರೆಗೆ ಸಿದ್ಧರಾದ ಆಚಾರ್ಯರು ಆಹಾರ-ವಿಹಾರದ ಬಗೆಗೆ ವಿಚಾರಿಸಿದ್ದರು. ಆದರೆ 'ಯಾವುದೂ ತಮಗೆ ಮೀರಿ ದ್ದಲ್ಲ' ಎಂಬ ,ಮಂತ್ರಬಲದಿಂದಲೆ ಸಾಗಬೇಕೆಂದು ನಿರ್ಧರಿಸಿದ್ದರು. ನಿರ್ಧಾರವು ಹಟದಲ್ಲಿ ಪರಿಣಮಿಸಿತು. ಹಟದಿಂದ ಅದು ಚಟವಾಗಿ

ಬಿಟ್ಟಿತು. ಸಮುದ್ರ ಪ್ರಯಾಣದ ಆಯಾಸ ಆಗಲಿಲ್ಲ—ಆದಂತೆ ತೋರಗೊಡಲಿಲ್ಲ. ಮಾಂಸಾಹಾರವು ಸೇರತೊಡಗಿತು—ಸೇರುವುದಿಲ್ಲವೆಂದು ತೋರುತ್ತಿರಲಿಲ್ಲ. ‘ ಈ ವಾತಾವರಣಕ್ಕೆ ನಾನು ಹೊಸಬನಲ್ಲ ’ ಎಂಬ ತೋರಿಕೆಯನ್ನು ಇಟ್ಟುಬಿಟ್ಟಿದ್ದರು. ಮನಸ್ಸಿಗೆ ಒಗ್ಗದಿದ್ದರೂ ಹಟದಿಂದ ಅದು ಒಗ್ಗಿದೆಯೆಂದು ಜನತೆಗೆ ತೋರುತ್ತಿದ್ದರು. ದಿನ ಕಳೆದಂತೆ ಪ್ರಯತ್ನಪೂರ್ವಕ ತೋರಿಕೆಯು ಕಡಮೆಯಾಗತೊಡಗಿತು. ಹೊಸ ವಾತಾವರಣವು ಒಗ್ಗಿತು—ಒಗ್ಗಲೇಬೇಕಲ್ಲವೆ !

ಹೊಸವಾತಾವರಣಕ್ಕೆ ಮೊದಲನೆಯ ಆಹುತಿ: ಮೀಸೆ—ಕುಡಿಮೀಸೆ. ಭಾರತದ ಆವಾರದಲ್ಲಿದ್ದಾಗ ಸಾಕ್ಷಾತ್ ತಂದೆಯು ಜೀವಿಸಿದ್ದಾಗ ಮಗನು ಮೀಸೆ ಬೋಳಿಸುವುದೆಂದರೇನು ? ಮೀಸೆ ಬೋಳಿಸಿಕೊಳ್ಳುವ ಮಕ್ಕಳನ್ನು ಸಂಶಯದೃಷ್ಟಿಯಿಂದ ನೋಡುವ ತಂದೆಗಳು ಇಂದಿಗೂ ಇರುವಾಗ ಅಂದಿನ—ಗ್ರಾಚಾ ರ—ಮಾತೇನು ? ಆಚಾರ್ಯರು ಕ್ರಾಪು ಬಿಟ್ಟಿದ್ದರೂ ಮೀಸೆ ತೆಗೆದಿದ್ದಿಲ್ಲ. ಹಡಗವೇರಿದ :ಮೇಲೆ ‘ ತಮ್ಮನ್ನು ತಡೆಯುವವರಾರು ’ ಎಂಬ ಉನ್ಮಾದದ ಭರದಲ್ಲಿ ಮೀಸೆಯನ್ನು ಬೋಳಿಸಿದರು. ಪಶ್ಚಿಮದ ಸ್ವತಂತ್ರ ರಾಷ್ಟ್ರಗಳಿಗೆ ಹೋಗುವಾಗ ಮೀಸೆ ಬೋಳಿಸುವಷ್ಟು ಕೂಡ ಸ್ವಾತಂತ್ರ್ಯ ಬೇಡವೆ ? ಪಶ್ಚಿಮದ ಸ್ವಾತಂತ್ರ್ಯದ ಗಾಳಿಯ ಮೊದಲ ಹೊಡತವಿದು.

ಸ್ವಾತಂತ್ರ್ಯಗಳಿಸಲು ಹವಣಿಸುವಾಗ ತೊಂದರೆಗಳಿಗೇನು ಕಡಮೆ. ಮೇಲ್ದುಟಿಯು ಮೊದಲಸಲವೆ ಸ್ವಚ್ಛವಾದೊಡನೆಯೆ ತಂದಿತು ಅದರೊಂದಿಗೆ ತೊಂದರೆಯನ್ನು. ಈ ಪ್ರಯೋಗವಾದ ಮರುದಿನ ‘ ಏಡನ್ ’ ಬಂದರವನ್ನು ತಲುಪಿದ್ದರು. ಅಲ್ಲಿ ಪಾಸ್‌ಪೋರ್ಟು ತೋರಿಸಿದರು. ಅಧಿಕಾರಿಯು ಇವರನ್ನು ತಡೆದು, ‘ ಇದು ಯಾರದು ಪಾಸಪೋರ್ಟು ? ’ ಎಂದ. ‘ ಯಾಕೆ, ನನ್ನದು ’ ಎಂದರು ಜಾಗಿರದಾರರು, ನಸುವೆ ಗಾಬರಿಗೊಂಡಿದ್ದರೂ ತೋರಗೊಡದೆ, ‘ ಇದರಲ್ಲಿಯ ಫೋಟೊ ತಮ್ಮದಲ್ಲ ! ’ ಎಂದು ದರ್ಪದಿಂದ ನುಡಿದನು ಅಧಿಕಾರಿಯು. ಆಗ ಎಚ್ಚರಬಂತು ಜಾಗಿರದಾರರಿಗೆ. ಅವನಿಗೆ ತಿಳಿಸಬೇಕೆಂಬ ನುಡಿಯಲ್ಲಿ ಹೇಳಿದರು: ‘ ಇದು ನೋಡರಿ, ಈ ಫೋಟೊ, ನಮ್ಮ ದೇಶದಾಗ ತೆಗೆಸಿದ್ದು. ಅಲ್ಲಿಯ ಉಡುಪಿನಲ್ಲಿಯೆ ಇದೆ. ಬ್ರಾಹ್ಮಣರ

ಚಿನ್ಹವಾದ ಅಕ್ಷತೆಯೂ ಇದೆ. ಮೊಗದ ಮೇಲೆ ಮೀಸೆ ಇದ್ದಿತು. ಇಂದು ನಿಮ್ಮೆದುರು ನಿಂತಾಗ ವೇಷ-ಭೂಷಣ ಬದಲಾಗಿದೆ ' ಎಂದು ನಗುಮುಖ ಮಾಡಿ ನಿಲ್ಲುವಷ್ಟರಲ್ಲಿ, ಅಧಿಕಾರಿಗೆ ಈ ಅವತಾರ ಬದಲಾವಣೆಯು ಮೋಜೆನಿಸಿ, ಅವನೂ ಹೊಟ್ಟೆತುಂಬ ನಕ್ಕು, ಕೈಕುಲುಕಿಸಿ, ಸಾಗಗೊಟ್ಟನು. ' ಮೀಸೆ ಬೋಳಿಸಿದುದಕ್ಕೆ ಇದೇನು ಅಪಶಕುನ ' ಎನ್ನಿಸಿರಬೇಕು ಜಾಗಿರದಾರರಿಗೆ. ಆದರೆ ಅದನ್ನು ತೋರುವುದು ಹೇಗೆ ? ಅಂತೂ ಸನಾತನ ಸಾಂಪ್ರದಾಯ ದಂತಿದ್ದ ಮೀಸೆಯು ತರುಣ ಜಾಗಿರದಾರರ ಮೊಗದಿಂದ ಮಾಯವಾಯಿತು ಕೊನೆವರೆಗೆ.

ಪಶ್ಚಿಮಕ್ಕೆ ಸಾಗಿದಂತೆ ಪಾಶ್ಚಾತ್ಯರ ರೀತಿ ನಡೆವಳಿಗಳು ಮೈಗೂಡಿ ಕೊಳ್ಳತೊಡಗಿದ್ದುವು. ಸ್ವದೇಶದಲ್ಲಿದ್ದಾಗ ' ಸಕ್ಕರೆ ' ಪರದೇಶಿಯೆಂದು ಬಿಟ್ಟಿದ್ದರು. ಸ್ವದೇಶವನ್ನೆ ಬಿಟ್ಟಾಗ ಸಕ್ಕರೆ ಪರದೇಶಿಯೇಕಾಗಬೇಕು ? ಚಹಾ ಕುಡಿಯುವುದು ಸುರುವಾಯಿತು; ಸಿಗರೇಟು ಸೇದುವುದು ಮೊದಲಾಯಿತು.

ಆ ವಾತಾವರಣವನ್ನು ಮೈಮೇಲೆ ತೆಗೆದುಕೊಂಡು ತಮ್ಮದನ್ನಾಗಿ ಮಾಡಿಕೊಳ್ಳಲು ಇನ್ನೊಂದು ಕಾರಣವು ಇತ್ತು. ಸ್ವದೇಶದಲ್ಲಿದ್ದ ನಿರ್ಬಂಧವೆ ಅದು. ಇಲ್ಲಿದ್ದಾಗ ಏನಾದರೂ ಮಾಡಿದರೆ ಯಾರಾದರೂ ಏನಾದರೂ ಅನ್ನಬಹುದೆಂಬ ಭೀತಿ ಇತ್ತು. ಈಗ ಏನು ? ಅಲ್ಲಿ ತಡೆಯುವವರಾರು ? ಏನು ಮಾಡಿದರೂ ಯಾರೂ ಏನೂ ಅನ್ನುವಂತಿಲ್ಲವೆಂದಮೇಲೆ ಸ್ವಾತಂತ್ರ್ಯವು ಸ್ವೇಚ್ಛೆಯ ಗಡಿಗೆ ಆಗಾಗ ತಾಗತೊಡಗಿತು. ಅದೂ ಒಂದು ರೀತಿಯಿಂದ ಒಳ್ಳೆಯದೆ ಆಯಿತು. ಮಾನವನು ವಾತಾವರಣಕ್ಕೆ ತಕ್ಕಂತೆ ತನ್ನ ಸ್ವಭಾವ-ಚಟಗಳನ್ನು ಸರಿಪಡಿಸಿಕೊಳ್ಳದಿದ್ದರೆ, ವಾತಾವರಣವು ತಲೆಕುಕ್ಕಿ, ಜೀವಿತಕ್ಕೆ ಧಕ್ಕೆ ತರಲು ಹಿಂದು ಮುಂದೆ ನೋಡುವುದಿಲ್ಲ.

ಅಕ್ಟೋಬರ ೨ನೆಯ ತಾರೀಖು ಫ್ರಾನ್ಸದ ದಕ್ಷಿಣ ತಡಿಯ ಬಂದರವಾದ ಮಾರ್ಸೇಲಕ್ಕೆ ತಲುಪಿದರು. ಇಂಗ್ಲಂಡಕ್ಕೆ ಹೋಗುವವರೆಲ್ಲರು ಸಾಮಾನ್ಯ ವಾಗಿ ಇಲ್ಲಿಯೆ ಇಳಿದು ರೈಲುಮಾರ್ಗವಾಗಿ, ಪಾರಿಸ್-ಕ್ಯಾಲೆಕ್ಕೆ ಹೋಗು ವವರು. ಅಲ್ಲಿಂದ ಹಡಗು ಹತ್ತಿ ಡೋವರಕ್ಕೆ ತಲುಪುವರು. ಪ್ರವಾಸಿಕರ ಸಾಮಾನುಗಳು ಮಾತ್ರ ಜಿಬ್ರಾಲ್ಟರದ ಮೇಲಿಂದ ಜಲಮಾರ್ಗವಾಗಿಯೆ

ಸಾಗುವುವು. ಅಲ್ಲಿ ಸಮುದ್ರವು ಹೆಚ್ಚು ರಭಸದಲ್ಲಿರುವುದರಿಂದಲೂ ವೇಳೆಯು ಹೆಚ್ಚು ತಗಲುವುದೆಂದೂ ಫ್ರಾನ್ಸದಲ್ಲಿ ಹಾಯ್ದು ಹೋದಂತೆಯಾಗುವುದೆಂದೂ ಪ್ರವಾಸಿಕರು ಜಲಮಾರ್ಗವಾಗಿ ಮುಂದೆ ಸಾಗದೆ ರೈಲು ಹಿಡಿಯುವರು. ಅಕ್ಟೋಬರ ೫ನೆಯ ತಾರೀಖಿಗೆ ಜಾಗಿರದಾರರು ಲಂಡನ್ ಮುಟ್ಟಿದರು.

ಪ್ರವಾಸದಲ್ಲಿ ಅವರ ಸಂಗಡ ಡಿ. ಎ. ಧ್ರುವ ಎಂಬುವರು ಇದ್ದರು. ಅವರು ಆಕ್ಸಫರ್ಡ ವಿಶ್ವವಿದ್ಯಾಲಯದಲ್ಲಿ ಅಭ್ಯಾಸ ಮಾಡುತ್ತಿದ್ದರು. ರಜೆಗೆಂದು ಭಾರತಕ್ಕೆ ಬಂದು, ಮರಳಿ ಇಂಗ್ಲಂಡಕ್ಕೆ ಹೊರಟಿದ್ದರು. ಜಾಗಿರದಾರರಿಗೆ ಅವರ ಜೊತೆಯಿತ್ತು. ಒಮ್ಮೆ ಇಂಗ್ಲಂಡ ಕಂಡು ಬಂದವರಾದ್ದರಿಂದ ಧ್ರುವ ಅವರೆ ಮಾರ್ಗದರ್ಶಿಯಾದರು. ಅವರಾದರೂ ಎಷ್ಟು ದಿನ ದಾರಿ ತೋರುವರು ? ತಮ್ಮ ಸ್ಥಾನಕ್ಕೆ ಅವರು ತೆರಳಿದರು. ಜಾಗಿರದಾರರಿಗಾದರೂ ಹೆಚ್ಚು ದಿನ ದಾರಿ ತೋರುವ ಅವಶ್ಯಕತೆಯೆ ಇದ್ದಿಲ್ಲ.

ಲಂಡನ್ ಮುಟ್ಟಿದ ಒಂದು ತಿಂಗಳುವರೆಗೆ ಅಲ್ಲಿಯ ಒಂದು ಹೊಟೆಲಿನಲ್ಲಿಯೆ ವಾಸವಾಗಿದ್ದರು. ಮೊದಲನೆಯ ಕೆಲಸವೆಂದರೆ ಆ ಪಟ್ಟಣದ ಪರಿಚಯುವನ್ನು ಮಾಡಿಕೊಳ್ಳುವುದು. ಆ ಉದ್ದ ಈ ಉದ್ದ ಆರವತ್ತು ಮೈಲುಗಳ ವರೆಗೆ ಹಬ್ಬಿದ ಆ ಪಟ್ಟಣವನ್ನು ಬೇಗನೆ ತಿಳಿಯುವುದೆಂತು ? ತಕ್ಕಮಟ್ಟಿಗಾದರೂ ತಿಳಿವಳಿಕೆ ಬರಬೇಕೆಂದು ಜಾಗಿರದಾರರು ಒಂದು ಉಪಾಯವನ್ನು ಮಾಡಿದರು. ಬೆಳಗೆದ್ದು ನ್ಯಾಹರಿಯನ್ನು ಮುಗಿಸಿಕೊಂಡು ಮೊದಲು ಸಿಕ್ಕುವ 'ಮೋಟರ ಬಸ್'ನ್ನು ಹಿಡಿಯುವುದು. ಅದರ ಚಾಲಕನು ಟಿಕೇಟು ಕೊಡುವಾಗ 'ಎಲ್ಲಿಗೆ' ಎಂದು ಕೇಳಲು, 'ಈ ಬಸ್ಸು ಎಲ್ಲಿಯವರೆಗೆ ಹೋಗುತ್ತದೊ ಅಲ್ಲಿಯವರೆಗೆ' ಎಂದು, ಆ ಪಟ್ಟಣದಲ್ಲಿಯ ಎಲ್ಲ ಬಸ್ಸುಗಳಲ್ಲಿಯೂ ಅಡ್ಡಾಡಿ, ತುದಿಯಿಂದ ತುದಿವರೆಗೆ ಹೋಗಿ, ಬಸ್ಸಿನ ಅಂಕೆಗಳೂ ಅವುಗಳ ಮಾರ್ಗಗಳೂ ಪರಿಚಯುವಾದುವು. ಇದು ಪಟ್ಟಣದ ಮೇಲ್ಪದಿಯ ಸಂಚಾರವಾಯಿತು. ಲಂಡನ್ ಪಟ್ಟಣದಲ್ಲಿ ಹೋಗಿಬರುವ ಜನತೆ ಹೆಚ್ಚಿರುವುದರಿಂದ ಮೇಲ್ಪದಿಯ ಮಾರ್ಗ-ವಾಹನ ಸೌಕರ್ಯಗಳು ಸಾಲದಾಗುವುದರಿಂದ ನೆಲದ ಕೆಳಗೆ ರೇಲವೆ ಮಾರ್ಗಗಳನ್ನು ಮಾಡಿದ್ದಾರೆ. ಅದರದೊಂದು ಮೋಜಿನ ಸಂಗತಿಯೆ.

ಒಮ್ಮೆ ಜಾಗಿರದಾರರು ಕಾಲಾದಿಯ ಮೇಲೆ ನಿಂತಿದ್ದರು. ಎದುರು ನೋಡಿದರು. ಜನರು ಒತ್ತಡದಿಂದ ಸಾಗುತ್ತಿದ್ದರು. ಏನಿರಬಹುದೆಂಬ ಕುತೂಹಲದಿಂದ ಅವರನ್ನು ಹಿಂಬಾಲಿಸಿದರು. ಆ ಜನರು ಟಿಕೀಟುಕೊಂಡರು. ಇವರೂ ಒಂದು ಪಡೆದುಕೊಂಡರು. ಜನಗಳ ಗುಂಪು ಸಾಗುತ್ತಿದ್ದ ಕೋಣೆಯ ಕಡೆಗೆ ಸಾಗಿದರು. ಗಾಡಿ ಬರುವಮುನ್ನ ಕಾಯಲು ಕೋಣೆಯೆಂದು ತಿಳಿದು ಹೆದರಿಕೆಯಿಲ್ಲದೆ ಸುತ್ತುಮುತ್ತಲೂ ನೋಡುತ್ತ ನಿಂತಾಗ, ಆ ಕೋಣೆಯು ಒಮ್ಮೆಲೆ ಕೆಳಗಿಳಿಯತೊಡಗಿತು. ಜಾಗಿರದಾರರ ಎದೆಯಲ್ಲಿ ಧಡಧಡ; ಬಳೆದುಕೊಂಡರೆ ಬರುವಷ್ಟು ಮೋರೆ ಪೆಚ್ಚಾಗಿತ್ತು. ಅದು 'ಲಿಫ್ಟ' ಎಂದು ಮೊದಲು ತಿಳಿಯಲಿಲ್ಲ ಅವರಿಗೆ. ಅದರಲ್ಲಿ ತಮ್ಮ ಜೋಲಿ ಹಿಡಿದು ಕೊಂಡು ನಿಲ್ಲಬೇಕಾದರೆ ಸಾಕಾಯಿತು. ಸುರಂಗಮಾರ್ಗಗಳಿಗೆ ಮೇಲ್ಬದಿ ಯಿಂದ ಇಳಿಯಲು ಲಿಫ್ಟಿನ ಏರ್ಪಾಡು ಇರುತ್ತವೆ. ನಮ್ಮ ದೇಶದಲ್ಲಿ ರುವಂತೆ ೪-೬ ಜನರು ಹೋಗುವಷ್ಟು ಅವು ಚಿಕ್ಕವಿರುವುದಿಲ್ಲ. ದೊಡ್ಡ ಕೋಣೆಯಂತೆ ಇರುತ್ತವೆ. ಹೊಸ ದೇಶದಲ್ಲಿ ಎಲ್ಲವೂ ಹೊಸ ಅನುಭವಗಳೆ. ಆದರೂ ಅನುಭವವು ಮಾತ್ರ ಮೋಜೆನಿಸಿತು. ಮೋಜೆನಿಸಿದುದನ್ನು ಎಳೆಯ ಮಗುವಿನಂತೆ, ಅನೇಕಸಲ ಮಾಡಬೇಕೆನ್ನಿಸಿತು. ಲಂಡನ ಪಟ್ಟಣದ ಸುರಂಗ ಮಾರ್ಗಗಳನ್ನು ತಿಳಿಯುವುದಕ್ಕೆ ಎರಡು ಮೂರು ದಿನಗಳು ತಗಲಿದುವು ಜಾಗಿರದಾರರಿಗೆ. ಮೊದಲವಾರವು ಪಟ್ಟಣವನ್ನು ಪರಿಚಯಮಾಡಿಕೊಳ್ಳು ವುದರಲ್ಲಿಯೆ ಕಳೆಯಿತು. ಆನಂತರ ಎಲ್ಲಿ ಬೇಕಾದಲ್ಲಿಗೆ ಹೋಗಿ ಮರಳಿ ತಮ್ಮ ಬೀಡಿಗೆ ಬರುವದು ಸರಳವಾಯಿತು.

ಪಟ್ಟಣದ ಪರಿಚಯ ಮಾಡಿಕೊಳ್ಳುವ ಅವಸರದಲ್ಲಿ ಅಲ್ಲಲ್ಲಿ ಅಡ್ಡಾಡುವ ಪ್ರಸಂಗ ಬರುತ್ತಿದ್ದಿತು. ಎಲ್ಲ ಕಡೆಗೂ ಅಡ್ಡಾಡಿಬರಬೇಕೆಂದು ಕುತೂಹಲ. ಆದರೆ ಎಲ್ಲಿ ನೋಡಿದಲ್ಲಿಯೂ ಹೆಣ್ಣುಮಕ್ಕಳು ಇರುತ್ತಿದ್ದರು. ಇದೊಂದು ತೊಂದರೆಯಾಯಿತು. ಭಾರತದ ಸಮಾಜದ ರೀತಿ-ನೀತಿ-ನಡೆವಳಿಗೆ ತಕ್ಕಂತೆ, ಭಾರತದ ಹೆಂಗಳೆಯರು, ಸಮಾಜದ ಘಟಕವಾಗಿದ್ದರೂ, ಸಮಾಜದಲ್ಲಿ ಬೆರೆಯುವುದಿಲ್ಲ. ನಮ್ಮ ನಾಡಿನವರು ಮಾತನಾಡಿಸುವ ಹೆಂಗಳೆಯರೆಂದರೆ, ಮನೆಯಲ್ಲಿಯ ಅವ್ವ, ಅಕ್ಕ, ತಂಗಿ, ಮೊದಲಾದ ಸಂಬಂಧಿಕರೆ. ಕೇವಲ ಗೆಳೆತನದ ಸಂಬಂಧದಿಂದ ಗಂಡಸರು ಹೆಂಗಸರು ಕೂಡಿ, ಕಲೆಯುವ ರೂಢಿ

ನಮ್ಮಲ್ಲಿಲ್ಲ. ಇಂತಹ ವಾತಾವರಣದಲ್ಲಿ ಇಪ್ಪತ್ತೊಂದು ವರುಷ ಬೆಳೆದು ಮೈಗೂಡಿಸಿಕೊಂಡು, ಒಮ್ಮೆಲೆ ಅಲ್ಲಿಯ ವಾತಾವರಣವನ್ನು ಕಂಡು ಆಚ್ಚರಿ; ಹೆಣ್ಣುಮಕ್ಕಳು ಸಮೀಪ ಬಂದರೆ ಗಾಬರಿ; ಮೈಮುದುಡಿಕೊಂಡು ದೂರ ಸರಿಯುವುದು. ಮಾತನಾಡುವ ಪ್ರಸಂಗ ಬಂದರೆ, ಆ ಪ್ರಸಂಗದಿಂದ ಪಾರು ಮಾಡಲು ಬೇಕು ಕರವಸ್ತ್ರ-ಬೆಮರೊರೆಸಲು. ಈ ಹೊಸ ವಾತಾವರಣವನ್ನು ಮೈಗೂಡಿಸಿಕೊಳ್ಳಲು ಕೆಲದಿನಗಳು ಬೇಕಾದುವು ಜಾಗಿರದಾರರಿಗೆ. ಬಳಿಕೆ ಹೆಚ್ಚಾಗಬೇಕೆಂದು ಪಾಶ್ಚಾತ್ಯರ ಕುಣಿತವನ್ನು ಕೆಲದಿನಗಳಲ್ಲಿಯೆ ಕಲಿತರು. ಅದರಿಂದ ಸಮಾಜದ ಭೀತಿಯು ಕಡಮೆಯಾಯಿತು. ಆ ಮೇಲೆ ಆನ್ನಿಸ ತೊಡಗಿತು, ಗಂಡಸರು ಹೆಂಗಸರು ಕೂಡಿ ಕೆಲೆಯುವುದರಿಂದ ಸುಳ್ಳುಗಾಬರಿ ಕಡಮೆಯಾಗಿ, ಮಾನವನ ಸ್ವಾಭಾವಿಕ ವಿಕಾರವು 'ಗೆಳೆತನದ ಅಂತಃಕರಣದಲ್ಲಿ ಅಡಗುವುದು' ಎಂದು.

ಪರದೇಶಕ್ಕೆ ಹೋಗುವವರ ದೇಹವು ಸುದೃಢವಾಗಿಯೂ ಅಂಗಾಂಗಗಳು ಕಾರ್ಯಕುಶಲವಾಗಿಯೂ ಇರಬೇಕೆಂಬುದರ ಅರಿವು ಬಂತು ಜಾಗಿರದಾರರಿಗೆ ಅಲ್ಲಿ ಹೋದಮೇಲೆ. ಅಲ್ಲಿಯ ಊಟದಲ್ಲಿ 'ಸೂಪ್' (Soup) ಎಂಬದೊಂದು ಇರುವುದು. ಅದನ್ನು ಚಮಚೆಯ ಸಹಾಯದಿಂದ ಸೀಪಬೇಕಾಗುವುದು. ಜಾಗಿರದಾರರು ಮೊದಲನೆಯ ದಿನ ಅದರ ಸವಿ ನೋಡಬೇಕೆಂದು ಸೀಪಿದರು. ಒಳ್ಳೆ ಸೊಗಸಾಗಿತ್ತು. ಆದರೆ ಸೀಪಲು ಮಾತ್ರ ಅನಾನುಕೂಲ; ಕಾಲೇಜದಲ್ಲಿದ್ದಾಗ ಜಾಗಿರದಾರರು ತಮ್ಮ ಮುಂದಿನ ಎರಡು ಹಲ್ಲುಗಳನ್ನು ಕ್ರಿಕೆಟ್ ಆಟದಲ್ಲಿ ಮುರಿದುಕೊಂಡಿದ್ದರು. ಆ ಸಂದಿನೊಳಗಿಂದ ಸೀಪುವಾಗ ಸೋರುತ್ತಿತ್ತು 'ಸೂಪು'. ನಾಲಗೆಯನ್ನು ಜೋರಿನಿಂದ ಒತ್ತಿ ಸೀಪಿದರೆ ಸಪ್ಪಳವಾಗುತ್ತಿತ್ತು. ಅದು ಅಲ್ಲಿಯ ಸಮಾಜ ನೀತಿಗೆ ವಿರುದ್ಧ. ಇಂಥ ಸೊಗಸಾದುದನ್ನು ಬಿಟ್ಟು ಏಳುವದು ಹೇಗಾಗಬೇಕು ವಿಜಯಪುರದವರಾದ ಜಾಗಿರದಾರರಿಗೆ? 'ಎಲ್ಲಿಯ ಸಮಾಜನೀತಿ? ಎತ್ತಿ ಕುಡಿದು ಬಿಡೋಣ' ಎನಿಸುತ್ತಿತ್ತು. ಆದರೆ ಮರುಕ್ಷಣವೆ, 'ಇಂಗ್ಲಂಡವ ವರೆಗೆ ಬಂದು ನಮ್ಮ ಅಸಡ್ಡಾಳತನ ತೋರಿಸಬೇಕೆ?' ಎಂದು ಸ್ವಾಭಿಮಾನವು ಮೇಲೇರಿಬರುತ್ತಿತ್ತು. 'ಈಗ ಎಷ್ಟು ಬಾಯಿಗೆ ಬೀಳುತ್ತದೊ ಬೀಳಲಿ;

ಮುಂದಿನ ವೇಳೆಗೆ ಹಲ್ಲು ಕೂಡ್ರಿಸಿಕೊಂಡು ಬರುವೆ' ಎಂದು ಪಣತೊಟ್ಟವ ನಂತೆ, ಹೊರಬಿದ್ದರು ಹೊಟೆಲಿನಿಂದ.

ಅಷ್ಟು ಆವೇಶದಿಂದ ಹೊರಟುದು ಎಲ್ಲಿಗೆ? ಸಮೀಪದ ಹಲ್ಲು ಕೂಡ್ರಿಸು ವವನ ಕಡೆಗೆಯೆ. ಅವನಲ್ಲಿಗೆ ಹೋಗಿ ಬೇಗನೆ ತಮ್ಮ ಹಲ್ಲುಗಳನ್ನು ಕೂಡ್ರಿಸ ಬೇಕೆಂದು ಕೇಳಿಕೊಂಡರು. 'ಅದೇನು ಇಷ್ಟು ಅವಸರ' ಎಂದು ಡಾಕ್ಟರನು ಕೇಳಿದ. ಪಣವೆತ್ತ ಹುರಿಯಾಳಿನಂತೆ ಎಲ್ಲವನ್ನು ತಿಳಿಸಿ, 'ಮಧ್ಯಾಹ್ನದ ಸೂಪುತಿನ್ನುವ ವೇಳೆಗೆ ಸರಿಯಾಗಿರಬೇಕು ನನ್ನ ಹಲ್ಲುಗಳು' ಎಂದರು. ಡಾಕ್ಟರನು ಮರುಕಗೊಂಡಿರಬೇಕು. ಅವನು ತತ್‌ಕ್ಷಣವೇ ಕಾರ್ಯಪ್ರವೃತ್ತ ನಾದ. ಮುರಿದುಳಿದ ಹಲ್ಲುಗಳ ಚೂರುಗಳನ್ನು ಕೊರೆದು ತೆಗೆದು ಔಷಧ ಹಚ್ಚಿ ವಿಶ್ರಮಿಸಲು ಹೇಳಿದರು. 'ಎಲ್ಲಿಯ ವಿಶ್ರಾಂತಿ, ಹಲ್ಲುಗಳು ಬರುವತನಕ' ಎಂದು ಹೊಯ್ದಾಡುತ್ತ ಅಲ್ಲಿಯೆ ಕುಳಿತರು. ಇವರ ಆತುರ ಬಹಳಾದರೂ ಹಲ್ಲುಗಳು ಪಡಿಯಚ್ಚಿನಲ್ಲಿ ಕೂಡಲು ಕೆಲವುಕಾಲ ಬೇಕಲ್ಲವೆ? ಆ ಅವಧಿ ಯನ್ನು ಕಳೆಯುವುದು ಕಠಿಣವಾಯಿತು. ಮುಂದೆ ಬಡಿಸಿದ ವಸ್ತುವನ್ನು ತಿನ್ನಲಾಗಲಿಲ್ಲವಲ್ಲ! ಎಂದು ಅಪಮಾನಿತರಾಗಿದ್ದರು ಜಾಗಿರದಾರರು. ಅಂತು ಹಲ್ಲುಗಳು ಸಿದ್ಧವಾದುವು. ಅವುಗಳನ್ನು ಬಾಯಿಗೆ ಸರಿಪಡಿಸಿಕೊಂಡು ಎದುರಾಳಿಯ ಮೇಲೇರಿ ಹೋಗುವವನಂತೆ ಸಮೀಪದ ಹೊಟೆಲನ್ನು ಹೊಕ್ಕರು. ಒಳಗೆ ಹೋಗಿ ನೋಡುತ್ತಾರೆ, '೨ ಗಂಟೆಯ ನಂತರ ಏನೂ ಸಿಕ್ಕುವುದಿಲ್ಲ' ಎಂಬ ಹಲಗೆ. ಬವಳಿಯೆ ಬಂದಿತು. ಹಸಿದ ಹೊಟ್ಟೆಯು ಏಟೊಂದು, ಸ್ವಾಭಿಮಾನಕ್ಕೆ ತಾಗಿದುದು ಬೇರೊಂದು. ಒಳಲಿದುದನ್ನು ತೋರ ಗೊಡದೆ, ಮರುದಿನದ ತಿನಿಸಿನ ವೇಳೆಯ ವರೆಗೆ ಹೊಸ ಹಲ್ಲುಗಳನ್ನು ಮಸೆಯ ತೊಡಗಿದರು. ಆ ವೇಳೆ ಬರುವುದರೊಳಗೆ ಹಲ್ಲುಗಳು ಮಸೆದು ಮತ್ತೆಲ್ಲಿ ಸವೆದುಹೋಗುವುವೊ ಎಂದೂ ಹೆದರಿಕೆ.

ಮರುದಿನ ಮೊದಲನೆಯ ಆಹುತಿ 'ಸೂಪು'. ಅಂದು ಚೆನ್ನಾಗಿಯೆ ಸೇಡು ತೀರಿಸಿಕೊಂಡರು.

ಪಟ್ಟಣದ ಪರಿಚಯವು ಅಡ್ಡಾಡಲು ಧೈರ್ಯ ತಂದು ಕೊಟ್ಟಿತು. ಆದರೆ ಇಂಗ್ಲಂಡದಲ್ಲಿ ಡಿಸೆಂಬರ ತಿಂಗಳಲ್ಲಿ ಅಡ್ಡಾಡುವುದು ನಿಜವಾಗಿಯೂ

ಧೈರ್ಯದ ಕೆಲಸವೆ. ಭಾರತದಲ್ಲಿ ಬೆಳೆದವರಿಗೆ ಅಲ್ಲಿಯ ಚಳಿಯ ಅರಿವು ಇರುವುದಿಲ್ಲ. ನಮ್ಮಲ್ಲಿಯ ಚಳಿಗೆ ಗದರಿಕೊಳ್ಳುವವರು ಅಲ್ಲಿಯ ಚಳಿಗೆ ಮುದುಡಿಕೊಳ್ಳಬೇಕಾಗುವುದು. ಇಲ್ಲಿಂದ ಹೋದವರಿಗೆ ಆ ಚಳಿಯು ಹೊಸದು. ತಿಂಗಳು ಎರಡು ತಿಂಗಳು ವರೆಗೆ ಆ ದೇಶದ ವಾತಾವರಣವನ್ನು ಸರಿಪಡಿಸಿಕೊಳ್ಳಲು ಹೋಗುವುದು.

ಅಲ್ಲಿಯ ವಾತಾವರಣವನ್ನು ಮೈಗೂಡಿಸಿಕೊಂಡು ಮೋರೆಮೇಲಕ್ಕೆತ್ತು ವಷ್ಟರಲ್ಲಿಯೆ ಆಯ್. ಸಿ. ಎಸ್. ಪರೀಕ್ಷೆಯು ಸಮೀಪ ಬಂದಿತ್ತು. ಅಭ್ಯಾಸ ಮಾಡಲು ಅನುವುದೊರೆಯದಿದ್ದರೂ ಬಂದ ಸರತಿಯನ್ನು ಸರಿಯಗೊಡಬಾರ ದೆಂದು ಪರೀಕ್ಷೆಗೆ ಕೂಡುವುದು ಜಾಗಿರದಾರರು ಪರೀಕ್ಷೆಗೆ ಸೇರಿದರು. ಆ ಸಲ ಆಸೆಯಿಲ್ಲದೆ ಸೇರಿದವರಾದ್ದರಿಂದ ಫಲಿತಾಂಶದ ಕಡೆಗೆ ಲಕ್ಷ್ಯವಿರಲಿಲ್ಲ. ಅರ್ಥಾತ್ ಮೇಲೆ ಬಂದಿರಲಿಲ್ಲ ಅಂಕಿ. ಕೇವಲ ಪರೀಕ್ಷೆಯ ಅನುಭವವನ್ನು ತೆಗೆದುಕೊಳ್ಳಬೇಕೆಂಬುದರ ಸಲುವಾಗಿಯೆ ಸೇರಿದ್ದು. ಅನುಭವವು ಬಂತು. ಅದರ ಜೊತೆಗೆ ಮನಸ್ಸಿನ ಬದಲಾವಣೆಯು ಆಯಿತು.

ಆಯ್. ಸಿ. ಎಸ್‌ದ ಮೋಹವು ಭಾರತದಲ್ಲಿದ್ದಷ್ಟು ಇಂಗ್ಲಂಡದ ನೆಲದ ಮೇಲೆ ಕಾಲಿಟ್ಟಾಗ ಇರಲಿಲ್ಲ. ದಿನದಿನಕ್ಕೆ ಇಂಗ್ಲಂಡದ ಜನರ ಜೀವನ ವನ್ನು ತಿಳಿಯತೊಡಗಿದ ಮೇಲಂತೂ ಅದರ ಮೋಹವು ಕರಗಿ ಮಾಯವಾಗ ತೊಡಗಿತು. ಇಂಗ್ಲಿಶರ ರಾಷ್ಟ್ರೀಯ ಜೀವನ ಮತ್ತು ಸ್ವತಂತ್ರವೃತ್ತಿ, ವಿಚಾರಿ ಭಾರತೀಯರನ್ನು ಬಡಿದೆಬ್ಬಿಸುವುವು. ಆಚಾರ–ವಿಚಾರ ಸ್ವಾತಂತ್ರ್ಯದ ಮೂಲಕ ಇಂಗ್ಲಿಶ ಜೀವನವು ಮನ ಹಿಡಿಯುವುದು. ಭಾರತದ ಜೀವನದ ಚಿತ್ರವೂ ಮುಂದೆ ಬರುವುದು. ಎಷ್ಟು ಅಂತರ, ಎರಡೂ ಜೀವನಗಳಲ್ಲಿ! ಸ್ವಾತಂತ್ರ್ಯವೆ ಅವರ ವಾತಾವರಣ; ಸ್ವಾತಂತ್ರ್ಯದಲ್ಲಿದ್ದವರ ಬೆಳವಣಿಗೆ ನಿರಾತಂಕವಾಗಿಯಾಗುವುದು. ಭರದಿಂದ ಬೆಳೆಯುವುದರಿಂದ ಬಲ ಹೆಚ್ಚು; ಹೆಚ್ಚು ಬಲವಿದ್ದಲ್ಲಿ ಏನು ಮಾಡಲು ಅಶಕ್ಯ? ಪಶ್ಚಿಮದ ಇಂತಹ ಸ್ವತಂತ್ರ ವಾತಾವರಣದಲ್ಲಿ ಹುಟ್ಟಿ, ಬಾಳಿ, ಬದುಕಿದ ಜನತೆಗೆ ತಲೆ ಬಗ್ಗಿಸುವುದೆಂದರೇನು ಗೊತ್ತು? 'ಅಶಕ್ಯ' ಶಬ್ದವು ಮೂರ್ಖರ ಮಾತಿನಲ್ಲಿ ಸಿಕ್ಕುವುದು' ಎಂದು ನೆಪೊಲಿಯನ್ನನು ಅಂದ ಮಾತಿನಲ್ಲಿ ಸತ್ಯಾಂಶವಿದೆ. ಆ ಜನರಿಗೆ ಯಾವುದೂ

ಅಶಕ್ಯವಿಲ್ಲ. ಜೀವನದ ಸಸಿಯು ಬೆಳೆಯುವುದು ಸ್ವತಂತ್ರವಾತಾವರಣದಲ್ಲಿ; ಆದರ ಗುರಿಗೆ ಪೋಷಕವಾಗುವುದು ಪ್ರಯತ್ನವಾದಿತ್ವ. ಇವೆರಡರಿಂದ ಅವರು ಏನೂ ಮಾಡಲು ಬಹುದು, ಎಂಬುದು ಪ್ರತಿಯೊಬ್ಬ ಭಾರತೀಯನಿಗೆ ಅಲ್ಲಿ ಹೋದಾಗ್ಗೆ ತಿಳಿವುದು.

ಆ ನೆಲದ ಮೇಲೆ ನಿಂತು ತಾಯಿನಾಡಿನ ಕಡೆಗೆ ಕಣ್ಣು ಹೊರಳಿಸಿದರೆ ಅಲ್ಲಿ ಕಾಣುವುದೇನು ? ಕಣ್ಣಿಗೆ ಕತ್ತಲೆ! ಅಜ್ಞಾನದಲ್ಲಿ ಮುಳುಗಿರುವ ಜನತೆ. ಭಾವಿಕತನವೇ ಅವರ ಬಲ. ರಾಷ್ಟ್ರಜೀವನದ ವಿಚಾರವು ಸುಳಿಯುವುದಶಕ್ಯ. ಎಲ್ಲಿ ನೋಡಿದರೂ ಜಾತಿಯ ಮಾತೆ ಮೇಲೆದ್ದು, ಜಾತಿಜೀವನವೇ ಸಮಾಜದ ನೀತಿಯಾಗಿದೆ. ಧರ್ಮದ ಬಯಲು ಆಡಂಬರಗಳು ತತ್ವದ ತಿರುಳನ್ನು ಮರೆಯಿಸಿ ಬಿಟ್ಟಿವೆ. ಯಾವ ಕಾರ್ಯದಲ್ಲಿಯೂ ಉತ್ಕಟತೆ ಇಲ್ಲ. ಬಾಳಿಬದುಕ ಬೇಕೆಂದರೆ ಇಹಪರಗಳ ತತ್ವಜ್ಞಾನದ ತಿಕ್ಕಾಟ. ಈ ಜೀವಿತದ ನಂತರದ ಜೀವಿತದ ವಿಚಿತ್ರ ಸುಖದ ಕಲ್ಪನೆಯನ್ನು ತಲೆಯಲ್ಲಿ ಮೂಡಿಸಿಕೊಂಡು ಸದ್ಯದ ಜೀವಿತಕ್ಕೆ ಆಸ್ಥೆಕಡಿಮೆ ಮಾಡುವುದು. ಕಾಣುವುದು ನಿತ್ಯವಲ್ಲ; ಕಾಣದೆ ಇದ್ದ ನಿತ್ಯಸುಖದ ಸಾಧನವೇ ಜೀವನದ ಹೆಗ್ಗುರಿಯೆಂದು, ತಿಳಿಯ ಲಾರದೆ ತಿಳಿದಿದೆಯೆಂಬ ಸೋಗಿನ ಭ್ರಮೆಯಿಂದ ಅಪ್ರಮಾಣಿಕ ಕಾರ್ಯ ದಲ್ಲಿ ತೊಡಗುವರು. ಕಂಡುದೂ ಕಳಚಿ ಹೋಗುವುದು; ಕಾಣದಿದ್ದುದು ಸಿಗುವ ಬಗೆಯೆಂತು ?

ಇಂಗ್ಲಂಡಕ್ಕೆ ಹೋದ ಕೆಲವು ದಿನಗಳಲ್ಲಿ ಈ ತಿಕ್ಕಾಟವು ಎದುರು ಬಂತು ಜಾಗಿರದಾರರಿಗೆ. ಆಯ್. ಸಿ. ಎಸ್. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರೆ ನಮ್ಮ ಜನತೆಯ ಮುಂದೆ ಮೆರೆಯಲು ಬಹುದು. ಆದರೆ ಸ್ವಾತಂತ್ರ್ಯವು ಸಿಕ್ಕುವುದೇ ? ಬ್ರಿಟಿಶರಾಡಳಿತದ ಬಲೆಯಲ್ಲಿಯ ಒಂದು ಸುಳಿಯಾಗಿ ನಮ್ಮನಾಡವರ ಮೇಲೆಯೆ ಮೆಣಸರೆಯುವ ಸಂದರ್ಭಬರುವುದಲ್ಲ! ಇಂಗ್ಲಿಶ ಜೀವನವು ಸುಖಮಯವೆಂದು ತಿಳಿದು ನಮ್ಮನಾಡಿನಲ್ಲಿಯ ಜೀವನ ವನ್ನು ಸುಖಮಯವಾಗಿ ಮಾಡಲಾರದೆ ಹೋದರೆ ಅಲ್ಲಿಗೆ ಹೋದುವರ ಉಪ ಯೋಗವೇನಾಯಿತು. ನಮ್ಮ ಸಮಾಜದ ಸಲುವಾಗಿ ಅಸಾಹಾಯ್ಯತೆಯು ರೊಚ್ಚು ಬರತೊಡಗಿತು. ಅಲ್ಲಿಯ ಜೀವನದ ರೀತಿ ಸುಖವಾಗಿದೆಯಲ್ಲ ! ಎಂದು ಒಂದು ತರದ ಅಸೂಯೆ. ಮರುಕ್ಷಣವೆ ಅದನ್ನು ಸರಿಯಾಗಿ ತಿಳಿಯ

ಬೇಕೆಂದು ಕುತೂಹಲ. ನಮ್ಮ ನಾಡಿನಲ್ಲಿಯೂ ಜೀವನವನ್ನು ಸೊಗಸು ಮಾಡಲು ಹಂಚಿಕೆಗಳನ್ನು ಹೆಣೆಯುವುದು. 'ನಾವೇಕೆ ಸುಖವಾಗಿ ಬಾಳಬಾರದು, ನಮ್ಮ ಬಾಳಿನಲ್ಲಿ ಸುಖ ತಂದುಕೊಳ್ಳುವುದು ನಮ್ಮ ಕೈಯಲ್ಲಿಯೆ ಇದೆ ನಮ್ಮ ಬಾಳಿನ ಬಗೆಗೆ, ಬದುಕಿನ ಬಗೆಗೆ ನಾವು ವಿಚಾರವೇ ಮಾಡುವುದಿಲ್ಲವಲ್ಲ! ಮುಂದೇನು?' ಎಂದು ಅನೇಕಸಲ ಅನೇಕ ವಿಧವಾಗಿ ವಿಚಾರಿಸಿದರು. ಕೊನೆಗೂ ಪ್ರಶ್ನಾರ್ಥಕವೆ?

ಆದರೆ ಆಯ್. ಸಿ. ಎಸ್‌ಕ್ಕೆ ಮಾತ್ರ ಉತ್ಸಾಹವು ಕಡಮೆಯಾಗತೊಡಗಿತು. ಇಲ್ಲಿ ಮತ್ತೊಂದು ತಿಕ್ಕಾಟ. ಮನೆಯ ಜನರೆಲ್ಲರೂ ಸೇರಿ ಒತ್ತಾಯಪಡಿಸಿ, ಆಯ್. ಸಿ. ಎಸ್‌ಕ್ಕೆ ಕಳುಹಿದ್ದಾರೆ. ಮನೆಯವರ ಮನಸ್ಸಿನಲ್ಲಿ ಜಾಗಿರದಾರರು ಆಯ್. ಸಿ ಎಸ್. ಆಗಿಬರಬೇಕೆಂದು ಬಲವಾದ ಇಚ್ಛೆ. ಜಾಗಿರದಾರರಿಗಾದರೂ ಭಾರತವನ್ನು ಬಿಡುವ ಮುಂಚೆ ಆಸೆಯೇನೊ ಹಿರಿದಾಗಿಯೆ ಇತ್ತು. ಆದರೆ ವಿಚಾರಿ ಸ್ವಭಾವದ ಮೂಲಕ ಇಂಗ್ಲಂಡದಲ್ಲಿ ಕಾಲಿಟ್ಟು ವಾಸಮಾಡತೊಡಗಿದ ಮೇಲೆ ವಿಚಾರಗಳು ಬದಲಾಗತೊಡಗಿದುವು. ಮನಸ್ಸಿನ ಒಲವನ್ನು ಬಲಿಯಗೊಡಬೇಕೊ, ಮನೆಯವರ ಮಾತನ್ನು ನಡೆಸಬೇಕೊ ಎಂಬದು ಬಿಡಿಸಲಾರದ ಸಮಸ್ಯೆಯಾಯಿತು.

ಒಂದು ವೇಳೆ ಆಯ್. ಸಿ. ಎಸ್. ಆಗದೆ ಹೋದರೆ, ಬ್ಯಾರಿಸ್ಟರ ಆದರೂ ಸರಿಯೆಂದು ಮನೆಯವರ ಅಭಿಲಾಷೆ. 'ಬ್ಯಾರಿಸ್ಟರ' ಪರೀಕ್ಷೆಯ ಗೊಡವೆಗೆ ಹೋಗಬಾರದಷ್ಟು ಹೆದರಿಕೆ ಇತ್ತು ಜಾಗಿರದಾರರಿಗೆ. ಆ ಹೆದರಿಕೆ ನಿಜವಾಗಿಯೂ ಹುಸಿ ಹೆದರಿಕೆ. ಶಾಲೆಯಲ್ಲಿರುವಾಗ್ಗೆ ನಡೆದ ಸಂಗತಿಯು ಆಗಾಗ್ಗೆ ಅವರನ್ನು ಚುಚ್ಚುತಿದ್ದಿತು. ಆರನೆಯ ಇಯತ್ತೆಯಲ್ಲಿದ್ದಾಗಿನ ಮಾತು. ಒಂದುದಿನ ಶಾಲೆಯಲ್ಲಿ ಚರ್ಚೆ ನಡೆದಿತ್ತು. ಅದರಲ್ಲಿ ರಂಗ (ಜಾಗಿರದಾರ) ನೂ ಭಾಗವಹಿಸಬೇಕೆಂದು ಮಾಡಿ, ವೇದಿಕೆಯ ಸಮೀಪಬಂದು ನಿಂತ. ನಿಂತನಷ್ಟೆ ಹೊರತು ಮಾತು ಬರಲಿಲ್ಲ. ಆದರ ಬದಲು ಬಂತು—ಬೆಮರು. ಕೂಡಿದ ಜನವೆಲ್ಲ ಹುಯಿಲೆಬ್ಬಿಸಿತು. ಸ್ವಾಭಿಮಾನಕ್ಕೆ ತಾಗಿತು ಅವರ ಕೂಗು. ಆದರೆ ಮಾತು ಮಾತ್ರ ಬರದೆ ಹೋಯಿತು. ಕೊನೆಗೆ ಮಾತನಾಡದೆ ಮರಳಿಹೋದ ರಂಗ. ಈ ಸಂಗತಿಯ ನೆನಪು—ಸವಿನೆನಪು— ಆಗಾಗ ನೆನಪಿಗೆ ಬಂದು

ಬ್ಯಾರಿಸ್ಟರ ಪರೀಕ್ಷೆಯ ಕಡೆಗೆ ಅನಾಸ್ಥೆ ಬರತೊಡಗಿತು. ಮಾತನಾಡಲು ಬರುವುದಿಲ್ಲವೆಂಬ ಹೆದರಿಕೆಯಿಂದ 'ಬ್ಯಾರಿಸ್ಟರ' ಪರೀಕ್ಷೆಗೆ ಮನಸ್ಸು ಹಾಕ ಲಿಲ್ಲ. ಮನಸ್ಸಿನ ಒಲವಿನ ವಿರುದ್ಧವಾದುದರಿಂದ ಆಯ್. ಸಿ. ಎಸ್ ಕ್ಕೆ ಉತ್ಸಾಹವು ಕಡಿಮೆಯಾಯಿತು. ಆದರೆ ಇಂಗ್ಲಂಡದಲ್ಲಿ ಉಳಿಯಬೇಕಾದರೆ ಆಯ್. ಸಿ. ಎಸ್ ಕ್ಕಾಗಿ ಇಲ್ಲವೆ ಬ್ಯಾರಿಸ್ಟರಿಗಾಗಿಯೆ ಇದ್ದುದರಿಂದ ಉಪಾಯಗಾಣದೆ ಆಯ್. ಸಿ. ಎಸ್. ದ ಸೋಗು ಧರಿಸಿದರು.

'ಆಯ್. ಸಿ. ಎಸ್.' ಉ ಪರೀಕ್ಷೆಯಲ್ಲದೆ ಆಯ್ಕೆಯೂ ಅಹುದು. ಪರೀಕ್ಷೆಗಾಗಿ ಕೆಲವು ವಿಷಯಗಳು ಎಲ್ಲರೂ ಓದಲೇಬೇಕಾದುವು. (೧) ಇಂದಿನ ಇಂಗ್ಲಿಶ ( Present day English ) (೨) ಬರವಣಿಗೆ (Composition) (೩) ಮಾನವಶಾಸ್ತ್ರ (Anthropology) (೪) ಇಂದಿನ ರಾಜ ಕಾರಣ (Present day Politics) (೫) ಐರೋಪೀಯ ಭಾಷೆಯೊಂದು (One continental language) (೬) ದೈನಂದಿನ ಶಾಸ್ತ್ರ (Every day Science) ಇವು ಆರು ಪೇಪರು ಒಂದೊಂದಕ್ಕೆ ೧೫೦ ಗುಣಗಳು. ಇವಲ್ಲದೆ ಕೆಲವು ಐಚ್ಛಿಕ ವಿಷಯಗಳು. ಸಂಸ್ಕೃತಿ—ಭಾಷೆಯನ್ನು ಒಳಗೊಂಡ ಸುಮಾರು ಇಪ್ಪತ್ತು ಐಚ್ಛಿಕ ವಿಷಯಗಳ ಪಟ್ಟಿಯೊಂದು ಇರುವುದು. ಅವುಗಳಲ್ಲಿ ವಿದ್ಯಾರ್ಥಿಗಳು ತಮತಮಗೆ ಅನುಕೂಲವಿದ್ದ ವಿಷಯಗಳನ್ನು ಆಯ್ದು ಕೊಳ್ಳಬಹುದು. ಜಾಗಿರದಾರರು ಆರಿಸಿಕೊಂಡುದು ಈ ವಿಷಯಗಳನ್ನು: (೧) ಭಾಷೆ: ಸಂಸ್ಕೃತ ೪೦೦ ಗುಣಗಳು. (೨) ಬ್ರಿಟಿಶ ಇತಿಹಾಸ ೪೦೦ ಗುಣಗಳು. (೩) ರಾಜಕೀಯ ಸಂಸ್ಥೆಗಳು ( Political Institutions ) ೧೦೦ ಗುಣಗಳು. (೪) ಘಟನೆಯ ಕಟ್ಟಳೆ ( Constitutional law) ೧೦೦ ಗುಣಗಳು (೫) ಸಮಾಜ ಮಾನವಶಾಸ್ತ್ರ (Social Anthropology) ೧೦೦ ಗುಣಗಳು. ಒಟ್ಟು ೧೯೦೦ ಗುಣಗಳು. ಐಚ್ಛಿಕ ವಿಷಯಗಳಲ್ಲಿ ಸಮಾಜಮಾನವ ಶಾಸ್ತ್ರವನ್ನು ತೆಗೆದುಕೊಳ್ಳುವವರು ಮೇಲಿನ ಭಾಗದಲ್ಲಿ ಮಾನವ ಶಾಸ್ತ್ರವನ್ನು ಬಿಡಬಹುದು.

ಈ ಎಲ್ಲ ವಿಷಯಗಳನ್ನು ಅಭ್ಯಾಸಮಾಡಿ ಪರೀಕ್ಷೆಗೆ ಕೂಡುವುದು. ಗುಣಗಳ ಸಂಖ್ಯಾಮಿತಿಯ ಮೇರೆಗೆ ಪಟ್ಟಿಯನ್ನು ಸಿದ್ಧಮಾಡುತ್ತಾರೆ. ಆದರಲ್ಲಿ ಮೊದಲಿನ ಇಂತಿಷ್ಟು ಜನರನ್ನು ಆರಿಸಬೇಕೆಂದು ಇರುವುದು.

ಆಯ್. ಸಿ. ಎಸ್. ಪರೀಕ್ಷೆಯಾಗಿ ಆಯ್ಕೆಯಾಗಬೇಕಾದರೆ ವಿದ್ಯಾರ್ಥಿಯು ಪರೀಕ್ಷೆ ಕಟ್ಟಿ, ಸರಕಾರಕ್ಕೆ ಬೇಕಾದ ಅಂಕೆಗಳಲ್ಲಿ ಬರಬೇಕಾಗುವುದು. ಸರಕಾರಕ್ಕೆ ಬೇಕಾದ ಸಂಖ್ಯಾ ಬಾಹಿರರಾದವರೆಲ್ಲರೂ ಗುಣಗಳೇನೆ ಇರಲಿ, ಆಯ್ಕೆಯಾಗುವುದಿಲ್ಲ. *

ಜಾಗಿರದಾರರಿಗೆ ಮೂರು ಸಲ ಪರೀಕ್ಷೆಗೆ ಕೂಡಲು ಅನುವಿತ್ತು. ಈ ಪರೀಕ್ಷೆಗೆ ವಯೋನಿರ್ಬಂಧವಿದೆ. ೨೧–೨೪ ವಯಸ್ಸು ಇರಬೇಕು. ಭಾರತ ದಿಂದ ಬಂದ ವರುಷ ಮೊದಲನೆಯ ಸಲ ಪರೀಕ್ಷೆಗೆ ಸೇರಿದಾಗ ಕೇವಲ ೩೭೦ ಗುಣಗಳು ಬಂದಿದ್ದುವು. ಪರೀಕ್ಷೆಯ ರೀತಿಯೂ ಆಯ್ಕೆಯ ಪದ್ಧತಿಯೂ ವಿಚಿತ್ರವೆನಿಸಿದುದರಿಂದಲೂ 'ಬ್ಯಾರಿಸ್ಟರ'ನ ಪದವಿಯು ನಿರುಪಯುಕ್ತ ವೆಂದು ತಿಳಿದುದರಿಂದಲೂ ಮೂರನೆಯ ದಿಕ್ಕಿಗೆ ಮನವು ಹರಿಯತೊಡಗಿತು. ಅದಕ್ಕೆ ಇನ್ನೊಂದು ಬಲವಾದ ಕಾರಣವು ಇತ್ತು. ಅದುವೆ ಸಾಲದ ಹೊರೆ. 'ಬ್ಯಾರಿಸ್ಟರ್' ಪರೀಕ್ಷೆಯನ್ನು ಕಟ್ಟಬೇಕಾದರೆ ಮಾತುಗಾರಿಕೆಯು ಬೇಕಲ್ಲದೆ, ಕೆಲವು ವರುಷಗಳ ವರೆಗೆ ಆದಾಯವಿಲ್ಲದೆ ಜೀವಿತವನ್ನು ಸಾಗಿಸಲು ಶಕ್ತ ನಾಗಿರಬೇಕು. ಸ್ವತಂತ್ರ ವೃತ್ತಿಯನ್ನು ಅನುಸರಿಸಿದರೆ ಸಾಲವ ಭಾರವು ಕಡಮೆಯಾಗುವುದೆಂತು? ಸಾಲದ ಶೂಲವು ಕಣ್ಣಿಗೆ ಕಂಡಾಗೆಲ್ಲ 'ಬ್ಯಾರಿಸ್ಟರ' ಪರೀಕ್ಷೆಯ ವಿಚಾರವು ದೂರ ದೂರ ಹೋಗುತ್ತಿತ್ತು. ಕೊನೆಗೆ ಆಚೆಗೆ ಮನಸ್ಸು ಕೂಡ ಹಾಕುವುದು ವಿಹಿತವಲ್ಲವೆಂದೆನಿಸಿತು.

ಹಿಂಗಾಲು ಊರಿದ ನೆಲವು ಕುಸಿಯುವ ಪ್ರಸಂಗ ಬಂದುದರಿಂದ ಮನವು ತಲ್ಲಣಗೊಂಡು ಬದಿಯಲ್ಲಿ ಇಂಬು ಇದೆಯೆ ಎಂದು ನಿರುಕಿಸ ತೊಡಗಿತು. ಆಯ್. ಸಿ. ಎಸ್. ದೂರದ ಮಂಜಿನ ಗುಡ್ಡೆಯಾಯಿತು. ಬ್ಯಾರಿಸ್ಟರಿಯೂ ದೂರಾಯಿತು. ಇನ್ನು ಇಂಗ್ಲಂಡಕ್ಕೆ ಬಂದು ಕಾಲಹರಣ ಮಾಡಿ, ಯಾವುದೂ ಪದವಿಯಿಲ್ಲದೆ, ಸಾಲದ ಶೂಲಕ್ಕೆ ತಲೆಕೊಡುವುದಕ್ಕೆ ಭಾರತಕ್ಕೆ ಮರಳಬೇಕಾಗುವುದಲ್ಲ, ಎಂದು ಎಚ್ಚರಿಕೆ ಬಂದು ಮನಸ್ಸಿನ ಬಲವನ್ನು ಬಲಿಸಬೇಕೆಂದು ಎಂ. ಎ. ಕ್ಕಾಗಿ ಸೇರಿದರು ಜಾಗಿರದಾರರು. ಅಲ್ಲಿಯಾದರೂ ಏನು ನಿರಾತಂಕವೆ? ಸಾಮಾನ್ಯ ವಿದ್ಯಾರ್ಥಿಗಳು ೪ ಟರ್ಮು

---

* ಇಂದು ಅಂದಿನ ನಿಯಮಗಳು ಇಲ್ಲ. ಇವರ ಪರೀಕ್ಷೆಯಾದುದು ಹಳೆಯ ನಿಯಮದಂತೆ.

ಕಾಲೇಜದಲ್ಲಿ ಕಳೆಯಬೇಕಿದ್ದರೆ, ಆಯ್. ಸಿ. ಎಸ್. ಅಥವಾ ಬ್ಯಾರಿಸ್ಟರ ಪರೀಕ್ಷೆಗಳಿಗಾಗಿ ಕಟ್ಟುವವರು ಆರು ಟರ್ಮು ಕಳೆಯಬೇಕಾಯಿತು. ಬಂದದ್ದಕ್ಕೆಲ್ಲ ತಲೆಕೊಟ್ಟು ನಿಲ್ಲಲೇ ಬೇಕಲ್ಲವೆ?

ಆಯ್. ಸಿ. ಎಸ್ ಕ್ಕೂ ಅನುಕೂಲ, ಎಂ. ಎ. ಕ್ಕೂ ಅನುಕೂಲವಾದ ವಿಷಯವನ್ನು ಆಯ್ದುಕೊಳ್ಳಬೇಕಾಯಿತು. ಆಯ್. ಸಿ. ಎಸ್ ದ ಐಚ್ಛಿಕ ವಿಷಯಗಳಲ್ಲಿ ಸಂಸ್ಕೃತವು ಒಂದಾಗಿತ್ತು. ಅದಕ್ಕೆ ಅನುಕೂಲವಾಗುವಂತಹ ವಿಷಯವಾದ 'ಭಾಷಾಶಾಸ್ತ್ರ' ವನ್ನು ಎಂ. ಎ. ಕ್ಕಾಗಿ ಆರಿಸಿಕೊಂಡರು. ಪ್ರಾಚ್ಯಾಭ್ಯಾಸದ ಶಾಲೆ (The School of Oriental Studies) ಗೆ ಸೇರಿದರು.

ಭಾಷಾಶಾಸ್ತ್ರವು ಹೊಸ ವಿಷಯುವಾದ್ದರಿಂದ ಸಂಶೋಧನಾತ್ಮಕ ಅಭ್ಯಾಸವು ಅವಶ್ಯವಾಯಿತು. ಭಾರತದಲ್ಲಿ ಕಾಲೇಜದಲ್ಲಿದ್ದಾಗ ಜೂನಿಯರ್ ಬಿ. ಎ. ದಲ್ಲಿಯದೊಂದು ಸಂಗತಿಯು ಸಹಾಯಕವಾಯಿತು. ಆಗ ಜಾಗಿರದಾರರು ಒಂದು ವಿವೇಚನಾತ್ಮಕ ನಿಬಂಧವನ್ನು ಬರೆದಿದ್ದರು. 'ಶ್ರೀ ಎಚ್. ಜಿ. ವೆಲ್ಸ ಅವರ ಸಾಮಾಜಿಕ, ಹಾಗೂ ರಾಜಕೀಯ ವಿಚಾರಗಳು' ಎಂಬ ವಿಷಯವೆ ಅದು. ಅದಕ್ಕೆ ೪೦ ರೂಪಾಯಿಯ ಪಾರಿತೋಷಕವು ದೊರೆತಿತ್ತು.

ಅಂತೂ ಒಮ್ಮೆ ನಿಶ್ಚಿತವಾಯಿತು. ಇಂಗ್ಲಂಡಕ್ಕೆ ಬಂದು ಆರು ತಿಂಗಳ ಮೇಲಾಗಿದ್ದರೂ ಒಂದೆಡೆಗೆ ವಸತಿಯೆಂದು ಮಾಡಿಕೊಳ್ಳದೆ ಅಲ್ಲಲ್ಲಿ ಅಲೆದಾಡುತ್ತಿದ್ದರು. ಮನಸ್ಸಿನಲ್ಲಿಯ ದುಗುಡವೆ ಅದಕ್ಕೆ ಕಾರಣ. ಗುರಿಯು ಸಿಕ್ಕಮೇಲೆ ಹೊಯ್ದಾಟವೆಲ್ಲಿಯದು? ಅಲ್ಲಲ್ಲಿ ಅಲೆಯುವದು ನಿಂತಿತು. ವಸತಿಯು ಒತ್ತಟ್ಟಿಗಾಯಿತು. ಆನಂತರ ಇಂಗ್ಲಂಡದಲ್ಲಿರುವತನಕ ಆ ಸ್ಥಾನವನ್ನು ಬಿಡಲಿಲ್ಲ. ಅದು ಉತ್ತರ ಲಂಡನ್‌ದ ರಾಣೀ ಬೀದಿಯಲ್ಲಿಯ 'ಫಿನ್ಸಬರಿ ಪಾರ್ಕ' ಎಂಬ ೧೨೩ನೆಯ ಮನೆ. *

ಒಂದು ನಿಟ್ಟು ಹಿಡಿದ ಮೇಲೆ ಕಾರ್ಯಕ್ರಮಗಳೆಲ್ಲವೂ ಪೋಷಕವಾಗತೊಡಗಿದುವು. ಬೆಳಗ್ಗೆ ೮ಕ್ಕೆ ಏಳುವುದು. ನ್ಯಾಹರಿಯನ್ನು ಮುಗಿಸಿಕೊಂಡು ವೃತ್ತಪತ್ರಗಳನ್ನು ಓದುವುದು. ಆ ಮೇಲೆ ಕಾಲೇಜಕ್ಕೆ ಹೋಗುವುದು.

---

*Finsbury Park, 123 Queen's Road; London North.

ವರ್ಗಗಳನ್ನು ಮುಗಿಸಿಕೊಂಡು ಅಭ್ಯಾಸಕ್ಕೆಂದು ಬ್ರಿಟಿಶ ವಸ್ತುಸಂಗ್ರಹಾಲಯದ ವಾಚನಾಲಯ (Museum)ಕ್ಕೆ ಹೋಗುವುದು. ಮಧ್ಯಾನ್ಹದ ತಿನಸಿಗೆ ಶೇಕ್ಸಪಿಯರ್ ಕುಟೀರ (Shakespeare's Hut) ದಲ್ಲಿದ್ದ ಭಾರತೀಯ ವಿದ್ಯಾರ್ಥಿಗಳ ಸಂಘ (Indian Students Union)ಕ್ಕೆ ಹೋಗುವುದು. ಆಮೇಲೆ ಅಂತರ ಕಾಲೇಜದ ವರ್ಗಗಳು. ಒಂದು ದಿನ ಅರ್ಥಶಾಸ್ತ್ರದ ಶಾಲೆ (School of Economics)ಗೆ. ಒಂದು ದಿನ ಬರ್ಕಬೆಕ್ ಕಾಲೇಜಿ (Berkbeck College)ಗೆ. ಇಳಿಹೊತ್ತಿಗೆ ಎಲ್ಲಿಯಾದರೂ ಚಹಾ. ಸಾಯಂಕಾಲಕ್ಕೆ ಅಡ್ಡಾಡಲು ಹೋಗುವುದು. ಇಲ್ಲವೆ ಸಿನಿಮಾಕ್ಕೆ ಹೋಗುವುದು. ರಾತ್ರಿಯೂಟಕ್ಕೆ ಮನೆಗೆ ಬರುವುದು.

ಇಂಗ್ಲಂಡದಲ್ಲಿ ಇರುವಿಕೆಯ ರೀತಿಗಳನೇಕ. ಇಲ್ಲಿಯ ವಿದ್ಯಾರ್ಥಿಗಳು ಹೊಟೆಲದಲ್ಲಿರಬಹುದು. ಬೇರೆ ಕೋಣೆಗಳಲ್ಲಿರಬಹುದು ಯಾರೊಬ್ಬರ ಕುಟುಂಬದಲ್ಲಿ ಅಂತೆವಾಸಿ (Paying Guest) ಯಾಗಿ ಇರಬಹುದು. ಹೀಗೆ ಕುಟುಂಬದೊಂದಿಗೆ ಇರುವುದು ಎರಡು ರೀತಿ. ಒಂದು ನಿದ್ದೆ-ನ್ಯಾಹರಿ ಪದ್ಧತಿ (Bed and Breakfast) ಎಂದು; ವಸತಿ-ಊಟ ಪದ್ಧತಿ (Partial Board) ಎಂಬುದು ಎರಡನೆಯದು. ಮೊದಲನೆಯ ಪದ್ಧತಿಯಲ್ಲಿ ರಾತ್ರಿಯ ಊಟ, ಮಲಗುವ ಏರ್ಪಾಡು ಮುಂಜಾನಿನ ನ್ಯಾಹರಿ, ಇಷ್ಟು. ಇಷ್ಟಕ್ಕೆ ವಾರಕ್ಕೆ ೨-೨॥ ಗಿನಿ ವೆಚ್ಚಬರುವುದು. ಎರಡನೆಯ ರೀತಿಯು ಮಧ್ಯಾನ್ಹದ ಊಟವನ್ನು ಒಳಗೊಳ್ಳುವುದಲ್ಲದೆ ಸ್ನಾನ ಮುಂತಾದವುಗಳೂ ಬರುವವು. ೩-೪ ಪೌಂಡುಗಳು ವಾರಕ್ಕೆ.

ಪಾಶ್ಚಾತ್ಯರ ಕಾರ್ಯ ತತ್ಪರತೆಯು ಮಾದರಿಯಾಗಿದೆ. ವಾರದಲ್ಲಿ ಸೋಮವಾರದಿಂದ ಶನಿವಾರದ ವರೆಗೆ ಗಳಿಗೆ ಬಿಡದೆ ದುಡಿಯುವುದು. ಶನಿವಾರ ಮಧ್ಯಾನ್ಹದಿಂದ ಸೋಮವಾರ ಬೆಳಗಿನ ವರೆಗೆ ವಿಶ್ರಾಂತಿ. 'ಆಳಾಗಿ ದುಡಿ; ಅರಸಾಗಿ ಉಣ್ಣು' ಎಂಬುದನ್ನು ಅವರು ತಿಳಿದುಕೊಂಡು ಮೈಗೂಡಿಸಿಕೊಂಡಿದ್ದಾರೆಂಬಂತಿದೆ. ವಾರದಿನಗಳಲ್ಲಿ ಅವರನ್ನು ಕಂಡರೆ ಇವರೇನು ಮನುಷ್ಯರೊ ಅಥವಾ ಮಾನವ ದೇಹವನ್ನು ಧರಿಸಿದ ಯಂತ್ರಗಳೊ ಎನುವಷ್ಟು ದುಡಿಯುವುದು. ಮಾತಿಲ್ಲ-ಮಾತನಾಡಲು ಬಿಡುವಿಲ್ಲ. ಕೆಲಸ!

ಕೆಲಸ! ಆದರೆ ಶನಿವಾರ ಮಧ್ಯಾಹ್ನ ಯಾವ ಕಚೇರಿಗೆ ಹೋದರೂ ನೋಡಲು ಸಿಗುವುದು ಬಾಗಿಲದ ಬೀಗ. ವಿಹಾರಕ್ಕಾಗಿ ಮನೆ ಜನರನ್ನು ಕರೆದುಕೊಂಡು ಅಲೆಯುವುದು, ಕೆಲೆಯುವುದು; ಉನ್ಮಾದಿತರಂತೆ ಸುಖಬಡುವುದು. ಆರು ದಿನ ದುಡಿದವರಿಗೆ ಒಂದು ದಿನ ವಿಶ್ರಾಂತಿ ಅವಶ್ಯ–ಅಗತ್ಯ. ವಿಶ್ರಾಂತಿ ಕಾಲದ ಸುಖವನ್ನು ದುಡಿದವನೇ ಬಲ್ಲ.

ದುಡಿಯುವವರನ್ನು ಕಂಡರೆ ದುಡಿಯಬೇಕೆನ್ನಿಸುವುದು. ಇಂಗ್ಲಂಡದಲ್ಲಿಯ ಹವೆಯು ತಂಪು ಇರುವುದರಿಂದ ಉತ್ಸಾಹಕ್ಕೆ ಮಿತಿಯಿಲ್ಲ. ಎರಡನೆಯ ವರುಷದಲ್ಲಿ ಅಭ್ಯಾಸದ ಒತ್ತಡವು ಹೆಚ್ಚಿತ್ತು. ಮನದ ಬಯಕೆ–ಎಂ. ಏ. ಒಂದೆಡೆ; ಮನೆಯವರ ಆಜ್ಞೆ— ಆಯ್. ಸಿ. ಎಸ್. ಮತ್ತೊಂದೆಡೆ. ಹೆಚ್ಚು ದುಡಿದ ಮೇಲೆ ವಿಶ್ರಾಂತಿ–ವಿಹಾರ ಬೇಡವೆ. ಸಿನಿಮಾ–ನಾಟಕಗಳನ್ನು ನೋಡುವುದು; ಸುಖ ಪ್ರವಾಸಕ್ಕೆ ಹೋಗುವುದು.

ವಿಹಾರಕ್ಕಾಗಿ ನೋಡುತ್ತಿದ್ದುದು ವಿಚಾರ ಮಾಡಲು ಹಚ್ಚುತ್ತಿದ್ದವು. ಯಾವುದೊಂದು ಚಿತ್ರವು–ನಾಟಕವು ಹೆಚ್ಚು ಆಕರ್ಷಿಸಿದರೆ ಅದನ್ನು ಅನೇಕ ಸಲ ನೋಡುವುದು. ಇಂಗ್ಲಂಡದಲ್ಲಿಯ ಸಿನಿಮಾ ತೋರಿಸುವ ರೀತಿ ನಮ್ಮಲ್ಲಿಯಂತೆ ಮೊದಲನೆಯ ಆಟ, ಎರಡನೆಯ ಆಟ ಎಂದು ಇಲ್ಲ. ಮಧ್ಯಾಹ್ನ ೧ ಗಂಟೆಗೆ ಪ್ರಾರಂಭವಾಗಿ ರಾತ್ರಿ ೧೧ರ ವರೆಗೆ ನಡೆದೆ ಇರುವುದು, ಬಿಟ್ಟುಬಿಡದೆ. ಟಿಕೀಟುಕೊಂಡವರು ಬೇಕಾದಾಗ ಒಳಗೆ ಹೋಗಬಹುದು. ಬೇಡಾದಾಗ ತಿರುಗಿ ಬರಬಹುದು. ಮಧ್ಯಾಹ್ನ ೧ ಗಂಟೆಯಿಂದ ಮುಗಿವವರೆಗೂ ಕೂಡಬಹುದು. ಆದರೆ ವೇಳೆಯೆ ಸಂಪತ್ತು ಎಂದು ತಿಳಿದ ದೇಶಗಳಲ್ಲಿ ಯಾರೂ ಹೆಚ್ಚು ಹೊತ್ತು ಅಲ್ಲಿ ಕಳೆಯುವುದಿಲ್ಲ. ತಾವು ಒಳಗೆ ಸೇರಿದಾಗ ಯಾವ ಭಾಗ ನಡೆದಿತ್ತೊ ಆ ಭಾಗಕ್ಕೆ ಪುನಃ ಬರುವವರೆಗೆ ಕೂಡುವುದು; ಆ ಮೇಲೆ ಹೋಗುವುದು. ಅಂತೂ ಇಡಿಯ ಚಿತ್ರವನ್ನು ನೋಡುವುದು.

ಜಾಗಿರದಾರರ ಮೇಲೆ ಹೆಚ್ಚು ಪರಿಣಾಮ ಮಾಡಿದುದು ನಾಟಕವು. 'ಶ್ರೀಮತಿ ಶೆನಿಯ ಕೊನೆ' (The Last of Mrs. Sheny) ಎಂಬ ನಾಟಕವು ಒಳ್ಳೆ ಮನಹಿಡಿಯಿತು. ಅದರಲ್ಲಿ ಪಾತ್ರ ವಹಿಸಿದವರಲ್ಲಿ, .ಜೆರಾಲ್ಡು ಮೊರಿಯರ್, ಮತ್ತು ಗ್ಲ್ಯಾಡಿಸ್ ಕೂಪರ್ ಇವರು ಮುಖ್ಯ. ಅದನ್ನು

ಹದಿಮೂರು ಸಲ ನೋಡಿದರು. ಪ್ರತಿಸಲ ಹೆಚ್ಚಿನ ತರಗತಿಯ ತಿಕೇಟು ಕೊಂಡುಕೊಳ್ಳುವುದು. ಆ ನಾಟಕದಲ್ಲಿಯ ಸಂಭಾಷಣೆಗಳು ರಸವತ್ತಾಗಿ ಇದ್ದುವು. ಹಾಡುಗಳಿಲ್ಲದ ನಾಟಕವದು. ಹಾಡುಗಳಿಲ್ಲದಿದ್ದರೂ ಒಳ್ಳೆಯ ಗದ್ಯವಿದ್ದರೆ, ತುರುಸಿನ ಮಾತುಗಳಿದ್ದರೆ ಜನತೆಯನ್ನು ಮುಗ್ಧಮಾಡಬಹುದಲ್ಲ, ಎಂಬುದು ಮನದಲ್ಲಿ ಬಿಂಬಿಸತೊಡಗಿತು. ನಾಟಕದ ಯಶಸ್ಸು ಹೆಚ್ಚಾಗಿ ಮನಹಿಡಿಯುವಂತಹ ಮಾತುಗಳ ಮೇಲೆ, ತನ್ಮಯರಾಗುವ ನಟರ ಮೇಲೆ ಅವಲಂಬಿಸಿದೆಯಲ್ಲದೆ ಹಾಡುಗಳಿಂದ ಮನ ತಣಿಸಿ, ಮರೆಯಿಸುವುದರಲ್ಲಿಯಲ್ಲ, ಎಂಬುದು ಅಲ್ಲಿಯ ಗದ್ಯನಾಟಕಗಳಿಂದ ಮನದಟ್ಟಾಗತೊಡಗಿತು. ಎರಡನೆಯ ನಾಟಕವು ಜಾಗಿರದಾರರಿಗೆ ಗದ್ಯನಾಟಕಗಳ ವೈಭವವನ್ನು ತೋರಿಸಿ, ಅದರ ಬಗೆಗೆ ಕಲ್ಪನೆಯನ್ನು ದೃಢಮಾಡಿತು. ಅದು ಶ್ರೀ ಶಾ ಅವರ 'ಸೇಂಟ ಜೋನ್'. ಪಾತ್ರ ಮಾಡಿದವಳು ಕುಮಾರಿ ಸಿಬಿಲ್ ಥೋರ್ನಡಾಯಿಕ್ ಎಂಬವಳು. ಈ ನಾಟಕವನ್ನು ಎಂಟು ಸಲ ನೋಡಿದರೂ ತೃಪ್ತಿಯಾಗಲಿಲ್ಲ. ಕೊನೆಗೆ ಪ್ರಯತ್ನಪಟ್ಟು ಅದರ ರಂಗ ತಾಲೀಮಿನ ವೇಳೆಯನ್ನು ತಿಳಿದುಕೊಂಡು, ಅಪ್ಪಣೆ ಪಡೆದುಕೊಂಡು, ನಾಟಕದ ದಿಗ್ದರ್ಶನದ ರೀತಿಯನ್ನು ನೋಡುವುದಕ್ಕೆ ಹೋದರು. ನಾಟಕಗಳಲ್ಲಿ ಮನರಂಜನೆಗೆ ಹಾಡುಗಳ ಬದಲು ಹಾಸ್ಯವೆ. ಹಾಸ್ಯವು ಎಲ್ಲರನ್ನು ರಂಜಿಸುವುದು; ಸಂಗೀತದಿಂದ ಮನದಣಿಯಬೇಕಾದರೆ ಸಂಗೀತದ ಬಗೆಗೆ ಕಲ್ಪನೆ, ಆಸ್ಥೆ, ತಿಳಿವಳಿಕೆ ಅವಶ್ಯ. ಆದರೆ ನಗುವುದು ಪ್ರತಿ ಮಾನವನ ಸ್ವಭಾವವು. ನಾಟಕವನ್ನು ನೋಡಿ ನಕ್ಕುನಲಿದಾಡಿದರೆ ನಾಟಕದ ಒಂದು ಗುರಿಯು ಸಾಧಿಸಿದಂತಾಯಿತು.

ಹಾಸ್ಯವು ಆ ಜನರ ಜೀವಾಳವಾಗಿದೆ. ೧೯೨೬ರ ಸಾರ್ವಜನಿಕ ಸಂಪಿನ (General strike) ಕಾಲ. ಒಂದು ರಾತ್ರಿ ೧೨ ಗಂಟೆಗೆ ಟ್ರೇಡಯೂನಿಯನ್‌ದವರು ಮರುದಿನದಿಂದ ಸಂಪು ಮಾಡಬೇಕೆಂದು ನಿರ್ಧರಿಸಿ, ಪ್ರಚಾರ ಪತ್ರಿಕೆಯನ್ನು ಹಂಚಿದರು. ಮರುದಿನ ಬೆಳಗು ಲಂಡನ್‌ದಲ್ಲಿ ಸ್ಮಶಾನಶಾಂತತೆ. ಗಾಡಿಗಳು ನಿಂತಲ್ಲೆ ನಿಂತಿವೆ. ಟ್ರಾಮುಗಳು ಸರಿಯಲೊಲ್ಲವು. 'ಬಸ್ಸು'ಗಳು ಬುಸುಗುಡಲಾರದೆ ಹೋದುವು. ಎಲ್ಲ ವ್ಯವಹಾರವು ಕಟ್ಟಾಯಿತು. ಆಗ ಸ್ವಯಂ ಸೇವಕರನ್ನು ಕರೆತಂದು ಗಾಡಿ ಮೋಟಾರುಗಳನ್ನು ನಡೆಯಿಸಬೇಕೆಂದು ಹವಣಿಸಿದರು ಸರಕಾರದವರು. ಕೆಲವು ಬಸ್ಸಿನ ಒಡೆಯರು ತಮ್ಮ

ಸ್ವಂತ ಬಸ್ಸುಗಳನ್ನು ನಡೆಸುತ್ತಿದ್ದರು. 'ಸಂಪು' ಎಂದ ಮೇಲೆ ಗದ್ದಲವಾಗ ದಿದ್ದೀತೆ? ತಮ್ಮ ಪ್ರಯತ್ನವನ್ನು ಬೀಳುಗೆಡಿಸಬೇಕೆಂದು ಈ ಖಾಸಗಿ ಬಸ್ಸು ಗಳು ಅಡ್ಡಾಡುತ್ತಿವೆಯೆಂದು ತಿಳಿದು ಅವುಗಳಿಗೆ ಕಲ್ಲು ಒಗೆಯತೊಡಗಿದರು ಸಂಪುಗಾರರು. ಸ್ಟ್ಯಾಂಡದ ಹತ್ತಿರ ಒಂದು ಬಸ್ಸು ಬಂತು. ಅದರ ಎಲ್ಲ ಗಾಜುಗಳು ಒಡೆದು ಹೋಗಿದ್ದುವು. ಉಳಿದುದು ಒಂದೇ ಒಂದು. ಅದರ ಮೇಲೊಂದು ಚೀಟಿ ಅಂಟಿಸಿದ್ದರು. 'ಕಲ್ಲುಗಳು ಇತ್ತಕಡೆಗೆ' ಎಂದು. ಈ ಬಗೆಯ ಹಾಸ್ಯತರಂಗಗಳಿಂದಲೇ ಭಯಾನಕ ಪರಿಸ್ಥಿತಿಗಳಿಂದಲೂ ಪಾರಾ ಗುವರು. ಆ ಸಂಪು ಮತ್ತಾವ ದೇಶದಲ್ಲಿಯಾದರೂ ಆಗಿದ್ದರೆ ರಕ್ತದ ಕಾಲುವೆ ಗಳು ಸಹಜವಾಗಿ ಹರಿಯಬಹುದಾಗಿತ್ತು.

ದೊಡ್ಡೂರಿನ ಗದ್ದಲವು ಬೇಗನೆ ಬೇಸರವನ್ನುಂಟುಮಾಡುವುದು. ಕೆಲಸ ವ್ಯವಹಾರ-ಉದ್ಯೋಗಗಳ ಉಪಟಳವನ್ನು ದೂರಮಾಡಿ ಕೆಲವು ವೇಳೆ ಯಾದರೂ ಆ ವಾತಾವರಣದಿಂದ ಪಾರಾಗಬೇಕೆಂದು ಆಗಾಗ ಅನ್ನಿಸುವುದು. ಅದಕ್ಕಾಗಿ 'ವಾರದಕೊನೆ' (week-end) ಯ ವಿಹಾರವು ಸಹಜವಾಗಿ ಬಿಟ್ಟಿದೆ. ಬದಲಾವಣೆಯ ಬಯಕೆಯು ತಾರುಣ್ಯದ ಕುರುಹು. ಚಳಿಗಾಲ-ಮಳೆಗಾಲದಲ್ಲಿ ವಿಹಾರಸ್ಥಾನಗಳು ಸಮೀಪದ ತಾಣಗಳೆ. ಬೇಸಗೆಯಲ್ಲಿ ಮಾತ್ರ ಸಮುದ್ರತೀರಕ್ಕೆ ಹೋಗುವುದು ರೂಢಿ. ಜಾಗಿರದಾರರ ಗುಂಪಿನವರ ಬೇಸಗೆಯ ವಾಸದ ತಾಣವು 'ವೆಂಟ್ನೊರ್' ಎಂಬುದು. ಇಂಗ್ಲಂಡದಲ್ಲಿಯ ಮೂರು ವರುಷದ ಅವಧಿಯಲ್ಲಿ ಇದೊಂದೇ ಸ್ಥಳಕ್ಕೆ ೭–೮ ಸಲವಾದರೂ ಹೋಗಿದ್ದರು. ಹೆಚ್ಚು ಬಳಿಕೆಯಾದ್ದರಿಂದ ಅಲ್ಲಿಯ ಮನೆಯ ಯಜಮಾನನ ಮನೆಯವರದೆಲ್ಲರದೂ ಪರಿಚಯವಾಗಿತ್ತು. ಸಲುಗೆ ಬೆಳೆಯಿತು. ಅವರ ಮನೆಯಲ್ಲಿ ೧೦–೧೨ ವಯಸ್ಸಿನ ಹುಡುಗನೊಬ್ಬ ಇವರ ಸಂಗಡಲೆ ಸಲುಗೆ ಯಿಂದಿರುತ್ತಿದ್ದ. ಇದೇನು ಅಚ್ಚರಿಯ ವಿಷಯವೆಂದು ಯಾರಾದರೂ ಮೂಗೇರಿಸಬಹುದು. ಆದರೆ ಇಂಗ್ಲಂಡದ ಹಳ್ಳಿಗಳಲ್ಲಿ ಭಾರತೀಯರು ಹೋದರೆ ಅವರ ಸಮೀಪಕ್ಕೆ ಬಾರದಷ್ಟು ಅಲ್ಲಿಯ ಹುಡುಗರಲ್ಲಿ ಹೆದರಿಕೆ ತುಂಬಿದೆ. ಭಾರತೀಯರ ಬಗೆಗೆ ಅದೇನು ಹೇಸಿಕೆಯೊ ಹೆದರಿಕೆಯೊ ಎನ್ನಿಸು ವುದು. ಆ 'ವೆಂಟ್ನೊರ್' ಹುಡುಗನ ಮಾತು ಅಲ್ಲಿಯ ಹುಡುಗರ ವರ್ತನೆಯ ಅಂತರಂಗವನ್ನು ಬಯಲಿಗೆ ತಂದಿತು.

**ಹುಡುಗ**: ಭಾರತದಲ್ಲಿ, ಹುಲಿ, ಕರಡಿ, ಹಾವು ಚೇಳುಗಳು ಇಲ್ಲವೆ ?
**ಜಾಗಿರದಾರ**: ಇವೆ ! ಅಲ್ಲಿ ಹುಲಿ, ಕರಡಿ, ಹಾವು ಎಲ್ಲವೂ ಇವೆ.
**ಹುಡುಗ**: ನೀವು ವಾಸಿಸುವಿರಿ ಹೇಗೆ ?
**ಜಾಗಿರದಾರ**: ನಾವು ಅವುಗಳಕಿಂತ ಬಲಿಷ್ಠರಿದ್ದೇವೆ. ನಾವು ಸಿಂಹನಹಾಗೆ ಪ್ರಾಣಿಗಳ ಒಡೆಯರಿರುವುದರಿಂದ ನಮಗೆ ಅವೇನು ಮಾಡುವುದಿಲ್ಲ.

ಆ ಹುಡುಗ ಗಾಬರಿಗೊಂಡ.

**ಜಾಗಿರದಾರ**: ಭಾರತದಲ್ಲಿ ಬರಿಯೆ ಹುಲಿ, ಕರಡಿ ಇವೆಯೆಂದು ಯಾರು ಹೇಳಿದರು ನಿನಗೆ ?
**ಹುಡುಗ**: ನಮ್ಮ ಮಾಸ್ತರು ! ನಮ್ಮ ಅಪ್ಪ !
**ಜಾಗಿರದಾರ**: 'ಅವರು ಅಲ್ಲಿ ಬೇಟೆಯಾಡಲು ಮಾತ್ರ ಹೋಗಿರಬೇಕು.'

ಎಂದು ನಗೆಯಾಡಿದರು.

ಬಹುಶಃ ಆ ಹುಡುಗನಂತೆ ಉಳಿದ ಹುಡುಗರಾದರೂ ಭಾರತದ ಬಗ್ಗೆ ವಿಚಿತ್ರ ಕಲ್ಪನೆಯನ್ನು ತಲೆಯಲ್ಲಿ ತುಂಬಿಕೊಂಡಿರುತ್ತವೆ. ಅಲ್ಲ-ಅಲ್ಲಿಯ ಶಿಕ್ಷಕರು ತುಂಬಿರುತ್ತಾರೆ.

ಇಂಗ್ಲಂಡದ ಸಾಮಾನ್ಯ ಜನತೆಯು ಭಾರತೀಯರ ಬಗ್ಗೆ ವಿಚಿತ್ರ ಕಲ್ಪನೆಯುಳ್ಳವರಿರುವುದರಿಂದ ಇವರನ್ನು ಕಂಡರೆ ಹುಡುಗರಿಗೆ ಹೆದರಿಕೆ, ಹಿರಿಯರಿಗೆ ಹೇಸಿಕೆ. ಕೆಲಜನರಿಗೆ ಕುತೂಹಲವೂ ಇರುವುದು. ಒಮ್ಮೆ ಜಾಗಿರದಾರರು 'ವರ್ದಿಂಗ' ಎಂಬ ಊರಿಗೆ ಹೋಗಿದ್ದರು. ಅಲ್ಲಿ 'ಸಾಂಪ್ರದಾಯಿಕ ಹೆಂಗಳೆಯರ ಸಂಘ' ಎಂಬುದೊಂದು ಇದೆ. ಆ ಸಂಘದ ಸದಸ್ಯರ ಸರಾಸರಿ ವಯಸ್ಸು ಸುಮಾರು ಅರವತ್ತು. ಅವರಿಗೆ ಗಾಂಧೀಜಿಯವರ ಬಗ್ಗೆ ಜ್ಞಾನ ಸಂಪಾದಿಸಬೇಕೆಂದು ಕುತೂಹಲ. ಅದಕ್ಕೆ ಕಾರಣವೂ ಒಂದಿತ್ತು; ಗಾಂಧೀಜಿ ಅವರ 'ಜೀವನ ಚರಿತೆ'ಯು ಪ್ರಕರಣಗಳ ರೂಪವಾಗಿ ಬರತೊಡಗಿತ್ತು. 'ಅಸಹಕಾರದ ಅಧಿದೇವತೆ'ಯೆಂದು ಹೆಸರು ಪಡೆದಿದ್ದರು ಗಾಂಧೀಜಿಯವರು. ಅಲ್ಲಿಯ ವೃತ್ತ ಪತ್ರಗಳ ಮೂಲಕ ಸರಿಯಾದ ಕಲ್ಪನೆ ಬರದು. ಅದಕ್ಕಾಗಿ, ಆ ಸಂಘದವರು ಜಾಗಿರದಾರರನ್ನು ಕೇಳಿಕೊಂಡರು, 'ಗಾಂಧಿ' ಅವರ ಬಗ್ಗೆ ಮಾತನಾಡಲು.

ಹರಟೆ ಹೊಡೆಯಲು, ಹಿರಿದಾದ ಹುಮ್ಮಸ್ಸು ಜಾಗಿರದಾರರಿಗೆ. ಭಾಷಣವೆಂದರೆ ಭೂತ ಭಯವೆ. ಅಂದು 'ಭಾಷಣ'ದ ಮಾತೆತ್ತಿದ ಕೂಡಲೆ ಶಾಲೆಯ ಭಾಷಣದ 'ಸವಿನೆನಪು' ಬರುತ್ತಿತ್ತು. ಭಾಷಣ ಮಾಡಲು ಅಸಾಧ್ಯವೆಂದು ಮನದಟ್ಟಾದ ಮೂಲಕವೆ 'ಬ್ಯಾರಿಸ್ಟರ' ಪರೀಕ್ಷೆಯನ್ನು ಕಟ್ಟದಿದ್ದುದು. ಇವೆಲ್ಲ ವಿಚಾರಗಳು ಬಂದು-ಬಂದು ಹೋದುವು. ಇವೆಲ್ಲವುಗಳ ಮೇಲೆ ಹಾಯಿದು ಬಂತು ಅಭಿಮಾನ—ಸ್ವಾಭಿಮಾನ-ಸ್ವದೇಶಾಭಿಮಾನ. ಇಂಗ್ಲಂಡದಲ್ಲಿಯ ಜನತೆಯು ತಮ್ಮ ಜನತೆಯ ಬಗ್ಗೆ ಯೋಗ್ಯ ಕಲ್ಪನೆಯಿಲ್ಲದವರಿರುವರೆಂದು ಅವರಿಗೆ ತಮ್ಮ ಮೇಲ್ಮೆಯನ್ನು ತೋರಿಸಬೇಕೆಂದು ಮನಸ್ಸು ಗಟ್ಟಿಮಾಡಿ, ಮಾತನಾಡಲು ಒಪ್ಪಿಕೊಂಡರು. ಆ ಸಂಘದ ಪರವಾಗಿ ಅಂದು ಒಂದು ಗಂಟೆಯ ಕಾಲ 'ಗಾಂಧಿಯವರ ಜೀವನ' ಮೇಲೆ ಭಾಷಣ ಮಾಡಿದರು ಜಾಗಿರದಾರರು. ಸ್ವಾಭಿಮಾನ-ಸ್ವದೇಶಾಭಿಮಾನದಿಂದುಕ್ಕುವ ಭಾಷಣವು ನೀರಸವಾದೀತೆ ? ಮಾತು ಕೇಳಿ ಜನ ಮುಗ್ಧರಾಗಿದ್ದರು. ಕೊನೆಗೆ, ಜಾಗಿರದಾರರ ಆಭಾರಮನ್ನಿಸುವಾಗ ಇವರಿಗೊಂದು 'ಬೈಬಲ್'ನ್ನು ಕಾಣಿಕೆಯಾಗಿ ಕೊಟ್ಟರು. 'ಗಾಂಧಿಯವರ ಚರಿತೆ'ಯು ಪುಸ್ತಕರೂಪವಾದೊಡನೆ ಸಂಘಕ್ಕೊಂದು ಪ್ರತಿ ಕಾಣಿಕೆ ಕೊಡುವೆನೆಂದು ಆಶ್ವಾಸನಕೊಟ್ಟು ಬಂದರು. ಲಂಡನ್‌ಕ್ಕೆ ಬಂದು ಕೆಲದಿನಗಳ ಮೇಲೆ ಒಂದು ಪ್ರತಿಯನ್ನು ಕಳಿಸಿದರು.

ಆಯ್. ಸಿ. ಎಸ್‌ದ ಪರೀಕ್ಷೆಯು ಸಮೀಪಿಸಿದುದರಿಂದ ಅತ್ತಿತ್ತ ಅಡ್ಡಾಡುವುದು ನಿಂತಿತು. ಅಭ್ಯಾಸವು ರಭಸದಿಂದ ಸಾಗಿತು. ಇದು ಎರಡನೆಯ ಸಲವಾದುದರಿಂದ ಜಾಗರೂಕತೆ ಹೆಚ್ಚಿತ್ತು. ಆದರೆ ಸುಮಾರು ಎರಡು ವರುಷ ಇಂಗ್ಲಂಡದಲ್ಲಿ ಕಳೆದುದರಿಂದ ಅಲ್ಲಿಯ ಸ್ವತಂತ್ರ ವಾತಾವರಣವು ಮೈಗೂಡಿಕೊಂಡಿತ್ತು. ಮಾತಿನಲ್ಲಿ ಒರಟುತನ ಬಂದಿತ್ತು. ತಮಗನಿಸಿದುದನ್ನು ನೇರವಾಗಿ ಹೇಳಿಬಿಡುವುದು ಸ್ವಭಾವವಾಗಿತ್ತು.

ಸಂದರ್ಶನದ ಸರತಿ ಬಂದಿತು. ಸಂದರ್ಶನದಲ್ಲಿ ಸಾಮಾನ್ಯವಾಗಿ ವರ್ತಮಾನಕಾಲದ ಚಟುವಟಿಕೆಗಳ ಬಗ್ಗೆ, ಜಗತ್ತಿನ ರಾಜಕಾರಣದ ಬಗ್ಗೆ, ಪ್ರಾಮುಖ್ಯವಾಗಿ ಭಾರತದ ರಾಜಕೀಯ ಸಮಸ್ಯೆಗಳ ಬಗ್ಗೆ ಕೇಳುವುದು. ೧೯೨೭ನೆಯ ಇಸ್ವಿಯಲ್ಲಿ ಭಾರತಕ್ಕೆ ಸಾಯಮನ್ ಕಮಿಶನ್ ಬಂದಿತ್ತು. ಇವರ ಸಂದರ್ಶನದಲ್ಲಿಯೂ ಬಂತು. ಆ ಸಂದರ್ಶನ ಸಮಿತಿಯ ಸಭಾಸದ

ನೊಬ್ಬನು ಕೇಳಿದನು ಜಾಗಿರದಾರರನ್ನು: 'ನಿಮ್ಮನ್ನು ಸಾಯಮನ್ ಸಮಿತಿಯ ಅಧ್ಯಕ್ಷರನ್ನಾಗಿ ಮಾಡಿದರೆ ಏನು ಮಾಡಬೇಕೆನ್ನುವಿರಿ ?'

**ಜಾಗಿರದಾರ:** ಭಾರತಕ್ಕೆ ಸಾಮಂತ ರಾಜ್ಯವನ್ನು ಕೊಡಬೇಕೆಂದು ಸಲಹೆ ಕೊಡುವೆ.

**ಸಭಾಸದ:** ಹಿಂದು-ಮುಸ್ಲಿಮ್ ಸಮಸ್ಯೆಗಳನ್ನು ಹೇಗೆ ಬಗೆ ಹರಿಸುವಿರಿ ?

**ಜಾಗಿರದಾರ:** ಅವು ಸಮಸ್ಯೆಗಳೇ ಅಲ್ಲ; ಆ ಬಗೆಯ ತಿಕ್ಕಾಟಗಳು ಯಾವ ದೇಶದಲ್ಲಿಯೂ ಅವೆ. ಇಲ್ಲಿಯುವರೆಗೆ ಭಾರತದಲ್ಲಿಯಾವ ಯಾವ ದೊಂಬಿಗಳೂ ಧರ್ಮದ ತಳಹದಿಯ ಮೇಲೆ ಆಗಿಲ್ಲ. ಆಗುವುದು ಶಕ್ಯವಿಲ್ಲ. ಅದರ ತಳವಲ್ಲಿರುವುದು ಆರ್ಥಿಕಸಮಸ್ಯೆ. ಸಾಮಂತರಾಜ್ಯ ಸಿಕ್ಕರೆ, ಈಗ ಕಾಣುವ ತೊಂದರೆಗಳೂ ಕಡಮೆಯಾಗುವವು.

**ಸಭಾಸದ:** ಆಡಳಿತದ ದೃಷ್ಟಿಯಿಂದ ಏನು ಸೂಚಿಸುವಿರಿ ?

**ಜಾಗಿರದಾರ:** ಭಾರತದ ಪ್ರಾಂತಗಳ ರಚನೆಯು ಈಗಿನ ರೀತಿಯಲ್ಲಿರ ಬಾರದು. ಈಗ ಮಾಡಿದುದು ಹಿಂದೆ ಗೆದ್ದುಕೊಂಡು ಬಂದ ರೀತಿಯಲ್ಲಿದೆ. ಭಾಷಾನುಗುಣ ಪ್ರಾಂತರಚನೆಯು ಎಲ್ಲ ತೊಂದರೆಗಳನ್ನು ಸರಿಪಡಿಸುವುದು.

**ಸಭಾಸದ:** ಇದೇನು, ಭಾಷಾಶಾಸ್ತ್ರದ ಅಭ್ಯಾಸದ ಮೂಲಕ ಭಾಷೆಯ ಮೇಲಿನ ಮೋಹವೊ ಇಲ್ಲವೆ, ಭಾಷೆಯು ಎಲ್ಲ ತೊಂದರೆಗಳನ್ನು ತೊಡಿದೊಗೆದುದರ ಉದಾಹರಣೆಗಳು ಇವೆಯೊ ?

**ಜಾಗಿರದಾರ:** ಸಾಕಷ್ಟು ಇವೆ! ಅಮೇರಿಕೆಯಲ್ಲಿ ಯಾರು ಬಂದು ನೆಲಸಿದರೂ ಅವರು ಅಮೇರಿಕೆಯವರೆ ಎಂದು ತಿಳಿದುಕೊಳ್ಳುತ್ತಾರೆ. ಅವಕ್ಕೆ ಅವರಾಡುವ ಒಂದು ಭಾಷೆ, 'ಅಮೇರಿಕನ್ ಭಾಷೆ'. ಒಂದು ಭಾಷೆಯ ಮೂಲಕ ತಿಳಿವಳಿಕೆ ಬೆಳೆದು ವ್ಯತ್ಯಾಸಗಳು ಕರಗುವುವು. ಭಾರತದಲ್ಲಿಯ ಉದಾಹರಣೆಯನ್ನೆ ಹೇಳುವೆ. ದಕ್ಷಿಣ ಭಾರತದ ಮುಸ್ಲಿಮರು ಪ್ರಾಂತಿಕ ಭಾಷೆಯಾದ ಕನ್ನಡ ವನ್ನೆ ಮಾತನಾಡುವುದರಿಂದ ಅಲ್ಲಿಯ ಜನತೆಯೊಂದಿಗೆ

ತನ್ಮಯರಾಗಿ ಹೋಗಿದ್ದಾರೆ........ಸಾಮಂತರಾಜ್ಯ ಸಿಕ್ಕರೆ ಈಗ ಕಾಣುವ ಎಲ್ಲ ತೊಂದರೆಗಳೂ ಕರಗುವುವು.

**ಸಭಾಸದ:** ಎಲ್ಲಿಯಾದರೂ ಉದಾಹರಣೆ !

**ಜಾಗಿರದಾರ:** ೧೮೩೯ ರಲ್ಲಿ ಲಾರ್ಡ ಡರ್ಹ್ಯಾಮ ಅವರನ್ನು ಕಾನಡಾಕ್ಕೆ ಕಳಿಸಿ, ಅಲ್ಲಿಯ ಸ್ಥಿತಿಗತಿಗಳನ್ನು ತಿಳಿದು ಸಲಹೆ ಕೊಡಲು ಕೇಳಿ ಕೊಳ್ಳಲಾಗಿತ್ತು. ಅವರು ಅಲ್ಲಿಗೆ ಹೋಗಿ ಅಲ್ಲಿಯ ಜಾತೀಯ ತೊಡಕುಗಳನ್ನು ತಿಳಿದು ಆ ಸಮಸ್ಯೆಗಳು ಬಗೆಹರಿಯ ಬೇಕಾದರೆ, ತೀವ್ರದಲ್ಲಿಯೆ ಸಾಮಂತರಾಜ್ಯ ಕೊಡಬೇಕೆಂದು ತಮ್ಮ ವರದಿಯನ್ನು ಒಪ್ಪಿಸಿದರು. ಅದರಂತೆ ಮುಂದೆ ನಡೆಯಲಾಯಿತು.

**ಸಭಾಸದ:** ನಿಮಗೆ ರಾಜಕಾರಣವನ್ನು ಕಲಿಸಿದವರಾರು ?

**ಜಾಗಿರದಾರ:** ಅರ್ಥಶಾಸ್ತ್ರದ ಶಾಲೆಯ ಶ್ರೀ ಹೆರಾಲ್ಡ ಜೆ. ಲಾಸ್ಕಿ ಅವರು.

**ಸಭಾಸದ:** ಹೀಗೊ ! ಹಾಗಾದರೆ ಸರಿಹೋಯಿತಲ್ಲ !

ಇದರ ಹೊಳವನ್ನು ಬೇರೆಡೆಗೆ ತಿರುಗಿಸುವುದರ ಸಲುವಾಗಿ ಮತ್ತೊಬ್ಬ ಸಭಾಸದನು ಪ್ರಶ್ನೆಯನ್ನು ಹಾಕಿದ.

**ಸಭಾಸದ:** ಲಂಡನದಲ್ಲಿ ಎಷ್ಟು ಕಾಲ ವಾಸಿಸಿದ್ದೀರಿ ?

**ಜಾಗಿರದಾರ:** ಸುಮಾರು ಎರಡು ವರುಷ !

**ಸಭಾಸದ:** ಹುಂ ! ಇಲ್ಲಿ ಏನೇನು ನೋಡಿರುವಿರಿ ?

**ಜಾಗಿರದಾರ:** ನಾನು, ನನ್ನ ಕೋಣೆ; ನನ್ನ ಕಾಲೇಜು, ನನ್ನ ಚಟಗಳು !

**ಸಭಾಸದ:** ಸ್ಫಟಿಕದರಮನೆ ನೋಡಿಲ್ಲವೆ ? ಬ್ರಿಟಿಶ್ ವಸ್ತುಸಂಗ್ರಹಾಲಯ ?

**ಜಾಗಿರದಾರ:** ಇಲ್ಲ. ವಾಚನ ಮಂದಿರವೊಂದು ನನಗೆ ಗೊತ್ತು

**ಸಭಾಸದ:** ಎರಡು ವರುಷ ಇದ್ದೀರಿ, ಇನ್ನೂ ನೋಡಿಲ್ಲವೆ ಅವುಗಳನ್ನು ?

**ಜಾಗಿರದಾರ:** ನನ್ನ ಸ್ವಭಾವ ವಿಚಿತ್ರವಿದೆ. ಲಂಡನ್‌ದಲ್ಲಿ ನೋಡುವುದೆಲ್ಲ ವನ್ನೂ ನಾನು ನೋಡಿದರೆ ನನಗೆ ಇಲ್ಲಿ ಇರಬೇಕೆಂದು ಅನಿಸು ವುದಿಲ್ಲ; ಅದಕ್ಕೆ ನಾನು ಎಲ್ಲವನ್ನೂ ನೋಡಿಲ್ಲ. ನನಗೆ ಇಲ್ಲಿ ಇನ್ನೂ ಕೆಲವು ಕಾಲ ಇರಬೇಕಾಗಿದೆ.

ಸಂದರ್ಶನವು ಇಷ್ಟು ಹೊತ್ತಿನವರೆಗೆ ನಡೆದುದು ಅವಲಕ್ಷಣವೆಂದು ಹೊರಗಿನ ಗೆಳೆಯರಿಗೆ ತಿಳಿದಿತ್ತು. ಆದರೆ ಅದು ಜಾಗಿರದಾರರಿಗೆ ಗೊತ್ತಿದ್ದಿಲ್ಲ. ಕೇಳಿದ ಪ್ರಶ್ನೆಗಾಗಿ ಗೊತ್ತಿದ್ದ ಉತ್ತರ ಕೊಡಬೇಕೆಂಬುದೆ ಅವರಿಗೆ ಗೊತ್ತು.

ಎರಡನೆಯ ಸರತಿಯಲ್ಲಿಯೂ ಮೇಲೆ ಬರಲಿಲ್ಲ ಅಂಕಿ. ಆಯ್. ಸಿ. ಎಸ್.ದ ಆಸೆಯು ಸಂಪೂರ್ಣ ಸವೆದುಹೋಯಿತು. ಇನ್ನುಳಿದುದು ಕೊನೆಯ ಸಲ. 'ಮೂರನೆಯದಕ್ಕೆ ಮುಕ್ತಿ' ಯೆಂಬುದು ಸತ್ಯ. ಆದರೆ ಎರಡು ವರುಷ ಕಳೆದರೂ ಇದ್ದಕ್ಕೆಇದ್ದಂತೆ ಇದ್ದುದು ಎದೆಗೆಡಿಸಲಾರಂಭಿಸಿತು. ಎಂ. ಎ.ಕ್ಕೆ ಓದುವುದು ಹೆಚ್ಚಾಯಿತು. ಮನೆಯವರ ಆಜ್ಞೆಯು ಆಜ್ಞೆಯಾಗಿಯೆ ಉಳಿಯಿತು. ಬಯಕೆಯು ಎಂ. ಎ. ಮಾತ್ರ ಭರದಿಂದ ಸಾಗಿತ್ತು. ಮನದೊಲವಿನಂತೆಯೆ ಸಾಗಿದರೆ ಕಾರ್ಯವು ಸುಲಭವಾಗುವುದಲ್ಲದೆ ಯಶಸ್ವಿಯಾಗುವುದು.

ಒಮ್ಮೆ ಅರ್ಥ ಶಾಸ್ತ್ರದ ಶಾಲೆಗೆ ಹೋದಾಗ ಶ್ರೀ ಲಾಸ್ಕಿ ಅವರು ಜಾಗಿರದಾರರನ್ನು ಕೇಳಿದರು, 'ಯಾಕೆ! ಇತ್ತೀಚೆಗೆ ನೀವು ಕಂಡಿಲ್ಲ!' 'ಅಹುದು! ಎಂ. ಎ. ದ ಅಭ್ಯಾಸದ ಒತ್ತಡವು ಹೆಚ್ಚಾಗಿದೆ' ಎಂದರು ಜಾಗಿರದಾರರು.

'ಎಂ. ಎ. ಕ್ಕೂ ಓದುತ್ತೀರಾ ? ಏನು ವಿಷಯ ?'

'ಭಾಷಾಶಾಸ್ತ್ರ'

'ಏನು ? ಭಾಷಾಶಾಸ್ತ್ರವೆ ? ನಿಮ್ಮ ಆಯ್ಕೆಯು ಸರಿಯಾಗಿಲ್ಲವೆಂದೆನಿಸುತ್ತದೆ ನನಗೆ. ನಿಮ್ಮ ವಿಚಾರದ ರೀತಿಯೂ ವಿಷಯ ಗ್ರಹಣಶಕ್ತಿಯೂ 'ರಾಜಕಾರಣ'ದ ಕಡೆಗೆ ಹೆಚ್ಚಾಗಿದೆ. ಅದುವೆ ನಿಮಗೆ ಯೋಗ್ಯ!' ಎಂದರು ಲಾಸ್ಕಿ ಅವರು.

ಉತ್ತರ ಕೊಡಲಾರದೆ, ಕೈಕುಲುಕಿಸಿ ಹೊರಟರು ಜಾಗಿರದಾರರು. ತಲೆಯಲ್ಲಿ ವಿಚಾರ ಮಾತ್ರ ಸಾಗಿತ್ತು.

ಎಂ. ಎ. ದ ವಿಷಯವು ತಮ್ಮದೆ ಎಂಬ ಒಗರಿನಲ್ಲಿ ಆತ್ಮ ವಿಶ್ವಾಸದಿಂದ ಇರುತ್ತಿದ್ದರು. ಸಂಸ್ಕೃತದ ಸಹಾಯ ಸಾಕಷ್ಟಾಗುವದೆಂದು ಅದರ ಹೆದರಿಕೆ

ಇರಲಿಲ್ಲ. ಪೇಪರುಗಳಲ್ಲದೆ ಒಂದು ಪ್ರಬಂಧವೂ ಇತ್ತು. 'ಜ್ಞಾನೇಶ್ವರಿ'ಯ ಮೇಲೆ ಬರೆಯಬೇಕಾಗಿತ್ತು ಆ ಪ್ರಬಂಧ. * ಈ ಆತ್ಮವಿಶ್ವಾಸವು ಮಾತ್ರ ಜಾಗಿರದಾರರನ್ನು ಅಳವು ತಪ್ಪಿಸಿ ಮೈಮರೆಯಿಸಿತು. ಅದರಿಂದ ಲಾಭವೂ ಆಯಿತು; ಹಾನಿಯೂ ಆಯಿತು.

ಇದೇ ಸಮಯಕ್ಕೆ ಆರ್ಥಿಕ ಬಿಕ್ಕಟ್ಟು ಬಂದಿತ್ತು ಅಲ್ಲಿ. ಒಂದು ಪೌಂಡಿಗೆ ೨೫೦ ಫ್ರ್ಯಾಂಕುಗಳು ಸಿಗುತ್ತಿದ್ದುವು. ಇದರ ಉಪಯೋಗ ಮಾಡಿಕೊಳ್ಳಬೇಕೆಂದು, ಮೂರು ಪೌಂಡು ಮುರಿಸಿ, ಫ್ರಾನ್ಸಕ್ಕೆ ಹೊರಟರು. ಫ್ರಾನ್ಸಕ್ಕೆ ಹೋಗಲು ಮೂರು ಮಾರ್ಗಗಳು: ಡೋವರದಿಂದ ಕ್ಯಾಲೆ; ಫೋಕ್‌ಸ್ಟನ್‌ದಿಂದ ಬೊಲೊನ್; ಡಿಯಪ್‌ದಿಂದ ನ್ಯೂಹ್ಯಾವೆನ್. ಮೂರನೆಯದು ಸ್ವಲ್ಪ ಸೋವಿಯಾಗುವುದಲ್ಲದೆ ಪ್ರವಾಸವೂ ಹೆಚ್ಚು ವೇಳೆಯ ವರೆಗೆ ಆಗುವುದು. ವಿಹಾರಕ್ಕೆಂದು ಹೊರಟಾಗ ಕಾಲಹರಣವೂ ಒಂದು ಗುರಿಯಾಗಿರುವುದು. ಇವರು ಹೊರಟ ಹಡಗದಲ್ಲಿಯ ಮೂಲೆಯೊಂದರಲ್ಲಿ ಭಾರತದ ಸೈನ್ಯಖಾತೆಯಿಂದ ನಿವೃತ್ತನಾದ ಅಧಿಕಾರಿಯೊಬ್ಬ ಕುಳಿತಿದ್ದ. ಇವರೂ ಮೈಮರೆತು ಸುಖಬಡುತ್ತಿದ್ದುದನ್ನು ನೋಡಿ ಅವನಿಗೆ ಮೋಜೆನಿಸಿತು. ಅವನೂ ಬ್ರ್ಯಾಂಡಿಯ ಆವೇಶದಲ್ಲಿದ್ದ. ತಾನೊಬ್ಬನೆ ಕೂಡುವುದಕ್ಕಿಂತ ಇವರೊಡನೆ ಸೇರಬೇಕೆಂದು, 'ಏಯ್! ಒದರಿ ಮಾತನಾಡುವುದರ ಮೇಲಿಂದ ನೀವು ಭಾರತೀಯರಿರಬೇಕು ಅನ್ನಿಸುತ್ತದೆ' ಎಂದನು.

'ನಿಮ್ಮ ಒಗರಿನ ಮಾತು-ವೇಷ ನೋಡಿದರೆ ತಾವೂ ಭಾರತದಲ್ಲಿ ವಾಸವಾಗಿರಬೇಕೆಂದು ನಮಗೂ ಅನ್ನಿಸುತ್ತದೆ' ಎಂದರು ಜಾಗಿರದಾರರು.

ಅವನು ಇವರ ನಗೆಮಾತಿಗಾಗಿ ಹೆಚ್ಚು ಹತ್ತಿರ ಬಂದು, 'ಇಂದಿನ ಕುಡಿತದ ವೆಚ್ಚವೆಲ್ಲ ನನ್ನದು' ಎಂದು ಉಸುರಿದ. ಇವರಿಗೂ ಆ ಆವ್ಹಾನವು ಸುಖದಾಯಕವೆನಿಸಿತು. ಜಾಗಿರದಾರರೂ ಅವರ ಗೆಳೆಯರೂ ಆ ನಿವೃತ್ತ ಅಧಿಕಾರಿಯೂ ಬಂದು ಮೇಜಿನ ಸುತ್ತಲು ಕುಳಿತರು. ನಡುವೆ ಬ್ರ್ಯಾಂಡಿಯ

---

* "The Influence of old Kanerese on Dnaneshwari" Published: 1930. In The Annals of Bhandarkar Oriental Research Institute.

ಬಾಟಲಿಗಳು; ಕುಪ್ಪೆಗಳು. ಹವೆಯು ಹೆಚ್ಚು ಶಂಪಾಗಿತ್ತು. ಸಮುದ್ರವ ರಭಸದಲ್ಲಿತ್ತು. ಬ್ರ್ಯಾಂಡಿಯ ಮಬ್ಬೇರಲು ತೊಡಗಿತ್ತು; ಮಾತು ಮೇ ಮೀರಿ ಬರತೊಡಗಿದುವು:

ಅವನು: ನೀವು ಇಂಗ್ಲಂಡದಲ್ಲಿ ಎಷ್ಟುಕಾಲ ಕಳೆದಿದ್ದೀರಿ ?

ಜಾಗಿರದಾರ: ಎರಡು ವರುಷಗಳು. ಭಾರತದಲ್ಲಿ ನೀವು ಎಷ್ಟು ಕಾಲ ವಾಸ ವಾಗಿದ್ದಿರಿ ?

ಅವನು: ನಾನೆ ! ೧೨ ವರುಷ ಕ್ವೆಟ್ಟಾದಲ್ಲಿದ್ದೆ.

ಜಾಗಿರದಾರ. ಭಾರತೀಯರ ಬಗ್ಗೆ ನಿಮ್ಮದೇನು ಅಭಿಪ್ರಾಯ ?

ಅವನು: ಬಹಳ ಒಳ್ಳೆಯ ಜನರು !

ಜಾಗಿರದಾರ: ಅಂತಹ ಒಳ್ಳೆಯವರಿಗೆ ನೀವು ಅವರ ರಾಜ್ಯವನ್ನು ಮರ ಕೊಡುವದಿಲ್ಲವೇಕೆ ?

ಅವನು: ಏನು ! ರಾಜ್ಯವನ್ನು ತಿರುಗಿ ಕೊಡುವುದೆ ? ನಾವು ಗೆದ್ದಿದ್ದೇವೆ. ನೀವು ತಿರುಗಿ ಪಡೆಯಬೇಕಾಗಿದ್ದರೆ, ನಮ್ಮನ್ನು ಹೊರ ಹಾಕಿರಿ. ನಮ್ಮನ್ನು ಹೊಡೆದು ಹೊರಗೆ ಹಾಕಿರಿ. ಆಗ ಹೋಗು ತ್ತೇವೆ. ಬೇಡಿದರೆ ಕೊಡಬಹುದೆ ? ನೀವಿನ್ನೂ ಹಸುಗೂಸುಗಳು. ಹೊಡೆದು ಹೊರಗೆ ಹಾಕಿರಿ........ಹೋಗುತ್ತೇವೆ............ ಹೋಗುತ್ತೇವೆ.

ಬ್ರ್ಯಾಂಡಿಯ ಮಬ್ಬು ತೀರ ಮೈಮೇಲೆ ಬಂದುದರಿಂದ ಮಾತುಗಳು ನಿಂತವು ಮಾತಾಡಿದವರಾರಿಗೂ ಮಾತಾಡಿದುದರ ಅರಿವು ಇದ್ದಂತೆ ತೋರಲಿಲ್ಲ. ಸೆ ಅದನ್ನು ಮರೆಸಿತ್ತು. ಮೈಮರೆತ ಸ್ಥಿತಿಯಲ್ಲಿ ಬಾಯ್ಬಿಚ್ಚಿ ಬಂದ ಮಾತುಗಳು ಎಚ್ಚರು ಬಂದ ಮೇಲೆ, ಆ ಅಧಿಕಾರಿಯು ಜಾಗಿರದಾರರಿಗೆ ತನ್ನ ಮನೆಯ ವಿಳಾಸವನ್ನು ಕೊಟ್ಟನು. ಕೆಲ ದಿನಗಳ ನಂತರ ಜಾಗಿರದಾರರೂ ಅವನಲ್ಲಿ ಹೋಗಿದ್ದರು.

ಮೂರನೆಯ ವರುಷ ಮಾತ್ರ ಎಲ್ಲವೂ ವಿಚಿತ್ರವಾಗಿ ಪರಿಣಮಿ ತೊಡಗಿತು. ಬ್ಯಾರಿಸ್ಟರಿಯ ವಿಚಾರವು ಎಲ್ಲಿಯೊ ಎಂದೊ ಹೋಗಿತ್ತು

ಆಯಿ. ಸಿ. ಎಸ್. ದ ಆಸೆಯೂ ಕರಗಿ ಹೋಗತೊಡಗಿತ್ತು. ಮೂರನೆಯ ಸಲವೊಂದು ಸೇರಿಬರಬೇಕೆಂಬ ವಿಚಾರ ಮಾತ್ರವಿತ್ತು. ಎಂ. ಎ. ದ ಅಭ್ಯಾಸವು ಹುರುಪಿನಲ್ಲಿ ಸಾಗಿತ್ತು. ಎಂ. ಎ. ಆಗುವುದು ಮೊದಲು ಮೊದಲು, ಅನಿವಾರ್ಯ ಪ್ರಸಂಗವೆಂದು ಬಗೆದಿದ್ದರೂ ಪದವಿಗಾಗಿ ಎಂದಿದ್ದರೂ ಮೂರನೆಯ ವರುಷದ ವಾಸದಲ್ಲಿ ಅದರ ಬಗ್ಗೆ ಒಳ್ಳೆಯ ಆಸ್ಥೆಯೂ ಆಸಕ್ತಿಯೂ ಉಂಟಾದುವು. ಎಂ. ಎ. ಕ್ಕಾಗಿ ಹೆಮ್ಮೆ ಅನ್ನಿಸತೊಡಗಿತು. ಎಂ. ಎ. ಸಹಜವಾಗಿಯೆ ಆಗುವುದು ಎಂಬುದರ ಉನ್ಮಾದವೇ ಆಯಿತು ಎನ್ನಬಹುದು.

ಓದು ಬೇಸರವಾಗತೊಡಗಿತು. ಟೆನ್ನಿಸ್ ಆಟವು ಹೆಚ್ಚಾಗತೊಡಗಿತು. ಬೇಸಗೆಯಲ್ಲಿ ಅಲ್ಲಿ ಬೆಳಗಿನ ನಾಲ್ಕು ಗಂಟೆಯಿಂದ ರಾತ್ರಿಯ ಹತ್ತು ಗಂಟೆಯ ವರೆಗೆ ಬೆಳಕು ಇರುತ್ತದೆ. ಸಾಯಂಕಾಲ ಒಕ್ಕೆ ಊಟಮುಗಿಸಿ, ಆಟವಾಡಲು ಸುರುವುಮಾಡುವುದು. ಮಬ್ಬುಗತ್ತಲಾಗುವ ವರೆಗೂ ಆಡುವುದು. ಆಡುವಾಗ ಒಂದೆ ನೂಲಿನ ಬಟ್ಟೆಯನ್ನು ಧರಿಸುವುದು. ಆಟನಾದ ಕೂಡಲೆ ತಂಪುಪಾನೀಯಗಳನ್ನು ಕುಡಿಯುವುದು. ಆಟವಾಡಿದಕೂಡಲೆ ಕುಡಿಯುವುದೂ ಬೆವರಿನಲ್ಲಿ ಗಾಳಿಗೆ ಕೂಡುವುದೂ ಆರೋಗ್ಯಕರವಲ್ಲವೆಂದು ಅಲ್ಲಿಯ ಜನರು ಹೇಳಿದರೂ ಕೇಳುವ ತಾಳ್ಮೆ ಇವರಲ್ಲಿದ್ದಿಲ್ಲ. 'ತಮಗೆ ಹೇಳುವವರಾದರೂ ಯಾರು' ಎಂಬ ಒಗರು.

ಇಂಗ್ಲಂಡದಲ್ಲಿಯ ಕೊನೆಯ ವರುಷವೆಂದು ಅಲೆದಾಟವೂ ಹೆಚ್ಚಾಯಿತು. ಚಳಿಗಾಲದಲ್ಲಿ ಮಂಜೂ ಹಿಮವೂ ಬೀಳುವುದು. ಮಂಜು ಬೀಳಲು ತೊಡಗಿದರೆ, ಬೀದಿಯಲ್ಲಿಯ ವ್ಯವಹಾರವೆಲ್ಲ ಕಟ್ಟಾಗುವುದು. ಬಾಯಲ್ಲಿ ಹಿಡಿದ ಸಿಗರೇಟಿನ ತುದಿಯ ಬೆಂಕಿಯೂ ಕೂಡ ಕಾಣದಷ್ಟು ಮಂಜು. ಪೋಲೀಸನು ಕಾಣಿಸಿಕೊಳ್ಳಬೇಕೆಂದು ಅವನ ತಲೆಗೊಂದು ಡುಬ್ಬಕ್ಕೊಂದು ಹೀಗೆ ಎರಡು ವಿದ್ಯುದ್ದೀಪಗಳ ಏರ್ಪಾಡು ಮಾಡಿದ್ದರೂ ವಾಹನಗಳು ಅವನ ಹತ್ತಿರ ಹೋದಾಗ್ಗೆಯೆ ಅವನು ಕಾಣುವನು. ಮಂಜು ಬೀಳತೊಡಗಿದ ಒಂದು ಗಂಟೆಯಲ್ಲಿಯೆ ಒಂದೊಂದು ಬೀದಿಯಲ್ಲಿ ಅನೇಕ ಅಪಘಾತಗಳು ಸಂಭವಿಸುವುವು. ವಾಹನಗಳೆಲ್ಲವು 'ಅಂಬೆಗಾಲಿಟ್ಟಂತೆ' (crawling pace) ಸವರುತ್ತ ಸಾಗಿರುವುವು. ಆ ಸಲ ಒಮ್ಮೆ

ಹೀಗಾಯಿತು: ಜಾಗಿರದಾರರು ಮತ್ತು ಗೆಳೆಯರು ಕೂಡಿಕೊಂಡು ಒಂದು ಹೊಟೆಲದಲ್ಲಿ ಚಹಾ ಕುಡಿಯುತ್ತ ಕುಳಿತಿದ್ದಾರೆ. ಮೋಟರು ಬರುವ ಸಪ್ಪಳ ಕೇಳತೊಡಗಿತು. ದೀಪವು ಮಸುಕಾಗಿ ಕಾಣತೊಡಗಿತ್ತು. ಮೋಟರು ಬರ ಬರುತ್ತ ಕಾಲಾದಿಯ ಮೇಲೆ ಬಂತು. ಕ್ಷಣಾರ್ಧದಲ್ಲಿ ಹೊಟೆಲದ ಕನ್ನಡಿಯ ಕಿಟಕಿಗೆ ಹಾಯಿದು ಅಪಘಾತವಾಗುವುದೆಂದು ಒಳಗಿನವರಿಗೆ ಗೊತ್ತಿದ್ದರೂ ತಡೆಯುವುದಾಗಲಿಲ್ಲ. ಸಾವಕಾಶವಾಗಿ ಬಂದ ಮೋಟರು ಹೋಟೆಲದ ಕಿಟಕಿಗೆ ಹಾಯಿತು. ಅಲ್ಲಿಟ್ಟದ್ದ ಕೇಕು ಬಿಸ್ಕೀಟುಗಳುರುಳಿದವು. ಮಂಜು ಬಿದ್ದಾಗ ಬೀದಿಯಲ್ಲಿ ಹಾದಾಡುವುದೆಂದರೆ ಸಾಹಸದ ಮಾತೆ.

ಮಂಜಿನದೊಂದು ರೀತಿಯಾದರೆ ಹಿಮದ ರೀತಿ ಬೇರೆ. ಹಿಮ ಬೀಳಲು ತೊಡಗಿದರೆ ಇಂಗ್ಲಂಡದವರಿಗೊಂದು ಹಬ್ಬ. ಹುಡುಗರು ಹಿರಿಯರು ಕೂಡಿಯೆ ಅಲೆಯುವುದು. ೧೯೩೮ರ ಹೊಸ ವರುಷದ ಹೊಸದಿನದ ಮುನ್ನಾದಿನ. ಎಲ್ಲೆಲ್ಲಿಯೂ ಉತ್ಸಾಹ. ಇಡಿರಾತ್ರಿ ಎಲ್ಲರೂ ಅಡ್ಡಾಡುವವರೆ! ಅಂದು ಹಿಮ ಬೀಳುತಲಿತ್ತು. ಬೀಳುವುದು ಕಾಣದಂತೆ, ಬಿದ್ದಾಗ ಗೊತ್ತು. ಮೈಮೇಲೆ ಬಿದ್ದರಂತೂ ಎಚ್ಚರಿಕೆ ಬರುವುದು. ನೆಲದ ಮೇಲೆ ಅದು ಬೂರಲರಳಿಯಂತೆ, ಬೀಳುವುದು. ಮೊಳಕಾಲ ಮಟ್ಟಿಗೆ ಬೀಳುವುದು.

ಅಂದು ರಾತ್ರಿ ತಾವೂ ಅಡ್ಡಾಡಬೇಕು ಎಂದು ಜಾಗಿರದಾರರಿಗೆ ಹುರುಪು ಬಂತು. ಅವರ ಸಹವಾಸಿಯೊಬ್ಬನಿದ್ದ. ಅವನು ಅದೇ ವರುಷ ಇಂಗ್ಲಂಡಕ್ಕೆ ಬಂದಿದ್ದನು. ಇವರ ಜೊತೆಗೆ ಅದೇ ಮನೆಯಲ್ಲಿರುತ್ತಿದ್ದ. ಅವನು ಸ್ವಿತ್ಸರ್ಲಂಡದವನು. ಅವನಿಗೆ ಮೊದಲು ಮೊದಲು ಇಂಗ್ಲಿಶ ಬರುತ್ತಿದ್ದಿಲ್ಲ. ಕಲಿಯುವ ಅವಸ್ಥೆಯಲ್ಲಿದ್ದಾಗ, 'ಆಕಳು' ಎನ್ನುವುದಕ್ಕೆ ಅವನು 'ಶ್ರೀಮತಿ ಎತ್ತು' (Lady Bull) ಎನ್ನುತ್ತಿದ್ದನಂತೆ! ಅದಕ್ಕೆ ಜಾಗಿರದಾರರು ವಿನೋದಕ್ಕಾಗಿ ಅವನನ್ನು 'ಲೇಡಿಬುಲ್' ಎಂದೆ ಕರೆಯುತ್ತಿದ್ದರು. ಅವನಿಗೇನು, ಹಿಮ ಬೀಳುವುದು ಮನೆಮಾತಿನಂತೆ. ಅವನೂ ಇವರೂ ಕೂಡಿ ಅಂದು ರಾತ್ರಿ ೧೦–೧೨ ಮೈಲಿನಷ್ಟು ಆ ಹಿಮದ ಕೆಸರಿನಲ್ಲಿ ಅಲೆದಾಡಿದರು. ಚಳಿ ಹಿಡಿದೀತೆಂಬುದರ ಅರಿವು ಇಲ್ಲ.

ಅಳವು ತಪ್ಪಿದರೆ ಕೇಳೀತೆ. ಚಳಿಯು ತಳಕ್ಕೆ ಹಾಕಿತು ಜಾಗಿರದಾರರನ್ನು. ೧೯೩೮ನೆಯ ಎಪ್ರಿಲ ತಿಂಗಳು ಒಂದು ದಿನ ಒಮ್ಮೆಲೆ ಎದೆಯಲ್ಲಿ

ನೋವಾಗಲು ತೊಡಗಿತು. ಉಸಿರು ಹಿಡಿದು-ಹಿಡಿದಹಾಗಾಯಿತು. ಸುಮ್ಮನೆ ಚಳಿಗೆ ಹೀಗಾಗಿರಬಹುದೆಂದು ಅಂದು ಹೊರಗೆ ಹೋಗದೆ ಮನೆಯಲ್ಲಿಯೆ ಮಲಗಿಕೊಂಡರು. ಆದರೆ ನೋವು ಹೆಚ್ಚಾಗತೊಡಗಿತು. ಮೂರನೆಯ ದಿನ ವಂತೂ ನೋವು ಹೆಚ್ಚಾಗಿ ಹಾಸುಗೆಯಲ್ಲಿ ಹೊರಳಲು ಕೂಡ ಆಗದಾಯಿತು. ಗೆಳೆಯನೊಬ್ಬನು ಬಂದು ಆಸ್ಪತ್ರೆಗೆ ಕರೆಮುಕೊಂಡು ಹೋದನು. ಡಾಕ್ಟರನು ಪರೀಕ್ಷೆನೂಡಿ. 'ಪ್ಲುರಸಿ' (Pleurisy) ಎಂದು ನಿದಾನಿಸಿದನು. ಹೆಚ್ಚಾಗಿ ಚಳಿಯಲ್ಲಿ ಅಲೆದುದು, ದೇಹವನ್ನು ಗಾಳಿಗೆ ಬಿಟ್ಟುದು ಇದರ ಕಾರಣವು, ಎಂದನು. ಎದೆಯಲ್ಲಿ ನೋವಾಗಿದ್ದರೂ ಮಾತಿನಲ್ಲಿ ವಿನೋದವೆ. 'ಪ್ಲುರಸಿಯೆ! ............ಅದು........ರಾಜರ ಬೇನೆ' ಎಂದರು ಜಾಗಿರದಾರರು. ಅದೆ ಸಮಯಕ್ಕೆ ಈಗ ಗತಿಸಿದ ಐದನೆಯ ಜಾರ್ಜ ಅರಸರಿಗೆ ಪ್ಲುರಸಿ ಬೇನೆ ಬಂದಿತ್ತು. ಆದಕ್ಕೆ ಡಾಕ್ಟರನು: 'ತರುಣ ಗೆಳೆಯಾ! ನಿನ್ನದು ಒಣ ಪ್ಲುರಸಿ: ಅರಸನದು ಹಸಿಯದು. ಅದು ನಿನಗೆ ಆಗಿದ್ದು ಮೂರು ದಿನ ಮನೆಯಲ್ಲಿ ಬಿದ್ದಿದ್ದರೆ ನನ್ನಡೆಗೆ ಬರುವ ಯೋಗವೇ ಬರುತ್ತಿದ್ದಿಲ್ಲ. ಒಣ ಮಾದರಿಯದೆಂದು ಬದುಕಿಕೊಂಡಿದ್ದಿ' ಎಂದನು. ಒಂದೆ ಮಗ್ಗಲಿಗೆ ೧೮ ದಿನಗಳ ವರೆಗೆ ಮಲಗುವ ಪ್ರಸಂಗ ಬಂತು.

ಬೇನೆಯ ಬಳಲಿಕೆಯಲ್ಲಿ ಒಂದು ದಿನ ಕನಸು. ಕನಸಿನಲ್ಲಿ ತಂಗಿಯು ಜಾಗಿರದಾರರನ್ನು ಕೂಗುತ್ತಿದ್ದಾಳೆ. ಮತ್ತೆ ಎಚ್ಚರ; ಗಾಬರಿಗೊಂಡಿತು ಮನವು. ಹಿಂದೆ ತಾಯಿ ಕನಸಿನಲ್ಲಿ ಕೂಗಿದುದು ನೆನಪಿಗೆ ಬಂತು. ಎಚ್ಚತ್ತು ತಾಯಿಯೆಡೆಗೆ ಹೋದಾಗ ಅವಳು ಮರಣೋನ್ಮುಖಳಾಗಿದ್ದಳು. ಇದೇನು ಕನಸು! ಇಂತಹ ಎದೆಯ ನೋವಿನಲ್ಲಿಯೆ ಬೇರೊಂದು ಹೊಡೆತ. ಆ ಹಿಂದಿನ ಕನಸಿನ ಪರಿಣಾಮದ ಮೇಲೆ ಅಂದೂ ತಮ್ಮ ತಂಗಿ ತೀರಿದಳೆಂದ ಅನ್ನಿಸತೊಡತು. ಮರುದಿನ ಗೆಳೆಯನೊಬ್ಬನಿಗೆ ಹೇಳಿದರು.

ಕೆಲದಿನಗಳಾದ ಮೇಲೆ ನಿಜಸಂಗತಿಯು ತಿಳಿದು ಬಂತು. ತಂಗಿಯು ತೀರಿದ್ದು ನಿಜ. ಆದರೆ ಜಾಗಿರದಾರರಿಗೆ ವಿದೇಶದಲ್ಲಿ ದುಃಖವಾಗಬಾರದೆಂದು ತಿಳಿಸಿದ್ದಿಲ್ಲ. ಸುಮ್ಮನೆ ಸುದ್ದಿ ಹೇಳಿದಂತೆ ಹೇಳುವುದಕ್ಕೆ ಒಂದು ಪತ್ರ ಜಾಗಿರದಾರರ ಗೆಳೆಯನಿಗೆ ಬಂದಿತ್ತು. ಕೆಲವರ ಕನಸುಗಳು ಭವಿಷ್ಯವನ್ನು ನುಡಿಯುವುವು.

ಬೇನೆ ಬಿದ್ದು ಏಳುವ ಹೊತ್ತಿಗೆ ಬಂತು ಎಂ. ಎ. ದ ಪರೀಕ್ಷೆ. ಪೇಪರುಗಳೆಲ್ಲವು ಸಾವಧಾನವಾಗಿ ಸಾಗಿದುವು. ಆದರೆ ಪ್ರಬಂಧವನ್ನು ಮಾತ್ರ ನಿಯಮಿತ ವೇಳೆಯಲ್ಲಿ ಸಲ್ಲಿಸಲಾಗಲಿಲ್ಲ. ಅಲ್ಲಿಯ ಪದ್ಧತಿಯಂತೆ, ಒಂದು ಪೌಂಡು ದಂಡ ತೆತ್ತು ಕೆಲ ದಿನಗಳ ಮೇಲೆ ಕೊಟ್ಟರು ಪ್ರಬಂಧವನ್ನು. ೧೯೨೮ರ ಜೂನದಲ್ಲಿ ಎಂ. ಎ. ಪರೀಕ್ಷೆಯಲ್ಲಿ ಉತ್ತೀರ್ಣರಾದರು.

ಜುಲೈದಲ್ಲಿ ಆಯ್. ಸಿ. ಎಸ್‌ಉ. ಸಂದರ್ಶನವು ಬಂತು. ಪರೀಕ್ಷೆಯೂ ಬಂದು ಹೋಯಿತು. ಈ ಸಲ ಏನೂ ಆಸ್ಥೆಯಿರಲಿಲ್ಲ.

ಸಂದರ್ಶನದಲ್ಲಿ 'ಇಂಗ್ಲಂಡಕ್ಕೆ ಬಂದುದರಿಂದ ನಿನಗೆ ಬಂದ ಲಾಭವೇನು ?' ಎಂದು ಕೇಳಿದರು.

'ನಾನು ಆರು ಇಂಚು ಎತ್ತರವಾಗಿದ್ದೇನೆಂದು ಮಾತ್ರ ಅನ್ನಿಸತೊಡಗಿದೆ' ಎಂದು ಜಾಗಿರದಾರರು ಉತ್ತರವಿತ್ತರು.

ಈ ಮಾತಿನ ಮರ್ಮವು ತಿಳಿಯಿತೊ ಇಲ್ಲವೋ 'ಮುಂದೆ ಸಾಗಿರಿ' ಎಂದು ಆಶೀರ್ವಾದವನ್ನು ಕೊಟ್ಟು ಕಳಿಸಿದರು. ನಿಜ. ಅವರು ಹೇಳಿದುದು ಅಕ್ಷರಕ್ಕೂ ಸತ್ಯವಿದೆ.

ನಿಜವಾಗಿಯೂ ಆರು ಇಂಚು ಎತ್ತರವಾಗಿದ್ದೆನೆಂದು ಭಾವಿಸಿದ್ದರು ಜಾಗಿರದಾರರು. ಅದು ಆ ಸ್ವತಂತ್ರ ವಾತಾವರಣದ ದ್ಯೋತಕವು. ಇವರ ಮಾರ್ಮಿಕ ಮಾತು ಅವರಿಗೆ ತಿಳಿಯದೆ ಹೋದರೂ ಅವರ ಆಶೀರ್ವಚನವು ಮಾತ್ರ ಜಾಗಿರದಾರರ ಮನಸ್ಸಿನಲ್ಲಿ ಮೂಡಿತು. 'ಮುಂದೆಯೆ ಸಾಗುತ್ತೇನೆ' ಎಂಬ ನಿರ್ಧಾರವನ್ನು ಸೂಚಿಸುವಂತೆ ಇತ್ತು ಅವರ ನಡಿಗೆಯ ರೀತಿ.

ಗೆಳೆಯರ ಹಿತಸಾಧನೆಯು ಸ್ವದೇಶದ ಗಡಿಗೆ ತಡೆದು ನಿಲ್ಲಲಿಲ್ಲ. ಪರೋಪಕಾರವೆ ತಮ್ಮ ಪರಮಧ್ಯೇಯವೆಂದು ತಿಳಿದು ಇಂಗ್ಲಂಡದಲ್ಲಿಯ ಜಾಗಿರದಾರರ ಭಾರತೀಯ ಗೆಳೆಯರು ಭಾರತಕ್ಕೆ ಅವರ ತಂದೆಗೆ ಆಗಾಗ ಪತ್ರ ಬರೆಯುತ್ತಿದ್ದರೂ ಅವಕ್ಕೆ ಉತ್ತರಗಳು ಬಂದುವು ಆಯ ಸಿ. ಎಸ್‌ದ ಇತಿಶ್ರೀಯಾದ ಮೇಲೆಯೆ. ಗೆಳೆಯರ ಸೂಚನೆಗಳು ದೂರದಲ್ಲಿಯ ತಂದೆ-ಬಂಧು ಬಳಗದವರಲ್ಲಿ ಜಾಗಿರದಾರರ ಬಗೆಗೆ ಸಂಶಯವನ್ನುಂಟು ಮಾಡತೊಡಗಿದ್ದುವು. 'ಇಲ್ಲಿ ನಿಮ್ಮ ಹುಡುಗನು ಇಲ್ಲಿಯ ಹುಡಿಗೆಯರ ಬೆನ್ನು ಹತ್ತಿ

ಅಲೆದಾಡಿ, ಅಭ್ಯಾಸವಿಲ್ಲದೆ ಕಾಲಹರಣ ಮಾಡುತ್ತಲಿದ್ದಾನೆ.' ಎಂಬಾಶಯದ ಪತ್ರಗಳು ಭಾರತಕ್ಕೆ ಬಂದರೆ ಮನೆಯವರಿಗೆ ಏನು ಅನ್ನಿಸಬೇಕು? ಗೆಳೆತನದ ಮಾದರಿಯೊಂದನ್ನೂ ಕಾಣಿಸಬಹುದು. ಕರ್ನಾಟಕದ ತರುಣ ನೊಬ್ಬನು ೮–೧೦ ವರ್ಷಗಳಿಂದ ಅಲ್ಲಿಯೆ ಇದ್ದಾನೆ; ನಿರುದ್ಯೋಗ; ಯಾವ ಪರೀಕ್ಷೆಯೂ ಆಗಿಲ್ಲ; ತಾನು ಕನ್ನಡ ಎಂಬ ಭಾವನೆಯಿಂದ ಇವರಲ್ಲಿ ಸಹಾನು ಭೂತಿ ಹುಟ್ಟಿಸಿಕೊಂಡು ೨–೩ ಸಲ ಹಣವನ್ನು ಸೆಳೆದುಕೊಂಡ; ಹೆಚ್ಚಾಗಿ ವ್ಯಸನದಲ್ಲಿ ಇವರನ್ನು ತೊಡಗಬಯಸಿದ. ಇವರ ಗೆಳೆಯರು 'ನೀವೇಕೆ ಇಂತಹನ ಜೊತೆಯಲ್ಲಿ?' ಎಂದು ಕೇಳಿದಾಗ 'ಪಾಪ! ಅವನಿಗೆ ಅದರಿಂದ ಸಮಾಧಾನವಿದೆ. ಸಾಕು!' ಎಂದರು. 'ಆದರೆ ನೀವೂ ವ್ಯಸನದಲ್ಲಿ ಸಿಕ್ಕೀರಿ' ಎಂದಾಗ—'ಬೇಕಾದ ವ್ಯಸನದ ಸವಿಯನ್ನು ಕಂಡು ಕೊನೆಗೆ ಅದಕ್ಕೆ ಸೋಲ ಲಾರದಂತಹ ಚಾರಿತ್ರ್ಯಶಕ್ತಿ ನನ್ನಲ್ಲಿದೆ' ಎಂದು ಹೇಳಿದರು. ಮನೆಯವ ರಾದರೂ ಮೊದಲಿನ ಎರಡು ಸಲದ ಪರೀಕ್ಷೆಯ ವರೆಗೆ ಕಾಯಿದು, ಮೂರನೆಯ ಸಲವೂ ಮೂರಾಬಟ್ಟೆಯಾದ ಮೇಲೆ ಬಿರುನುಡಿಯ ಬಾಣಗಳನ್ನು ಆರು ಸಾವಿರಮೈಲಿನಾಚೆಗೆ ಎಸೆಯತೊಡಗಿದರು. ಇದರಿಂದ ಇಂಗ್ಲಂಡದಲ್ಲಿಯ ಕೊನೆಯ ದಿನಗಳು ಅಸಹ್ಯವಾದುವು. ಹಣವು ತೀರುವ ಸಂಭವವು ತೋರ ತೊಡಗಿತು. ಹೆಚ್ಚಿನ ಹಣವು ಬರುವ ಆಸೆ ದೂರದಲ್ಲುಳಿಯಿತು. ಹೀಗಾಗಿ, ದುಡ್ಡು ಕೊಡಬೇಕಾಗುವುದಲ್ಲ, ಎಂದು ಕದ್ದು ಸ್ನಾನಮಾಡುವ ಪ್ರಸಂಗಗಳೂ ಬರತೊಡಗಿದುವು. 'ಅಯ್ಯೊ ನನ್ನ ಗೆಳೆಯರಿಂದ ನನ್ನನ್ನು ಪಾರು ಮಾಡಿರಿ' ಎಂಬುವಂತೆ ಆಯಿತು.

ಒಳ್ಳೇದು! ಗೆಳೆಯರ ಮಾತು ಸರಿಯೆಂದು ನಂಬೋಣ. ಹುಡುಗ, ಹುಡಿಗೆಯರ ಬೆನ್ನು ಹತ್ತುವುದರಲ್ಲಿ ಅಸ್ವಾಭಾವಿಕವೇನು? ಕಾಮವು ಮಾನವ ಸಹಜವಿದೆ. ಉಳಿದ ವ್ಯವಹಾರವನ್ನು ಬಿಟ್ಟು ಅವರ ಕಾಮಜೀವನದ ಬಗ್ಗೆಯೆ ಭಾರತಕ್ಕೆ ಬರೆದು ತಿಳಿಸುವುದರಲ್ಲಿ ಗೆಳೆಯರ ವಿಕೃತಕಾಮುಲಾಲಸೆಯು ಹೊರ ಬೀಳುವ ಸಂಭವವಿದೆ.

ಇಂಗ್ಲಂಡದಲ್ಲಿಯ ಕೊನೆಯ ದಿನಗಳು ಅಸಹ್ಯವಾದುವು. ಅಲ್ಲಿಯ ದಿನಗಳು ಕೊನೆಗೆ ಬಂದುವು. ಆದರೆ ಅದು ಮುಂಬರುವ ಜೀವನದ ಭಯಾನಕ ಚಿತ್ರಗಳ ಪೀಠಿಕೆಯು, ಎಂಬ ಹೆದರಿಕೆಯನ್ನು ಉಂಟು ಮಾಡುತ್ತಿದ್ದವು.

ಭಯಾನಕವಿರಲಿ, ಭವ್ಯವಿರಲಿ, ಎದೆಗೊಡಲೇಬೇಕೆಂದು ಎದೆಗಾರನಂತೆ ಭಾರತಾಭಿಮುಖವಾಗಿ ಹೊರಟರು. ಮೊದಲಿನ ಯಾವ ಚಿನ್ಹಗಳೂ ಈಗ ಇಲ್ಲ. ಮುಂಬಯಿಯು ಮೊದಲಿನ ಬಂದರವಾಗಿತ್ತು; ಮೊದಲು ಸಿರಿವಂತಿಕೆಯ ಸೋಗು ಇತ್ತು. ಆಯ್. ಸಿ. ಎಸ್‌ದ ಆಸೆಯಿತ್ತು. ಬ್ಯಾರಿಸ್ಟರಿಯ ಬದಿಯಿಂಬು ಇತ್ತು. ಇಂದು ಏನೂ ಇಲ್ಲದೆ ತನ್ನದೆ ಆದ ತಲೆ; ಬೆಳೆದ ಬುದ್ಧಿ; ಹೆಚ್ಚಿನ ಹೊಣೆಗಾರಿಕೆ; ಸಾಲದ ಭಾರ.

ವೆಚ್ಚ ಕಡಿಮೆಯೆಂದು ಕೋಲಂಬೋದ ಮಾರ್ಗವಾಗಿ ಸಾಗಿದರು ಭಾರತಕ್ಕೆ. ೧೯೨೮ರ ಡಿಸೆಂಬರ ೧೨ ತಾರೀಖಿಗೆ ಭಾರತದ ದಕ್ಷಿಣತುದಿಯ ಬಂದರವಾದ ಕೋಲಂಬೊ ಬಂದರಕ್ಕೆ ಬಂದು ತಲುಪಿದರು. ವಿಜಯಪುರವನ್ನು ಮುಟ್ಟಲು ಮುಂದೆ ಒಂದು ವಾರ ಬೇಕಾಯಿತು.



**ಅಯಿದನೆಯ ಸ್ಥಿತಿ**

# ನಿರುದ್ಯೋಗಿ

ಮೂರು ವರುಷ ಮನೆಮಾರು ಬಿಟ್ಟು ಪರದೇಶದಲ್ಲಿದ್ದು ಮರಳಿ ಮನೆಗೆ ಸಾಗಿದ್ದರು. ತಾಯಿನಾಡನ್ನು ಬಿಟ್ಟು ತೆರಳುವಾಗಿನ ದುಃಖವು ನೆನಪಾಯಿತು. ಮರಳಿ ಬಂದಾಗ ತಾಯಿನಾಡಿಗಾಗಿ ದುಃಖವಾಗತೊಡಗಿತು. ಮಮತೆಯ ಮಾತನಾಡುವ ತಾಯಿ ಮನೆಯಲ್ಲಿಲ್ಲ. ತಾಯಿನಾಡಿನಲ್ಲಿ ಜೀವಾಳವಿಲ್ಲ. ಪರದೇಶದ ಸ್ವತಂತ್ರ ವಾತಾವರಣದಲ್ಲಿ ತಲೆಯೆತ್ತಿ ಮೂಗು ಮೇಲಕ್ಕೆ ಮಾಡಿಕೊಂಡು ಮೆರೆದು ಬಂದವರಿಗೆ ಭಾರತದ ಪರಿಸ್ಥಿತಿಯು ಸಮಾಧಾನವನ್ನು ಎಲ್ಲಿಂದ ತರಬೇಕು ? ಇಂಗ್ಲಂಡದ ವಾತಾವರಣದಲ್ಲಿ ಆರು ಇಂಚು ಎತ್ತರ ಬೆಳೆದಿರಬೇಕೆಂದು ಅನಿಸಿತ್ತು. ಭಾರತದ ಭೂಮಿಯ ಮೇಲೆ ಕಾಲಿಟ್ಟ ಕೂಡಲೆ ನೆಲದಲ್ಲಿ ಕುಸಿದಂತೆ ಭಾಸವಾಗತೊಡಗಿತು. ಭಾರತವು— ಒಂದು ಕಾಲಕ್ಕೆ ಮೆರೆಯುತ್ತಿದ್ದ ಭಾರತವು ಇಂದು ನೆಲ ನೆಕ್ಕಲು ಕಾರಣಗಳೇನು ? ಭಾರತೀಯರಲ್ಲಿ ವಿದ್ಯೆಯಿಲ್ಲವೆ ? ಬುದ್ಧಿಯಿಲ್ಲವೆ ? ಸಂಪತ್ತು ಇಲ್ಲವೆ ? ಏನಿಲ್ಲ ! ಎಲ್ಲವೂ ಇದೆ. ಆದರೆ ಇದ್ದ ವಿದ್ಯೆ–ಬುದ್ಧಿ–ದುಡ್ಡುಗಳನ್ನು ಬಳಸಿಕೊಂಡು ನಮ್ಮ ನಾಡಿನ ಏಳ್ಗೆಗಾಗಿ ದುಡಿಯುವ ಸ್ವಾತಂತ್ರ್ಯವಿಲ್ಲ. ಅದೊಂದು ಇಲ್ಲದ ಮೂಲಕ ಎಲ್ಲವೂ ಇದ್ದೂ ಇಲ್ಲದಂತಾಗಿದೆ.

ಸ್ವಾತಂತ್ರ್ಯ ಕಳೆದುಕೊಂಡ ಗುರುತು ಮೊಗದ ಮೇಲೆ ಮೂಡಿದೆ. ಬಂದುದು ವಿಜಯಪುರಕ್ಕೆಯಾದರೂ ಅಲ್ಲಿ ಗೆಲವು ಇಲ್ಲ. ಮಗ ಬಂದನೆಂದು ಮನೆಯವರಿಗೆಲ್ಲ ಆನಂದ–ಉತ್ಸಾಹ. ಆದರೆ ಆಯ್. ಸಿ. ಎಸ್. ದ ಆಸೆ ಇಟ್ಟುಕೊಂಡು ಮಗನನ್ನು ಪರದೇಶಕ್ಕೆ ಕಳಿಸಿದ್ದರು. ಆಯ್. ಸಿ. ಎಸ್. ಆಗದೆ ಮರಳಿ ಬಂದುದಕ್ಕೆ ತುಂಬಿ ಬಾರದ ದುಃಖ ಮನೆಯವರಿಗೆ. ಸಮಾಜದಲ್ಲಿ ಮೇಲುಗೈ ಪಡೆಯಬೇಕೆಂದು ಕಷ್ಟಪಟ್ಟರೆ, ಆ ಕೈಗೆ ನಿರಾಸೆಯ ಜಳ ತಾಗಿತು; ಕೈ ಸುಟ್ಟಿತು. ಮನ ಬೇಯುತೊಡಗಿತು. ಬೆಂದ ಮನದಿಂದ ಸಿಡಿ ಮಾತುಗಳು ಬಂದುವು.

ಸಿಡಿದು ಬಂದ ಮಾತುಗಳನ್ನು ತಡೆದುಕೊಂಡರು ಜಾಗಿರದಾರರು. ತಡೆದುಕೊಳ್ಳುವುದು ಸ್ವಭಾವ. ಹೊರಗೆ ತೋರಗೊಡದಿರುವುದು ಅವರ ವೈಶಿಷ್ಟ್ಯ. ಹೊರಗೆ ಹೇಳಲು ಏನೂ ಇಲ್ಲದಿದ್ದರೂ ಒಳಗೆ ವಿಚಾರದ ರಭಸ ನಡೆದೆ ಇರುವುದು. ' ನಾನು ಆಯ್. ಸಿ. ಎಸ್ ಆಗದಿದ್ದುದಕ್ಕೆ ಮನೆಯವರಿಗೆ ವಿಷಾದವಾಗಿದೆ; ಸಹಜವಿದೆ. ಬಯಸಿದುದು ಸಿಕ್ಕದಿದ್ದರೆ ಯಾರಿಗೆ ತಾನೆ ವಿಷಾದವಾಗುವುದಿಲ್ಲ ! ಆದರೆ ತಪ್ಪು ಯಾರದು ? ನಾನೇನು ಪ್ರಯತ್ನ ಮಾಡಲಿಲ್ಲವೆ ? ಮಾಡಿದ್ದೇನೆ. ಆದರೆ ಅಲ್ಲಿಯ ವಾತಾವರಣವು ನನ್ನ ಮನಸ್ಸನ್ನು ಬದಲು ಮಾಡಿತು. ಇದು ನನ್ನ ತಪ್ಪೆ? ಇರಲಿ. ನನ್ನ ತಪ್ಪಲ್ಲವೆಂಬುದು ನನಗೆ ಗೊತ್ತಿದೆ. ಸಾಕು ! ಗೆಳೆಯರ ಪತ್ರಗಳ ಮೂಲಕ ಮನೆಯವರ ಮನವು ನನ್ನ ಬಗ್ಗೆ ತಿಳಿಯಾಗಿಲ್ಲ. ಅದು ತಿಳಿಯಾಗುವ ಸಂಭವವೂ ಇಲ್ಲ. ತಿಳಿಸಲು ಪ್ರಯತ್ನ ಮಾಡುವುದಕ್ಕಿಂತ ಬಿಡುವುದು ಲೇಸು' ಎಂದು ಏನೇನೊ ಮನದೆದುರು ಸುಳಿದು ಸುಳಿದು ಹೋಗುತ್ತಿದ್ದವು.

ಸಮಾಜದ ಜಳವು ಪ್ರತ್ಯಕ್ಷವಾಗಿ ತಾಗತೊಡಗಿತು. 'ಪರದೇಶಕ್ಕೆ ಹೋಗಿ ಬಂದವರು ಪ್ರಾಯಶ್ಚಿತ್ತ ತೆಗೆದುಕೊಳ್ಳಬೇಕು ' ಎಂಬಾಶಯದ ಮಾತುಗಳು ಕೇಳಬರತೊಡಗಿದುವು. ಮಗನ 'ತಪ್ಪಿ' ಗಾಗಿ ತಂದೆ ತೊಳಲಾಡುವ ಪ್ರಸಂಗ. ತಂದೆ ಮಗನನ್ನು ಬಿಟ್ಟು ಇರಬೇಕು. ಇಲ್ಲವೆ ಧರ್ಮಾಧಿಕಾರಿಯ ಮಾತಿಗೆ ಮನ್ನಣೆಕೊಟ್ಟು 'ಬಹಿಷ್ಕಾರ'ದ ಬಲೆಯಿಂದ ದುಡ್ಡುಕೊಟ್ಟು ಪಾರಾಗಬೇಕು. ತಂದೆಯ ಮೇಲಿನ ಪ್ರಸಂಗ ತಪ್ಪಿಸಬೇಕೆಂದು ಜಾಗಿರದಾರರು ಮನೆಯನ್ನೆ ಬಿಟ್ಟರು. ವಿಜಯಪುರದಲ್ಲಿದ್ದು ಎಲ್ಲರಿಂದಲೂ ಬಟ್ಟು ಮಾಡಿ

ತೋರಿಸಿಕೊಳ್ಳುವುದಕಿಂತಲೂ ಊರು ಬಿಡುವುದು ಲೇಸೆಂದರು. ಕೆಲ ದಿನಗಳ ವರೆಗೆ ಅಲ್ಲಿ ವಾಸಿಸಿದ್ದರೂ ಮನೆಯಲ್ಲಿರದೆ ಸಮವಯಸ್ಕರಾದ ಇನ್ನೊಬ್ಬ ಆಪ್ತ ಜಾಗಿರದಾರರಲ್ಲಿರುತ್ತಿದ್ದರು.

ಸ್ವತಂತ್ರ ವಾತಾವರಣದಲ್ಲಿದ್ದು ಬಂದುದರಿಂದ ಈ ಕಟ್ಟುನಿಟ್ಟಿನ ಸಮಾಜದ ವಾತಾವರಣವು ತಡೆಯದಾಯಿತು. ಅಲ್ಲದೆ ಹಣಗಳಿಸಿ ಸ್ವತಂತ್ರ ವಾಗದಿದ್ದರೆ ಮುಂದೆ ಕೊನೆವರಿಗೂ ಪರತಂತ್ರದಲ್ಲಿಯೆ ತೊಳಲಾಡಬೇಕಾ ದೀತು. ಸಾಲದ ಹೊರೆಯನ್ನು ಕಡಿಮೆ ಮಾಡಲು ದುಡಿಯಲೇಬೇಕಲ್ಲವೆ? ಎಂದು ವಿಚಾರಿಸಿ, ವಿಜಯಪುರವನ್ನು ಬಿಟ್ಟು, ತಮ್ಮ ದತ್ತಕ ಸ್ಥಾನವಾದ ಡೆಕ್ಕನ್ ಕಾಲೇಜಕ್ಕೆ ಹೋದರು. ಅಲ್ಲಿ, ಶ್ರೀ ನಾಯಕ ವೆಂಕಟರಾಯರು ಓದುತ್ತಿದ್ದರು. ಆಗ ಕಾಲೇಜದ ದಕ್ಷಿಣಾಫೆಲೊ ಆಗಿದ್ದರು. ಅವರೊಂದಿಗೆ ಇರಲು ತೊಡಗಿದರು.

ಈ ಮನದ ಬೇನೆಯಿಂದ ಬೇಗುದಿಗೊಳ್ಳುತ್ತಿದ್ದಾಗ ತಲೆ ಕಾಯು ವುದು. ಮೈ ಕಾಯುವುದು. ಒಂದು ದಿನ ಜ್ವರವೆ ಬಂತು. ಹಟದ ಸ್ವಭಾ ವದ ಮೂಲಕ ಔಷಧಿಯನ್ನು ತೆಗೆದುಕೊಳ್ಳಲೆ ಇಲ್ಲ. ಮರುದಿನವೂ ಜ್ವರವು ಕಡಮೆಯಾಗಲಿಲ್ಲ. ಮೂರನೆಯದಿನ ಡಾಕ್ಟರರು ಬಂದು ನೋಡಿದರು; ವಿಷಮಜ್ವರವೆಂದು ನಿದಾನಿಸಿದರು. ಕಾಲೇಜಿಗೆ ಬೇಸಿಗೆಯ ರಜೆ ಮತ್ತು ಪರೀಕ್ಷೆಗಳ ಕಾಲ ಸಮೀಪಿಸಿದ್ದರಿಂದ ಇವರ ಆರೈಕೆಗೆ ಸಾಕಷ್ಟು ಅನುವು ದೊರೆಯಲಿಕ್ಕಿಲ್ಲವೆಂಬ ಹೆದರಿಕೆಯಿಂದಲೂ, ಡಾಕ್ಟರರ ಮಾತಿನ ಮೂಲಕವೂ ಜಾಗಿರದಾರರನ್ನು 'ಸಸೂನ ಆಸ್ಪತ್ರಿ'ಗೆ ಕರೆದೊಯ್ಯಲಾಯಿತು. ಎಂಟು–ಹತ್ತು ದಿನವಾದರೂ ಜ್ವರವು ಸರಿಯಲಿಲ್ಲ. ಹೆಚ್ಚಿನ ಆರೈಕೆ ಅವಶ್ಯವೆಂದೂ ಶಾಂತ ವಾತಾವರಣವು ಅಗತ್ಯವೆಂದೂ ಬೇರೆ ಕೋಣೆಗೆ ಜಾಗಿರದಾರರ ಹಾಸುಗೆಯನ್ನು ಸಾಗಿಸಿದರು. ಆ ಸಮಯಕ್ಕೆ ವಾಸೂ ಮಾಸ್ತರರೂ ಬಂದಿದ್ದರು ವಿಜಯಪುರದಿಂದ. ಅವರು ಅತಿಶಯವಾದ ದುಡ್ಡಿನ ತೊಂದರೆ ಯಲ್ಲಿದ್ದರು. ಆ ಮೂಲಕ ಕೋಣೆಯ ಬದಲಾವಣೆಯು ಅವರ ಮನ ಸ್ಸಿಗೆ ಬರಲಿಲ್ಲ. 'ಮತ್ತೆ ಹೆಚ್ಚು ದುಡ್ಡು ಹಾಳು; ಈಗಾಗಲೆ ಎಲ್ಲ ತೊಳೆದು ಹೋಗಿದೆ' ಎಂಬ ವಿಚಾರ ತಟ್ಟನೆ ಅವರನ್ನು ಕೆರಳಿಸಿತು. ಉದ್ದೇಶ ಪೂರ್ವಕ ಮಾತಾಡಿದರೆಂದು ಯಾರೂ ಅನ್ನುವಂತಿಲ್ಲ. ದುಡ್ಡಿನ ತೊಡಕಿ

ನಲ್ಲಿದ್ದ ಮನವು ಏನನ್ನೋ ಅನ್ನುವುದು. ಆದರೆ ಆ ಮಾತಿನ ಪರಿಣಾಮ ಅನ್ನಿಸಿಕೊಂಡವರ ಮೇಲೆ ವಿಲಕ್ಷಣವಾಗಿಯಾಗುವುದು. ಸಾಯಂಕಾಲದ ಒಳಗೆಯೆ ಮತ್ತೆ ಜಾಗಿರದಾರರ ಹಾಸುಗೆಯು ಸಾಮಾನ್ಯರಿಗಾಗಿಯಿದ್ದ ಕೋಣೆಗೆ ಬಂತು.

'ತನ್ನ ಬೇನೆಯ ಸ್ಥಿತಿಯಲ್ಲಿ ತನ್ನ ತಂದೆ ಹೀಗೆ ಮಾತನಾಡಿದರಲ್ಲ' ಎಂದು ಕಳವಳವಾಗತೊಡಗಿತು. ವಿಚಾರ ಹೆಚ್ಚಾದಂತೆ ಬೇನೆಯ ಸ್ಥಿತಿಯು ಚಿಂತಾಜನಕವಾಗತೊಡಗಿತು. ಎರಡು ಮೂರು ದಿನವಂತೂ ಎಚ್ಚರವೆ ಇದ್ದಿಲ್ಲ.

ಇಪ್ಪತ್ತೊಂದನೆಯ ದಿನ ಜ್ವರವು ಸರಿಯತೊಡಗಿತು. ಅಶಕ್ತತೆಯ ಮೂಲಕ ಆಗಾಗ ಮಬ್ಬು. ಆ ಮಬ್ಬಿನಲ್ಲಿ ತಮ್ಮ ಮುಂದಿನ ಜೀವನದ ವಿಚಾರಗಳನ್ನು—ಚಿತ್ರಗಳನ್ನು ಕಾಣತೊಡಗಿದರು. ಮುಂದೇನು? 'ಮನೆಯವರಿಗೆ ಮುಳುವಾಗಿ, ಹೆರವರಿಗೆ ಹೊರೆಯಾಗಿ, ಬಾಳು ಬೀಳಾಗಿ ಬದುಕುವುದರಲ್ಲಿ ಏನು ಪುರುಷಾರ್ಥ!' ಎಂದು ಒಮ್ಮೆ ವಿಚಾರ ಬಂದು ಸುಸುಳಿ ಹೋಗುವುದು. 'ನಾನು ಬದುಕುವುದು ನನಗಾಗಿಯೊ ಹೆರವರಿಗಾಗಿಯೊ? ಸಮಾಜದ ಈ ಸ್ಥಿತಿಯನ್ನು ಅರಿತು ಅದರ ಶುದ್ಧೀಕರಣಕ್ಕಾಗಿ ನಾನು ಹೆಣಗದಿದ್ದರೆ, ಬೇರೆ ಯಾರು ಸಮರ್ಥರು? ಆದರೆ ನನ್ನ ಮುಂದಿನ ಜೀವಿತವು ಹೇಗೆ ಸಾಗಬೇಕು?' ಎಂದೂ ಆಗಾಗ್ಗೆ ವಿಚಾರವು ಹಾಯಿದು ಹೋಗುವುದು. ಆಗ 'ಕನಸಿನಲ್ಲಿ ಕರ್ನಾಟಕ'ದ ಚಿತ್ರವು ಬರತೊಡಗಿತು. ಕರ್ನಾಟಕದಲ್ಲಿ ಕಲಿತವರ ಸ್ಥಿತಿಯೇನಾಗಿದೆ? ಕಲಿಯದಿದ್ದರೆ ಸಮಾಜಕ್ಕೆ ಗತಿಯಿಲ್ಲ; ಕಲಿತವರು ಸಮಾಜಕ್ಕೆ ಬೇಕಿಲ್ಲ. ಕಲಿಯುವುದು ಧರ್ಮ; ಕಲಿತವರು ಧರ್ಮಕ್ಕೆ ಬೇಡ. ಪರದೇಶ ಕಂಡು ಬಂದವರನ್ನು ಪಿಡುಗಿನಂತೆ ದೂರ ಇಡುವರು ಧರ್ಮಾಧಿಕಾರಿಗಳು. ಅಂತಃಕರುಣವುಳ್ಳವರಿಗೆ ಸಂಕಟ ಪ್ರಸಂಗ. ಧರ್ಮಾಧಿಕಾರಿಯ ಮಾತಿಗೆ ಮನ್ನಣೆಕೊಟ್ಟು ಮನೆಯ ಮಕ್ಕಳನ್ನು ಹೊರದೂಡಬೇಕೊ ಅಂತಃಕರಣವನ್ನು ಆಳಗೊಟ್ಟು 'ಬಹಿಷ್ಕಾರ'ಕ್ಕೆ ಪಾತ್ರರಾಗಬೇಕೊ? ಸಮಾಜವು ಕೇವಲ ಬಯಲು ಆಡಂಬರದ ಪೊಳ್ಳು ಹಂದರದ ಮೇಲೆ ನಿಂತಿದೆ. ಕುಸಿದು ಬೀಳುವ ಕಾಲ ಬಂದಿದೆ' ಈ ವಿಚಾರಗಳು ಬಲವಾದ ಮುದ್ರೆಯನ್ನೊತ್ತಿದುವು ಜಾಗಿರದಾರರ ಮನಸ್ಸಿನ ಮೇಲೆ.

ಬೇನೆಯ ಬಳಲಿಕೆಯು ಕಡಮೆಯಾಗಿದ್ದರೂ ಸ್ವಲ್ಪ ಆಯಾಸ ವಾಗಿದ್ದರೆ ಮರಕಳಿಸಿ ಬರುವ ಸ್ಥಿತಿಯಿತ್ತು. ಹಟವು ಯಾರ ಮನೆಯದು! ತನ್ನ ಪ್ರಭಾವವನ್ನು ಬೀರಿತು. 'ಹಡೆದ ತಂದೆಯು ಈ ಬಗೆಯ ಮಾತನಾಡಿದ ಮೇಲೆ ಬದುಕಿ ಮಾಡುವುದೇನು? ಸಮಾಜಕ್ಕೆ ನನ್ನ ಇರುವಿಕೆಯ ಅಗತ್ಯವಿದ್ದರೆ ಏನಾದರೂ ಅದು ಬದುಕಿಸುವುದು' ಎಂದು ವಿಜಯಪುರಕ್ಕೆ ಹೊರಟರು. ಅವರ ತಂದೆ, ಗೆಳೆಯ ನಾಯಕರು, ಜೊತೆಗೆ ಇದ್ದರು. ಗಾಡಿಯಲ್ಲಿ ಜಾಗಿರದಾರರು ಮಾತ್ರ ಮಬ್ಬಿನಲ್ಲಿ–ನಿದ್ದೆಯಲ್ಲಿಯೆ ಇದ್ದರು. ವಾಸೂ ಮಾಸ್ತರರಿಗೆ ಮನದಲ್ಲಿ ಕಟಿಯುತ್ತಿದ್ದಿತು. ಮತ್ತೆ ಮಗನು ವಿಜಯಪುರಕ್ಕೆ ಬರುವನಲ್ಲ, ಎಂದು; ಮಠದ ಸ್ವಾಮಿಗಳ ಹೆದರಿಕೆ ಒಂದು ಕಡೆ; ಮನೆಯಲ್ಲಿಯ ಸಾಂಪ್ರದಾಯಿಕ ಪ್ರಸಂಗಗಳೊಂದು ಕಡೆ; ಮಗನ ಆಯ್. ಸಿ. ಎಸ್. ಪರೀಕ್ಷೆಯಾಗದುದಕ್ಕೆ ಸಮಾಜದಲ್ಲಿ ಅವಮಾನ; ಈ ಸಮಾಜದ ಭೀತಿ ಬೇರೊಂದೆಡೆ. ಉದ್ಯೋಗವಿಲ್ಲದ ಮಗನು ಎದುರಿಗೆ; ಸಾಲದ ಹೊರೆಯೆ ಹೊರಲಾರದಷ್ಟು; ಅದನ್ನು ಸರಿಸುವ ಚಿಂತೆ. ಈ ಎಲ್ಲ ವಿಚಾರಗಳ ಬಲೆಗೆ ಸಿಕ್ಕು ಒಮ್ಮೊಮ್ಮೆ ಮೇರೆವರೆದು ಬರುತ್ತಿದ್ದುವು ಮಾತುಗಳು.

ಗಾಡಿಯಲ್ಲಿಯೊಂದು ಸಂಗತಿಯು: ಮಾಸ್ತರರು ಬೇಸರದ ದನಿಯಲ್ಲಿ ನುಡಿಯುತ್ತಿದ್ದರು 'ಇಷ್ಟೆಲ್ಲ ದುಡ್ಡು ಹಾಳಾಯಿತು. ಏನೂ ಉಪಯೋಗ ವಾಗಲಿಲ್ಲ. ನನ್ನ ಎಲ್ಲ ಬಯಕೆಗಳು ಬಯಲಾದುವು. ಎಲ್ಲಾ ಹಾಳುಮಾಡಿ ಬಿಟ್ಟ' ಎಂದು ತಮ್ಮ ಮನದ ಉಮ್ಮಳವನ್ನು ಹೊರಗೆ ಹಾಕುತ್ತಿದ್ದರು. ಬದಿಯಲ್ಲಿ ಒಬ್ಬ ಮಾರವಾಡಿ. ದುಡ್ಡು ಎಂದ ಕೂಡಲೆ ಅವನ ಕಿವಿಗಳು ನಿಮಿರಿ ನಿಂತುವು. ದುಡ್ಡು ಹೋಗುವುದು ಬರುವುದು ಅವರಿಗೆ ಲೆಕ್ಕವಿಲ್ಲ. ಆದರಿಂದ ಸಾಹಸಮಾಡುವುದೇ ತಮ್ಮ ಧರ್ಮ ಎನ್ನುವರವರು. 'ಎಷ್ಟು ದುಡ್ಡು ಹಾಳಾಯಿತು? ಎಲ್ಲಿ ಹೋಯಿತು?' ಎಂದು ಕೇಳಿದ ಮಾರವಾಡಿ. 'ಹನ್ನೆರಡುಸಾವಿರ ರೂಪಾಯಿಗಳು ಕೈಬಿಟ್ಟವು. ಕಲಿಯಲಿಕ್ಕೆ ಇಂಗ್ಲಂಡಕ್ಕೆ ಹೋಗಿದ್ದ. ಪರೀಕ್ಷೆಯಾಗಿದೆ ಮರಳಿಬಂದ' ಎಂದರು ಮಾಸ್ತರರು. 'ಇಷ್ಟೇನೆ! ನಾವು ವ್ಯಾಪಾರದಲ್ಲಿ ಲಕ್ಷಾಂತರ ರೂಪಾಯಿ ಹಾಳುಮಾಡುತ್ತೇವೆ. ಅವರಿನ್ನೂ ಕಲಿತು ಬಂದಿದ್ದಾರೆ; ಇಂದಿಲ್ಲ, ನಾಳೆ ಗಳಿಸಬಹುದು' ಎಂದ ಮಾರವಾಡಿ. ಸೋಲ್ಲಾಪುರವು ಬಂದುದರಿಂದ ಅವನು ಇಳಿದುಹೋದ.

‘ದುಡ್ಡಿದ್ದವರಿಗೇನು ? ಒಂದು ಲಕ್ಷರೂಪಾಯಿ ಹೋದರೂ ಅಲಕ್ಷ್ಯವೆ. ದುಡ್ಡಿನ ಮೇಲೆಯೆ ಲಕ್ಷ್ಯವಿಟ್ಟ ನಮ್ಮಂತಹರ ಮಾತು ಬೇರೆ; ನೂರು ಕೂಡ ಮೇರೆ ಮೀರುವುದು. ಆದರೆ ಹನ್ನೆರಡುಸಾವಿರ ರೂಪಾಯಿ ! ’ ಎಂದರು ವಾಸೂಮಾಸ್ತರರು.

ಹುಟಗಿಯಲ್ಲಿ ಬದಲು ಮಾಡಿದರು. ವಿಜಯಪುರದ ಕಡೆಗೆ ಗಾಡಿ ಸಾಗಿತು. ವಾಸೂಮಾಸ್ತರರಿಗೆ ಕಳವಳ: ಅಶಕ್ತ ಮಗನನ್ನು ಎಲ್ಲಿಗೆ ಕಳುಹುವುದು, ಎಂದೊಮ್ಮೆ; ಮತ್ತೊಮ್ಮೆ, ರಂಗ ವಿಜಯಪುರಕ್ಕೆ ಇಳಿಯುವನೊ ! ಎಂದು. ಬೆಳಗಿನ ಎರಡೂವರೆ ಗಂಟೆಗೆ ವಿಜಯಪುರವು ಬಂತು. ನಾಯಕರಿಂದ ಕೇಳಿಸಿದರು ವಾಸೂಮಾಸ್ತರರು. ಅವರ ಮಾತಿನ ರೀತಿಯಲ್ಲಿ ಏನೂ ಗೆಲವು ಕಾಣಲಿಲ್ಲ. ಜಾಗಿರದಾರರು ಕದಲದೆ ನಾಯಕರ ಕಡೆಯಿಂದ ಬಾಗಿಲು ಕೋಟೆಯ ಟಿಕೀಟು ತರಿಸಿಕೊಂಡರು. ಗಾಡಿ ಮುಂದೆ ಸಾಗಿತು. ವಿಜಯ ಪುರವು ಹಿಂದೆ ಉಳಿಯಿತು. ‘ಈ ಜಗತ್ತಿನಲ್ಲಿ ತಾನು ತಾನೆ’ ಎನ್ನಿಸಿತು ಜಾಗಿರದಾರರಿಗೆ ಮತ್ತೊಮ್ಮೆ. ಮುಂದಿನ ಜೀವನವು ಉತ್ತೇಜನವಿಲ್ಲದುದು ಎಂದು ತಮ್ಮ ಅಸಾಹಾಯ್ಯತೆಯ ಬಗ್ಗೆ ರೊಚ್ಚು. ಬೇಡಾದ ಜೀವನವನ್ನು ಬಲಿಸಿ ಪ್ರಯೋಜನವೇನು ? ಬದುಕಿದ್ದರೆ ಸಮಾಜ-ಸುಧಾರಣೆ ! ಬದುಕುವುದೇ ಕಷ್ಟವಾದಾಗ ಎಲ್ಲಿಯ ಸಮಾಜ ! ಎಲ್ಲಿಯ ಸುಧಾರಣೆ !

ಬಾಗಿಲುಕೋಟೆ ಬಂತು. ಅದರ ಜೊತೆಗೆ ಇನ್ನೊಂದು ವಿಚಾರವೂ ಬಂದಿತು. ಎಲ್ಲರಿಗೂ—ವಿಶೇಷವಾಗಿ ತನ್ನವರೆಂದುಕೊಳ್ಳುವವರಿಗೆ—ಬೇಡವಾದಾಗ ಬದುಕಿ ಮಾಡುವುದೇನು ? ಬದುಕುವುದು ಅವಶ್ಯವಿಲ್ಲದಾಗ ಸಾಯುವುದೆ ಕರ್ತವ್ಯ; ಗಾಡಿಯಿಂದಿಳಿವಾಗ ಆತ್ಮಹತ್ಯೆಯ ವಿಚಾರ ಬರತೊಡಗಿತು. ಅದೇ ಉದ್ದೇಶದಿಂದಲೆ ಡಾಕ್ಟರರ ಸಲಹೆಯ ವಿರುದ್ಧವಾಗಿ ಶ್ರಮವಾಗುವಂತೆ, ಅಪಥ್ಯವೆನಿಸುವಂತೆ ಕೂಡಲೇ ವರ್ತಿಸಬೇಕು, ಎಂದೂ ನಿರ್ಧಾರವಾಯಿತು. ತಮ್ಮ ಸಾಮಾನುಗಳನ್ನು ತಾವೇ ತೆಗೆದುಕೊಂಡು ಇಳಿದರು. ಕಾಲು ಇನ್ನೂ ನಡುಗುತ್ತಿದ್ದವು. ದೇಹವು ಕಾರ್ಯಮಾಡಲು ಒಲ್ಲೆನ್ನುತ್ತಿತ್ತು. ಆದರೆ ಮನಸ್ಸು ಮುಂದೂಡುತ್ತಿತ್ತು. ನಿಲ್ದಾಣದ ಹೊರಗೆ ಬಂದು, ಬಸ್ ಸ್ಟ್ಯಾಂಡದ ಸಮೀಪದ ಚಹಾದ ಅಂಗಡಿಗೆ ಸಾಗಿದರು. ಅಲ್ಲಿದ್ದುದು ಬಂದು ‘ಲಿಂಗಾಯತರ ಚಾದ ಅಂಗಡಿ ’. ನಾಡಬಾಂಧವನಲ್ಲಿಯೆ

ಹೊಕ್ಕರು. 'ತಿನ್ನಲು ಏನಿದೆ' ಎಂದು ಕೇಳಿದರು. 'ಪುರಿ ಆದಾವು' ಎಂದ. 'ಹುಂ! ಕೊಡು ಅವನ್ನೆ!' ಎಂದರು. ಎದುರು ತಂದಿಟ್ಟಾಗ ಅವು ಎಣ್ಣೆಯಲ್ಲಿ ಕರಿದುವೆಂದೂ ತಂಗಳವೆಂದೂ ತಿಳಿಯಿತು. ಜೀವವೆ ಬೇಸರವಾದವನಿಗೆ ಎಲ್ಲವೂ ಸವಿಯೆ; ಎಲ್ಲವೂ ಹಿತಕರವೆ. ವಿಷಮಜ್ವರದಿಂದ ಎದ್ದವನೆಂಬುದು ಇನ್ನಿಷ್ಟು ಪುಟಕೊಟ್ಟಿತು. ಆ ತಂಗಳ ಪುರಿಯನ್ನು ತಿಂದು ಹತ್ತಿಕಟ್ಟಿಗೆಯ ಒಲೆಯ ಮೇಲೆ ಮಾಡಿದ ಚಹಾ ಕುಡಿದು ದುಡ್ಡು ಕೊಟ್ಟು ಹೊರಟರು. ಕೈಯಲ್ಲಿಯ 'ಬ್ಯಾಗ್' ಹೊರಲು ಕೂಲಿಯೊಬ್ಬ ಬಂದ; 'ನಾನೂ ಕೂಲಿಯೆ' ಎಂದು ಅವನನ್ನು ಬೆದರಿಸಿದರು. ಕಾಲುಸವರುತ್ತ, ತೇಕುತ್ತ ಊರೊಳಗಿನ ಮೋಟರ ನಿಲ್ದಾಣಕ್ಕೆ ಬಂದರು. ಅಲ್ಲಿಂದ ಇಳಕಲ್ಲಿಗೆ ಹೊರಟರು.

ಇಳಕಲ್ಲು ಬಾಗಿಲುಕೋಟೆಯಿಂದ ೩೦–೩೫ ಮೈಲು; ಅದು ಜಾಗಿರದಾರರ ಚಿಗವ್ವನ ಊರು. ತಾಯಿ ತೀರಿದ ಮೇಲೆ, ತಂದೆಯಮನೆಗಿಂತಲೂ ತಾಯಿಯ ತವರು ಸುಖದಾಯಕವೆಂದು ತಿಳಿವಳಿಕೆಯಿದೆ. ಒಮ್ಮೊಮ್ಮೆ ನಿಜವೂ ಅಹುದು. ಸಾಯಂಕಾಲ ಸಮಯ, ಇಳಕಲ್ಲಿಗೆ ಮುಟ್ಟಿದರು. ಮನಸ್ಸಿನಲ್ಲಿ ಏನೊ ವಿಚಿತ್ರ ನಿರ್ಧಾರ. ಸಂಜೆಯ ಊಟವಾಯಿತು. ಊಟವನ್ನು ಹೆಚ್ಚಾಗಿಯೆ ಮಾಡಿದರು. ಅದೆ ಕೊನೆಯ ಊಟವೆಂದು! ಗಾಡಿಯ ಆಯಾಸದ ಮೂಲಕ ಮನೆಯವರ ಸಂಗಡ ಹೆಚ್ಚು ಮಾತನಾಡಲಿಲ್ಲ. ಯಾರಸಂಗಡ ಮಾತನಾಡಿ ಉಪಯೋಗವೇನು, ಎಂದು! ರಾತ್ರಿ ಹತ್ತು ಗಂಟೆಗೆ ನಿರ್ಧಾರವಾಗಿತ್ತು–ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು. ಮನೆಯವರು ಬೇಡೆಂದರೂ ಮಂಜುಬೀಳುವುದೆಂದರೂ ಕೇಳದೆ ಮಾಳಿಗೆಯ ಮೇಲೆ ಹಾಸುಗೆ ಹಾಸಿಕೊಂಡರು. ಹಾಸುಗೆಯ ಮೇಲೆ, ನಕ್ಷತ್ರಗಳ ಆಕಾಶದ ಬುಡದಲ್ಲಿ ಕುಳಿತು, ಸುತ್ತಲಿನ ಪ್ರದೇಶವನ್ನು ಸಿಂಹಾವಲೋಕನ ಮಾಡಿ ಕೊನೆಯ ನೋಟವೆಂದು ಎಣಿಸಿ ಒರಗಿದರು. ನಕ್ಷತ್ರಗಳ ಕಡೆಗೆ ನೋಡುತ್ತ ಎಣಿಕೆ ಹಾಕತೊಡಗಿದರು: 'ವಿಷಮಜ್ವರದಿಂದ ಎದ್ದು ಎಂಟು ದಿನವಾಗಿಲ್ಲ. ಬೆಳಿಗ್ಗೆ ಎಣ್ಣೆಯಲ್ಲಿ ಕರಿದ ತಂಗಳ ಪುರಿ ತಿಂದಿದ್ದೇನೆ. ೨ ಮೈಲು ನಡೆದಿದ್ದೇನೆ. ಬೇಕೆಂದೆ ರಾತ್ರಿ ಹೆಚ್ಚು ಹೆಚ್ಚಾಗಿ ಊಟ ಮಾಡಿದ್ದೇನೆ. ಮನೆಯವರು ಬೇಡೆಂದರೂ ನನಗೆ ಬೇಕಾಗಿ, ಮಾಳಿಗೆಯ ಮೇಲೆ ಮಲಗಲು ಬಂದಿದ್ದೇನೆ. ಈಗಲೆ ನಸುವೆ ಚಳಿ ಬರತೊಡಗಿದೆ.... ಬೆಳಗೇಳುವುದರೊಳಗೆ.... ಹೆಣವೆ....

ಆಗಬೇಕು .......ಎಂದು ವಿಚಾರಿಸುತ್ತ ಒರಗಿದರು. ದಾರಿಯ ದಣಿವು ಬೇನೆಯ ಅಶಕ್ತತೆ, ಊಟದ ಮಬ್ಬು, ನಿದ್ದೆತಂದುವು.

ಮರುದಿನ ಬೆಳಕು ಬಂತು. ಎಚ್ಚರ ಬಂತು. ನಿದ್ದೆಗಣ್ಣಿನಲ್ಲಿಯೆ ಎಚ್ಚರು. ತನ್ನ ಕಾಲು ಕೈಗಳು ಸರಿದಾಡುತ್ತಿವೆ. ಸತ್ತಿಲ್ಲ! ಸಾಯಲು ಪ್ರಯತ್ನಿಸಿದರೂ ಸಾವು ಬರದೆ ಹೋಯಿತಲ್ಲ! ಬಯಸಿದರೆ ಸಾವು ಬರುವುದಿಲ್ಲವೆ? ಬದುಕಿದುದಕ್ಕೆ ಅಚ್ಚರಿ. ಸಾವು ತಾನಾಗಿಯೆ ಬರುವುದು; ಬರಲಿ ತನ್ನ ವೇಳೆಗೆ. ಮಾನವನು ಬಂದುದು ಬದುಕಲಿಕ್ಕೆ; ಸಾಯಲಿಕ್ಕಲ್ಲ. ಬೇಡಿ ಬಯಸಿದ ಸಾವು ಬಾರದೆ ಹೋಯಿತು. ಹೋಗಲಿ. ಇನ್ನು ಬದುಕುವೆ. ಇಂದಿನ ಬೆಳಗು ಹೊಸ ಬೆಳಕನ್ನು ತಂದಿತು. ಸಾಯುವವರೆಗೂ ಸಾಗು! ಎಂದಿತು ಮನವು. ಉತ್ಸಾಹ. ಉಬ್ಬು. ಉತ್ಸಾಹದಲ್ಲಿಯೆ ಬಂದುವು, ಜೀವನದ ಧ್ಯೇಯದ ಮಾತುಗಳು:

ಸಾಯುವ ವರೆಗೂ ಸಾಗು!
ಸಾಗುವ ವರೆಗೂ ಬದುಕು!
ಸವಿಯಾಗಿಯೆ ನೀ ಬದುಕು,
ಬದುಕು! ಬದುಕೆಲ್ಲರ ಬಾ
ಳ್ವೆಯ ಸವಿಮಾಡು! ಬದುಕು!
ಸಾಯುವವರೆಗೂ ಸಾಗು!

ನೋವನು ತಡೆಯದ ಹೇಡಿ!
ಸಾವನು ಬಯಸುವೆಯಾ?
ನೋವಿಗೆ ಮಿಗಿಲೆ ಸಾವು?
ಸಾಯುವ ವರೆಗೂ ಸಾಗು!

ಬದುಕಿದರೆ ಬವಣೆಯಿದಿರು
ಸಾವು ಬರೆ ಸೊಗವಹುದು.
ಅದಕೆಂಬರೆ ಸಗ್ಗ? ಬವ
ಣೆಯಿಲ್ಲದ ತಾಣ ಸಗ್ಗ!

ಅಹುದು. ಬದುಕಿದರೆ ಬಾಳು
ಸವಿಯಲ್ಲವೆ? ಸವಿಯಾದ
ಬದುಕಿಗೂ ಸಗ್ಗ ಮೇಲೆ?
ಬದುಕಿಗೂ ಸಾವು ಮೇಲೆ?
ಸಾಯುವವರೆಗೂ ಸಾಗು!

ಬದುಕಿ ಬಾಳ್ವೆಯ ಮಾಡು!
ಬಾಳಿ ಬದುಕನು ನೋಡು!
ಆವುದಿದೆ ಬೇರೆ ಪಾಡು?
ಇದೆ ಇರಲಿ ನಿನ್ನ ಹಾಡು:
'ಸಾಯುವವರೆಗೂ ಸಾಗು!
ಸಾಗುವ ವರೆಗೂ ಬದುಕು!'

ಸಾಗು! ಸಾಗು! ನಡೆ, ಸಾಗು!
ಎಂಬುದೆ ರಂಗನ ಕೂಗು.

ಉಕ್ಕಿ ಬಂದಿತು ಉತ್ಸಾಹ; ಚಿಮ್ಮತೊಡಗಿತು ಹಟ—ಜೀವಿಸಬೇಕೆಂಬ ಹಟ. ಪ್ರಕೃತಿಯನ್ನು ಸರಿಪಡಿಸಿಕೊಳ್ಳಲು ಕೆಲಕಾಲ ಹಳ್ಳಿಯಲ್ಲಿ ಕಳೆದು ಸೋದರಮಾವನ ಕಡೆಯಿಂದ ಒಂದು ನೂರು ರೂಪಾಯಿಗಳನ್ನು ಪಡೆದು ಕೊಂಡು, ಗುರಿಯನ್ನು ಮುಂದಿಟ್ಟುಕೊಂಡು, ತನ್ನ ದೈವವನ್ನು ತೆರೆಯ ಬೇಕೆಂದು ಮುಂಬೈಗೆ ಬಂದರು. ಮುಂಬೈಯು ಮುಂದಿನ ಜೀವನದ ತಳಹದಿಯಾಯಿತು.

ನವಕರಿಗಾಗಿ ಅಲೆಯುವುದು ಪ್ರಾರಂಭವಾಯಿತು. ಎಲ್ಲಿಯಾದರೂ ತಂಗಬೇಕು ಎಂದು ಎಲ್ಲಕಡೆಗೂ ನವಕರಿಗಾಗಿ ಅರ್ಜಿ ಹಾಕುವುದಾಯಿತು. ಮುಧೋಳ ಸಂಸ್ಥಾನದಲ್ಲಿ ಸ್ಥಳವೊಂದು ತೆರವಾಗಿದುದರಿಂದ ಅಲ್ಲಿ ಮೊದಲ ನೆಯ ಅರ್ಜಿ. ಎಲ್ಲಿಯಾದರೂ ಶಿಕ್ಷಣಖಾತೆಯಲ್ಲಿ ಕೆಲಸ ಮಾಡಬೇಕೆಂದು ವಿಶ್ವವಿದ್ಯಾಲಯಗಳಿಗೆ ಅರ್ಜಿಗಳು ಹೋಗತೊಡಗಿದುವು. 'ಅನ್ನಮಲಾಯಿ' ವಿಶ್ವವಿದ್ಯಾಲಯಕ್ಕೊಂದು ಅರ್ಜಿಹಾಕಿದರು. ಪದವಿಗಳು ಘನವಾಗಿದ್ದರೂ

ಬೇಡಿದ ಕೂಡಲೆ ನವಕರಿಯು ಸಿಗುವುದು ಹೇಗೆ? ಹಾಕಿದ ಅರ್ಜಿಗಳಿಗೆ ಉತ್ತರ ಬರುವು ವರೆಗೆ ಕೂಡ ತಡೆಯುವದಾಗಲೊಲ್ಲದು. ಮನೆಯವರ ಮಾತನ್ನು ತಪ್ಪಿಸಿಕೊಂಡು ಸ್ವತಂತ್ರನಾಗಿ ನಿಂತು ಸಾಲದ ಹೊರೆಯನ್ನು ತಪ್ಪಿಸಿಕೊಳ್ಳಬೇಕೆಂಬುದೆ ಆಗಿನ ಮನದುರಿ. ಕಂಡವರು ಸಹಾನುಭೂತಿ ತೋರಿಸಿ ಆಶ್ವಾಸನ ಕೊಡುವವರೆ. ಬರಿಯೆ ಮಾತಿನ ಆಶ್ವಾಸನದಿಂದ ಏನು ಉಪಯೋಗ? ಮುಧೋಳದ ವಿಷಯವು ಮುಂದೆ ಬರಲಿಲ್ಲ. ಚಿದಂಬರಂ ವಿಶ್ವ ವಿದ್ಯಾಲಯದಿಂದಲೂ ಏನೂ ಉತ್ತರವಿಲ್ಲ. ಅಷ್ಟರಲ್ಲಿ ಆಕ್ಸಫರ್ಡ ವಿದ್ಯಾಲಯದ ಅಚ್ಚುಕೂಟದಲ್ಲಿ ಸ್ಥಳವೊಂದು ಇದೆಯೆಂದು ತಿಳಿದುಬಂತು. ಅದಕ್ಕಾಗಿ ಅಲ್ಲಿಗೆ ಹೋಗಿ ಅಲ್ಲಿಯ ಹಿರಿ ಸಂಚಾಲಕರನ್ನು ಕಾಣ ಬೇಕೆಂದರೆ ಅವರು ಕಲಕತ್ತೆಗೆ ಹೋಗಿರುವರೆಂದು ಮರಿ ಸಂಚಾಲಕರು ಹೇಳಿ ದರು. ಮತ್ತೆ ನವಕರಿಗಾಗಿ ಕಾಯಬೇಕಾಯಿತು. ತಲೆಯೂ ಕಾಯತೊಡ ಗಿತು. ಆದರೆ ತಲೆಯನ್ನೆ ಕಾಯುವುದು ಕಠಿಣವಾಗಿತ್ತು.

ಬನಾರಸಕ್ಕೆ ಹೋಗಿ ಬರಬೇಕೆಂದು ಒಮ್ಮೆಲೆ ಅನ್ನಿಸತೊಡಗಿತು. ಅಲ್ಲಿಯ ಮುಖ್ಯಾಧ್ಯಾಪಕ ಶ್ರೀ. ಆನಂದಶಂಕರ ಧ್ರುವ ಅವರನ್ನು ಕಂಡು ಬರಬೇಕೆಂದು ೧೯೨೫ರ ಜುಲೈ ಮೊದಲವಾರದಲ್ಲಿ ಕಾಶಿಗೆ ಯಾತ್ರೆಯನ್ನು ಬೆಳೆಸಿದರು. ಕಾಣಬೇಕೆಂದುದು 'ಆನಂದ-ಶಂಕರ'ರರನ್ನು; ಅವರನ್ನು ಕಂಡರು. ನೌಕರಿಗಾಗಿ ಮಾತನಾಡಿದರು. ಅವರೂ ಒಳ್ಳೆಯ ಮಾತ ನಾಡಿದರು. 'ನಿಮ್ಮಂತಹ ಜಾಣರನ್ನು ನಮ್ಮ ವಿಶ್ವವಿದ್ಯಾಲಯದಲ್ಲಿ ಸೇರಿಸಿ ಕೊಳ್ಳುವುದು ನಮ್ಮ ಭಾಗ್ಯವಾದರೂ ಇಂದಿನ ನಮ್ಮ ಆರ್ಥಿಕ ಪರಿಸ್ಥಿತಿಯು ಅಷ್ಟು ಆಶಾದಾಯಕವಿಲ್ಲವಾದುದರಿಂದ ನಾನು ವಿಷಾದಪಡುತ್ತೇನೆ. ಪರಿಸ್ಥಿತಿಯು ಸುಧಾರಿಸಲಿ; ನಿಮಗೆ ತಿಳಿಸುವೆ' ಎಂದರು. ಯಾತ್ರೆ ಮುಗಿಸಿ ಕೊಂಡು ಬಂದರು.

ಅಗಸ್ಟದಲ್ಲಿ ಒಂದು ಜಾಹೀರಾತು. ಪ್ರಾಚ್ಯಸಂಶೋಧನೆಯ ಖಾತೆ ಯಲ್ಲಿ. ನೌಕರಿಗಾಗಿ ಸ್ಥಳವಿದೆಯಷ್ಟೆ! ಯಾವ ಖಾತೆಯಾದರೇನು? ಎಂದು ಅದಕ್ಕೂ ಅರ್ಜಿ ಹಾಕಿದರು. ಅರ್ಜಿ ಹಾಕುವುದು ತಮ್ಮ ಕೈಯಲ್ಲಿಯ ಮಾತು. ಅದನ್ನು ಯೋಗ್ಯವಾಗಿಯೆ ಮಾಡುತ್ತಿದ್ದರು. ಆದರೆ ನೌಕರಿ

ಕೊಡುವುದು, ಬಿಡುವುದು, ಕೊಡುವವರ ಮೇಲೆ ಅವಲಂಬಿಸಿದುದು. ಕೊಡುವುದಕ್ಕಿಂತ ಬಿಡುವುದು ಲೇಸೆಂದಿರಬೇಕು ಹಲರು.

ನೌಕರಿ ಸಿಕ್ಕುವ ತನಕ ಊರಿಗೆ ಹೋಗುವಂತಿಲ್ಲ. ನೌಕರಿ ಸಿಕ್ಕಲೊಲ್ಲದು. ಮುಂಬೈಯಲ್ಲಿ ಮುಂದೆ ಸಾಗುವುದು ಹೇಗೆ? ನಿರುದ್ಯೋಗದ ಮೂಲಕ ಆಲಸ್ಯವು ಬರತೊಡಗಿತು. ಅದರೊಂದಿಗೆ ಬಂದಿತು ಮರೆವು; ಗುಂಗಿನಲ್ಲಿ ಕಾಲಕಳೆವುದು ರೂಢಿಯಾಗತೊಡಗಿತು. ಮಾತಿಗಿಂತ ವಿಚಾರವೆ ಹೆಚ್ಚು. ಮುಂದಿನ ಜೀವನದ ವಿಚಾರ. ಎಲ್ಲಿಯೂ ನೌಕರಿಸಿಕ್ಕುವ ಆಸೆ ಕಾಣದಿದ್ದರೂ ನೌಕರಿಯ ಬಗ್ಗೆ ನಿರಾಸೆಯು ಮಾತ್ರ ಎಂದೂ ಬರಲಿಲ್ಲ. ಮನೆಯವರಿಗೂ ಆಪ್ತೇಷ್ಟರಿಗೂ ನಿರಾಸೆಯ ಮುಸುಕು ಆವರಿಸಿ, ಅನೇಕ ಸಲ ಮಾತಾಡಿ ತೋರಿಸುತ್ತಿದ್ದರು: 'ಇನ್ನೇನು! ಎಷ್ಟು ದಿನ ದಾರಿಕಾಯುವುದು. ನಿನ್ನ ಪರದೇಶದ ಮುದ್ರೆಗೆ ತಕ್ಕ ನೌಕರಿ ಎಲ್ಲಿಂದ ಬರಬೇಕು? ಸಿಕ್ಕ ನೌಕರಿ ಹಿಡಿದರಾಯಿತು. ಇಲ್ಲದೆ ಹೋದರೆ ಮುಂದೆ ನಡೆಯುವುದು ಹೇಗೆ?' 'ನಿರಾಸೆ ನಿಮಗೆ. ನನ್ನ ಆಸೆ ಇನ್ನೂ ಹಸಿಯಿದೆ; ಅದು ಒಣಗುವುದು ಶಕ್ಯವಿಲ್ಲ. ಹತ್ತಿಕ್ಕಿಟ್ಟ ನನ್ನ ವ್ಯಕ್ತಿತ್ವವು ಪುಟಿದು ನೆಗೆಯುವ ಮಹತ್ವಾಕಾಂಕ್ಷೆಯನ್ನು ತೋರುತ್ತಿದೆ. ದಾರಿ ಕಾಯುವೆ. ಮುಂಬರುವ ಸುದಿನಗಳಿಗಾಗಿ ಇಂದು ಎಂಥ ತೊಂದರೆಗಳು ಬಂದರೂ ನೊಂದುಕೊಳ್ಳುವುದಿಲ್ಲ' ಎಂಬ ವಿಚಾರ ಜಾಗಿರದಾರರದು.

ಮತ್ತೊಮ್ಮೆ ಮಿಂಚಿತು. ಬೆಳಕು ಕಂಡಿತು. ಡೆಕ್ಕನ್ ಕಾಲೇಜದ ಮುಖ್ಯಾಧ್ಯಾಪಕರಾಗಿದ್ದ ರಾಲಿನ್‌ಸನ್ ಅವರಿಗೆ ವಿದ್ಯಾಖಾತೆಯ ಸಂಚಾಲಕ ಸ್ಥಾನವು ದೊರೆವುದೆಂದು ಸುದ್ದಿ ಹಬ್ಬಿತ್ತು. ಆಸೆ ಕಂಡಿತು. ಅದು ಸಂಭವಿಸಿದ್ದರೆ ನೌಕರಿಯ ನೆರವು ಬೇಗನೆ ಸಿಗಬಹುದಾಗಿತ್ತು. ಆದರೆ ಅದು ಕೇವಲ ಮಿಂಚಿನ ಬೆಳಕಾಯಿತು. ರಾಲಿನ್‌ಸನ್‌ರು ಸಂಚಾಲಕರಾಗಲಿಲ್ಲ. ಜಾಗಿರದಾರರಿಗೆ ಚಾಲನೆ ಸಿಗಲಿಲ್ಲ.

ಮತ್ತೆ ಮರುಭೂಮಿ. ಮುಂಬಯಿಗೆ ಬಂದು ಕೆಲದಿನಗಳ ವರೆಗೆ ಜಾಗಿರದಾರರು ತಮ್ಮ ಆಪ್ತರೊಬ್ಬರಲ್ಲಿ ಇದ್ದರು. ಅವರಲ್ಲಿದ್ದಾಗ ಒಂದು ಮೋಜಿನ ಸಂಗತಿ ನಡೆಯಿತು. ವಕೀಲರಾದುದರಿಂದ ಆ ಆಪ್ತರ ಮನೆಗೆ ಬರು–

ಹೋಗುವ ಜನರು ಹೆಚ್ಚು. ಅಗರಖೇಡ-ವಿಜಯಪುರದವರಂತೂ ಅವರ ಲ್ಲಿಯೆ. ಒಂದು ದಿನ ವಕೀಲರು ಹೊರಗೆ ಹೋಗಿದ್ದರು. ಜಾಗಿರದಾರರು ಮನೆಯಲ್ಲಿದ್ದರು. ಪಕ್ಷಗಾರನೊಬ್ಬ ಪಡಸಾಲೆಯಲ್ಲಿ ಕುಳಿತಿದ್ದ. ಅವನ ಹತ್ತಿರ ಎಲೆ ತಂಬಾಕು-ಸಾಮುಗ್ರಿಗಳನ್ನು ನೋಡಿ ಜಾಗಿರದಾರರು ಅವನೆಡೆ ಹೋಗಿ ಎಲೆಹಾಕುತ್ತ ಕುಳಿತರು. ಚಟದವರಿಗೆ ಗುರುತು ಬಲು ಬೇಗ-ಒಮ್ಮೊಮ್ಮೆ ಗುರುತೂ ಬೇಡ. ಮಾತಿಗೆ ಮೊದಲಾಯಿತು. ಪಕ್ಷಗಾರನು ಕೇಳಿದ: 'ನೀವು ಇಲ್ಲಿಯೇ ಇರತೀರೇನು ?' 'ಅಹುದು' ಎಂದರು ಜಾಗಿರ ದಾರರು. 'ಏನು ಮಾಡುತ್ತೀರಿ ?' ಎಂದು ಮುಂದುವರೆದ ಪಕ್ಷಗಾರ. 'ಏನಿಲ್ಲ ! ಸುಮ್ಮನೆ ಇದ್ದೇನೆ' ಎಂದು ಉತ್ತರವಿತ್ತರು.

'ವಕೀಲರು ನಿಮಗೇನಾಗಬೇಕು ?'

'ನಮ್ಮ ಆಪ್ತರು.'

'ಆ … …ಇಂಗ್ಲಂಡಕ್ಕ ಹೋಗಿ ಬಂದಾರಲ್ಲ ! ಅವರೇನಾಗಬೇಕು ನಿಮಗೆ ?'

'ಅವರೆ……..ಏನೂ ಆಗಬೇಕಿಲ್ಲ. ನಾವೆಲ್ಲರೂ ಒಂದೆ ಊರಿನವರು-ಆಗರಖೇಡದವರು.'

ಮುಂಬಯಿಯಲ್ಲಿದ್ದಾಗ ಜಾಗಿರದಾರರು ಇಂಗ್ಲಂಡಕ್ಕೆ ಹೋಗಿ ಬಂದವರಂತೆ ವೇಷ ಮಾಡುತ್ತಿದ್ದಿಲ್ಲ. ಸಾದಾ ಶರ್ಟು, ಕೋಟು, ಧೋತರ ಟೊಪ್ಪಿಗೆ. ಪಕ್ಷಗಾರನಿಗಂತೂ ಸಂಶಯ ಬರಲು ಸಾಧ್ಯವೆ ಇದ್ದಿಲ್ಲ. ಅವ ನೊಡನೆ ತಂಬಾಕು ಹಾಕುತ್ತಾ ಇದ್ದಾರೆ. ಇಂಗ್ಲಂಡ ಕಂಡ ಬಂದುದೂ ತಂಬಾಕು ಜಗಿಯುವುದೂ ಅವನಿಗೆ ಹಿಡಿಯದ ವಿಷಯ. ಎದ್ದು ಗ್ಯಾಲರಿ ವರೆಗೆ ಹೋಗಿ ಜೀಕಳಿ ಹೊಡೆದು ಬಂದು, ಅವನು ಮತ್ತೆ ಮುಂದುವರೆದ.

'ಅವರಿಗೆ ನೌಕರಿ ಸಿಕ್ಕಿತೇನರಿ ?'

'ಸಿಕ್ಕ ಹಾಗೆ ಕಾಣಲಿಲ್ಲ. ಸಿಕ್ಕಿದ್ದರೆ ಬೊಬ್ಬಾಟ ಆಗತಿತ್ತಲ್ಲ !'

'ಎಲ್ಲಿ ಸಿಗಬೇಕು, ಬಿಡ್ರಿ ! ಸರಕಾರದಾಗೇನು ಇವರ ಸೋದರಮಾವ ಇಲ್ಲ, ಇವರಿಗೆ ನೌಕರಿ ಕೊಡಲಿಕ್ಕೆ. ಇಂಗ್ಲಂಡಕ್ಕೆ ಹೋಗಿ ಬಂದರೇನು ? ಎಲ್ಲಿಂದ ಬರಬೇಕು ನೌಕರಿ ?'

ಮತ್ತೆ ಉಗುಳಲು ಹೋದ. ಜಾಗಿರದಾರರಿಗೆ ಅವನ ಮಾತು ಮೋಜೆನಿಸಿತು. ಸುಮ್ಮನೆ ಕುಳಿತರು. ಅವನು ಬಂದು,

'ಅವರು ಆಯ್. ಸಿ. ಎಸ್. ನಾಪಾಸಾದರಂತಲ್ಲ! ಆಯ್. ಸಿ. ಎಸ್‌ಕ್ಕೆ ಯಾಕೆ ಹೋಗಬೇಕಾಗಿತ್ತು? ಫಸ್ಟಕ್ಲಾಸು ಬಂದಿದ್ದಾರು ಬಿ. ಎ. ದಾಗ. ಮಸ್ತಮಂದಿ ಇದ್ದಾರ ಫಸ್ಟಕ್ಲಾಸ್ ಬಿ. ಎ. ಅಂಥಾದ್ದೇನು ಶಾಹಾಣೆ ಇದ್ಧಾಂಗ ಕಾಣಲಿಲ್ಲ............ಅಲ್ರೀ, ಇನ್ನೊಂದು ಮಾತು........ಅವರೇನು ಇಂಗ್ಲಂಡದಿಂದ ಒಬ್ಬರೆ ಬಂದಾರೊ ಏನು, ಸಂಗತೀಲೆ....ಒಂದು ಮಡಮ್ಮನ ಗಂಟು ಹಾಕಿಕೊಂಡು ಬಂದಾರೊ? ಇಂಗ್ಲಂಡಕ್ಕೆ ಹೋದ ವ್ಯಾಲ ಬಿಟ್ಟಾರೆಯೆ? ನೌಕರಿ ಸಿಕ್ಕಿಲ್ಲ, ಅಂತ ಹೇಳಿದಿರಿ, ಯಾವ ಸುದ್ದೀನೂ ಹೊರಬಿದ್ದಿಲ್ಲ. ನಾಳೆ ನೌಕರಿ ಸಿಗಲಿ, ಹೊರಬೀಳತದ ನೋಡಿರಿ ಇವರ ಮಂಗನಾಟಾ............'

ಅಷ್ಟರಲ್ಲಿ ವಕೀಲರು ಬಂದುದರಿಂದ ಮಾತು ನಿಂತಿತು. ಜಾಗಿರದಾರರು ಎದ್ದು ತಮ್ಮ ಕೋಣೆಗೆ ಹೋದರು. ಜನಾಭಿಪ್ರಾಯದ ಮಾದರಿಯೊಂದು ಸಿಕ್ಕಿತು ಜಾಗಿರದಾರರಿಗೆ. ಪಕ್ಷಗಾರನು ಗೊತ್ತಿಲ್ಲದೆ ಮಾತನಾಡಿದ್ದ. ಗೊತ್ತಾಗದೆ ಉಳಿದಿದ್ದರೆ ಸುಖವಾಗಬಹುದಾಗಿತ್ತು. ಅಂದು ರಾತ್ರಿ ಊಟಕ್ಕೆ ಆದೇನೊ ತಡಮಾಡಿಯೆ ಕುಳಿತಿದ್ದರು. ವಕೀಲರು ಪಕ್ಷಗಾರನೊಡನೆ ತಮ್ಮ ಕೆಲಸದ ಬಗೆಗೆ ಮಾತನಾಡುತ್ತ, ಒಮ್ಮೆಲೆ ನಡುವೆ, 'ರಂಗಾ, ಇಂಗ್ಲಂಡದಾಗ ಸಂಜೆಯೂಟ ಎಷ್ಟೊತ್ತಿಗೆ ಮಾಡುತ್ತಾರೆ' ಎಂದರು. 'ಸಂಜೆಯ ಏಳು ಗಂಟೆಗೆ ಊಟವಾಗುವುದು ಅಲ್ಲಿ' ಎಂದರು ಜಾಗಿರದಾರರು. ಪ್ರಶ್ನೆಯು ಸಾಮಾನ್ಯವಾದುದರಿಂದ ಅಂತಹ ಸಂಶಯಕ್ಕೇನು ಆಸ್ಪದವಿದ್ದಿಲ್ಲ. ಆದರೂ ಪಕ್ಷಗಾರನ ಮೋರೆ ಪೆಚ್ಚಾಗತೊಡಗಿತ್ತು.

ಊಟವಾದ ಮೇಲೆ ಪಕ್ಷಗಾರನು ವಕೀಲರನ್ನು ಕೇಳಿದ. 'ಅವರು ಯಾರು?' ಎಂದು. 'ಅವನೆ! ನಮ್ಮ ರಂಗ! ಇಂಗ್ಲಂಡಕ್ಕೆ ಹೋಗಿ ಬಂದಾವ' ಎಂದರು ವಕೀಲರು. ಮುಂದಿನ ಮಾತು ಬೇಕಿದ್ದಿಲ್ಲ ಪಕ್ಷಗಾರ ನಿಗೆ. ಅವನಿಗೆ ಹೇಗೊ ಅನ್ನಿಸತೊಡಗಿತ್ತು. ಮತ್ತೆ ತಂಬಾಕಕ್ಕಾಗಿ ಜಾಗಿರ ದಾರರು ಅವನೆಡೆಗೆ ಬಂದರು. ಅವನು ಒಮ್ಮೆಲೆ ಕೆಳಗಿಳಿದು ಹೋಗಿ ಬೇರೆ ಸ್ವಚ್ಛ ತಂಬಾಕನ್ನು ಕೊಂಡುಕೊಂಡು ಬಂದು, ಅವರಿಗೆ ಕೊಟ್ಟ. ಅವನ

ಮನದಲ್ಲಿ ಹುರುಹುರು. ರಾತ್ರಿ ಜಾಗಿರದಾರರನ್ನು ಸಿನಿಮಾಕ್ಕೆ ಕರೆದುಕೊಂಡು ಹೋದ. ಹೋಗುವಾಗ–ಬರುವಾಗ ಗಾಡಿ; ಮೇಲ್ತರಗತಿಯ ಟಿಕೀಟು. ಏನು ಮಾಡಿದರೂ ಅವನಿಗೆ ಸಮಾಧಾನವಾಗಲೊಲ್ಲದು. ಮರುದಿನ ತನ್ನ ಕೆಲಸ ಮುಗಿಸಿಕೊಂಡವನೆ ಊರಿಗೆ ಪ್ರಯಾಣ ಬೆಳೆಸಿದ.

ಆಪ್ತರ ಮನೆಯಲ್ಲಿ ಎಷ್ಟು ಕಾಲ ಕಳೆವುದು, ಎಂದು ಜಾಗಿರದಾರರು ಮನೆಯನ್ನು ಬಿಟ್ಟು, ಇಡಿ ಸಮಾಜದ ಆಪ್ತನಾದ ಊಟದ ಮನೆಯ ಯಜಮಾನನ ಸಾನ್ನಿಧ್ಯವನ್ನು ಪಡೆದರು. ಮುಂಬೈವಾಸವು ಮುಂದೆ 'ಲಕ್ಷ್ಮೀನಿವಾಸ'ದಲ್ಲಿ. ಅದು ಗಿರಗಾಂವದ ಹಿಂದಿನ ಬೀದಿಯಲ್ಲಿಯ ಹೊಟೆಲೊಂದು. ಇರುವುದು 'ಲಕ್ಷ್ಮೀನಿವಾಸ'ದಲ್ಲಿಯಾಗಿದ್ದರೂ ದುಡ್ಡಿನ ಅಭಾವವಾಗತೊಡಗಿತು. 'ಲಕ್ಷ್ಮಿ'ಯು ಒಲಿಯಲಿಲ್ಲ. ಒಲಿಯಲಿಲ್ಲವಿಷ್ಟೆ ಅಲ್ಲ, ಮುನಿದಳು. ಆದರೆ ಒಲಿದಳು ಸರಸ್ವತಿ, ಬಲಿಯಿತು ಸೌಹಾರ್ದ. ಓದುವುದು–ಬರೆವುದು ಹೆಚ್ಚಾಯಿತು; ಗೆಳೆಯರು ಸಿಕ್ಕರು. ಅಳವಣಿ, ವಾಳವೇಕರ, ಯಲಬುರ್ಗಿ ಮೊದಲಾದವರ ಪರಿಚಯವಾದುದು ಇಲ್ಲಿಯೆ.

ವೆಚ್ಚ ಕಡಿಮೆ ಮಾಡಬೇಕೆಂದು ಉಪವಾಸ ಬೀಳುವುದು. ಚಹಾ–ಸಿಗರೇಟುಗಳ ಮೇಲೆಯೆ ಜೀವನ. ಸಿಗರೇಟುಗಳಿಗೆ ಮಿತಿಯಿಲ್ಲ. ಇಂಗ್ಲಂಡದಲ್ಲಿದ್ದಾಗ ದಿನಕ್ಕೆ ಸುಮಾರು ೫೦–೬೦ ಸಿಗರೇಟುಗಳನ್ನು ಸೇದುತ್ತಿದ್ದರು. ಅಲ್ಲಿ ಅಭ್ಯಾಸವಿತ್ತು; ಕೆಲಸವಿತ್ತು. ಕೆಲಸವಿಲ್ಲದ ಕಾಲವಿದು. ಕಾಲಹರಣ ಮಾಡಲು ಸಾಧನವೊಂದು ಬೇಕಲ್ಲ! ವಿಚಾರಿಗಳಿಗೆ ಸಿಗರೇಟು ಒಳ್ಳೆಯ ಸಾಧನ. ಮಂಚದ ಮೇಲೆ ಬಿದ್ದುಕೊಂಡು ಸಿಗರೇಟು ಸೇದಿ ಹೊಗೆ ಬಿಡುವಾಗ ಭವಿಷ್ಯ ಜೀವನದ ಚಿತ್ರಗಳನ್ನು ಕಾಣುವುದು. 'ಅಗ್ನಿಹೋತ್ರ' ಇಟ್ಟಂತಾಗಿತ್ತು. ಒಂದಾದ ಮೇಲೆ ಮತ್ತೊಂದು.

ಚಹಾ ಕುಡಿಯುವುದರಿಂದ ಹಸಿವು ಹಿಂಗತೊಡಗಿತು. ಅದುವೆ ಸಾಧನವಾಯಿತು. ಮೊದಲು ಮೊದಲು ಎರಡು-ಮೂರು ದಿನ ಊಟವಿಲ್ಲದೆ ಇರುತ್ತಿದ್ದರೆ ಮುಂದೆ ಅದೆ ಚಟವಾಗಿ, ಸಹಜವಾಗಿ ಹತ್ತು–ಹದಿನೈದು ದಿನ ಉಪವಾಸವಿರುತ್ತಿದ್ದರು. ಮನೆಯವರಿಗೆ ದಿಗಿಲು, ಮುಂಬಯಿಯಲ್ಲಿ ಏನು ಮಾಡುತ್ತಿರಬಹುದೆಂದು, ಹೇಗೆ ಜೀವಿಸುತ್ತಿರಬಹುದೆಂದು? ತಮ್ಮ ಜೀವಿತದ ರೀತಿಯನ್ನು ಯಾರ ಮುಂದೆಯೂ ಹೇಳುತ್ತಿರಲಿಲ್ಲ. ಮಮತೆಯ

ತಮ್ಮನು, ಆಗಾಗ ಕೆರಳಿಸಿ, ಕೇಳುತ್ತಿದ್ದನು. ಗೆಳೆಯರು ಕುತೂಹಲದಿಂದ ಕೇಳುತ್ತಿದ್ದರು. ಒಂದು ಪತ್ರಕ್ಕೆ ಉತ್ತರ ಬರೆಯುವಾಗ ಹೀಗೆ ಬರೆದಿದ್ದರು: 'ಇಲ್ಲಿ ನಾನು ಹೇಗೆ ಜೀವಿಸಿರುವೆನೆಂದು ಕೇಳುವಿರಲ್ಲವೆ? ನಾನು ಜೀವಿಸಿಲ್ಲ! ಕೇವಲ ಹೋರಾಡುತ್ತಿದ್ದೇನೆ. ನನ್ನ ಉಪಜೀವನ ಹೇಗೆ ಸಾಗಿದೆಯೆ? ಎಲ್ಲಿಯ ಉಪಜೀವನ! ಪ್ರಯತ್ನಪೂರ್ವಕ ಉಪವಾಸ ಬೀಳುತ್ತಿದ್ದೇನೆ. ಅದೆ ಅನುಕೂಲವಾಗಿದೆ. ಉಪವಾಸದಿಂದ ಉಳಿವುದು ಊಟ. ಊಟ— ಉಳಿಸುವುದು ದುಡ್ಡನ್ನು; ಕಡಿಮೆ ದುಡ್ಡಿನಿಂದ ರಥವು ಸಾಗುವುದು. ಮೂರು ತಿಂಗಳಲ್ಲಿ ಕೇವಲ ೫೦ ರೂಪಾಯಿಯ ಮೇಲೆ ಮುಂಬೈಯಲ್ಲಿ ಜೀವನ ಸಾಗಿದೆ. ಹೇಗೆ ಸಾಗಿದೆ? ಹಾಗೆಯೆ ಸಾಗಿಸಿದ್ದೇನೆ.'

ಈ ಬವಣೆಯನ್ನು ಕೇಳಿ-ನೋಡಿ, ಉಪಕಾರ ಮಾಡಬೇಕೆಂಬ ಉನ್ಮಾದ ದಿಂದ ಹೆಣ್ಣುಮಕ್ಕಳ ತಂದೆಗಳು ಬಂದು ಮದುವೆಯ ಮಾತು ಎತ್ತುತ್ತಿದ್ದರು. 'ಏನಿದೆಯೆಂದು ಕೇಳುವಿರಾ? ನಿಮಗೆ ಬೇಕಾದುದು ಏನೂ ಇಲ್ಲ. ಮಮತೆಯ ತಮ್ಮ, ತಂದೆಯನ್ನು ಬಿಟ್ಟರೆ ಆಸ್ತಿ ಎಂಬುದು ಏನೂ ಇಲ್ಲ. ಮನೆಯಿಲ್ಲ! ಹೊಲವಿಲ್ಲ! ಆದಾಯವಿಲ್ಲ! ಏನಾದರೂ ನನ್ನಲ್ಲಿದ್ದರೆ, ಅದು ನನ್ನ ಹರಿತ ಬುದ್ಧಿ; ಹರೆಯದ ಹುಮ್ಮಸ್ಸು. ಮೇಲಾಗಿ, ನಿಮ್ಮ ಸಮಾಜದ —ದಡ್ಡತನ–ಹೆಡ್ಡತನದಿಂದ ತುಂಬಿದ ನಿಮ್ಮ ಸಮಾಜದ–ದೃಷ್ಟಿಯಿಂದ ನಾನು ಹುಚ್ಚನು–ತಲೆತಿರುಕನು. ನನ್ನಿಂದ ನಿಮಗೆ ಏನೂ ಉಪಯೋಗ ವಿಲ್ಲ! ಎಂದು ಬಿರುನುಡಿಗಳನ್ನಾಡಿ ಬಂದವರನ್ನು ದೂರ ಸರಿಸುತ್ತಿದ್ದರು.

ಉದ್ಯೋಗವಿದ್ದಿಲ್ಲವೆಂದರೆ, ಹೊಟ್ಟೆ ತುಂಬಿಕೊಳ್ಳುವ ಉದ್ಯೋಗ ವಿದ್ದಿಲ್ಲ. ಮನಸ್ಸಿಗೆ ಸವಿಯೂಟ. ಓದುವುದು—ಬರೆಯುವುದು—ಹೆಚ್ಚಾಗಿ ವಿಚಾರಿಸುವುದು. ತಮ್ಮ ಬಗೆಗೆ, ತಮ್ಮ ಸುತ್ತಲಿನ ಸಮಾಜದ ಬಗೆಗೆ, ಹೊಂದಿಕೊಂಡ ಆಪ್ತೇಷ್ಟರ ಬಗೆಗೆ ವಿಚಾರಿಸುವುದು. ತಮ್ಮ ಕಾರ್ಯ ವಾವುದು? ಎಂದು ಆಗಾಗ ಪ್ರಶ್ನೆ ಬರುತ್ತಿದ್ದಿತು. ತಮ್ಮನ್ನು ಗುದ್ದಿ ಹೊರ ದೂಡಿದ ಸಮಾಜವನ್ನು ಕಂಡು ಹೊರಗಿನಿಂದಲೆ ತಿರಸ್ಕಾರದಿಂದ ನಗುತ್ತಿ ದ್ದರು. ಇಂತಹ ಸಮಾಜದ ಬಲಿಯುತ್ತಿರುವ ಭಾರವನ್ನು ತಡೆಯುವುದು ಹೇಗೆ? 'ನಾಟಕ ಸ್ತ್ರೀಯಂತೆ ಬಯಲ ಡಂಭವ ತೋರುವುದಲ್ಲ!' ಎಂಬ ವಿಚಾರಸುಳಿಯು ಹಾದು ಹೋದಾಗ 'ಉದರ ವೈರಾಗ್ಯ'ವು ಬಂತು.

೧೯೩೯ರ ಆಗಸ್ಟದ ೨೫ಕ್ಕೆ ಪ್ರಾರಂಭವಾಯಿತು 'ಉದರ ವೈರಾಗ್ಯ'ವು. ಮೊದಲು ಈ ನಾಟಕದ ಹೆಸರು 'ಕನಸಿನ ಕರ್ನಾಟಕ' ಎಂದು ಇತ್ತು. ಪುಣೆಯ 'ಸಸೂನ್ ಆಸ್ಪತ್ರೆ'ಯಲ್ಲಿ ವಿಷಮಜ್ವರದಿಂದ ಬಳಲುತ್ತಿದ್ದಾಗ ಕನಸಿನಲ್ಲಿ ಕಂಡ ಕರ್ನಾಟಕದ ಚಿತ್ರವು ನಾಟಕರೂಪವಾಗಿ ಹೊರಬಂತು. ಇಡಿ ನಾಟಕವನ್ನು ಬರೆಯಲು ೨೦ ಗಂಟೆಗಳಕಾಲ ಹಿಡಿದಿತು. ಬರೆದುದು ಆಗಷ್ಟು, ಈಗಿಷ್ಟು. ಸಪ್ಟಂಬರ ಮೊದಲ ತಾರೀಖಿಗೆ ನಾಟಕವು ಸಿದ್ಧವಾಗಿತ್ತು.

ಕನಸಿನಲ್ಲಿಯ ಕರ್ನಾಟಕದ ಚಿತ್ರವನ್ನು ನೋಡುವವನು ರೋಗಿ—ಜಾಗಿರದಾರ—ನಾಟಕದಲ್ಲಿಯ ಮಾಧವ—ಪರದೇಶಕ್ಕೆ ಹೋಗಿ ಬಂದವ. ಕನಸು ಹೇಳಿದುದು ಶಾಮನಿಗೆ- ವ್ಹಿ. ಬಿ. ನಾಯಕರು–ನಾಟಕದಲ್ಲಿಯ ಮನೋಹರ–ಕನ್ನಡದ ಅಭಿಮಾನಿ. ತಮ್ಮ ಅನುಭವವನ್ನು, ತಾವು ಅನುಭವಿಸಿದುದನ್ನು ನಾಟಕದಲ್ಲಿ ಹೇಳಿದ್ದಾರೆ. ನಾಟಕಕ್ಕೆ ತಕ್ಕಂತೆ ಉಳಿದ ಪಾತ್ರ ಪೋಷಣೆಯನ್ನು ಮಾಡಿಕೊಂಡಿದ್ದರೂ ಮೂಲ ಮಾತು ಎದ್ದು ಕಾಣುವುದು.

ಪರದೇಶಕ್ಕೆ ಹೋಗಿ ಬಂದ ನಮ್ಮ ಸಮಾಜದ ತರುಣರ ಪರಿಸ್ಥಿತಿ–ದುಃಸ್ಥಿತಿಯ ಬಣ್ಣನೆಯು ಈ ನಾಟಕದ ಮೂಲೋದ್ದೇಶ. ಎರಡನೆಯದು ಆಗಿನ ಕಾಲದ ತರುಣರ ಮನೋವೃತ್ತಿ—ಮರಾಠಿಯ ಬಗ್ಗೆ ಮೋಹ. ಮೂರನೆಯದು ತಿಳಿವಳಿಕೆಯಿಲ್ಲದ ಹುಂಬ ಒಕ್ಕಲಿಗರ ಚಿತ್ರ; ಹಿನ್ನೆಲೆಯಾಗಿ ಪರಿಣಮಿಸಿದ್ದರೂ ಎದ್ದುಕಾಣುವುದು ಬ್ರಾಹ್ಮಣರ ಸಮಾಜ. ಉಚ್ಚವರ್ಣೀಯರೆಂದು ಎದೆಗೆ ಹೊಡೆದುಕೊಳ್ಳುವ ಬ್ರಾಹ್ಮಣ ಸಮಾಜದ ಅನವಸ್ಥೆ. ತಪ್ಪಿನಲ್ಲಿಯೆ ತೊಳಲಾಡುತ್ತ, ಇದ್ದುದರಲ್ಲಿಯೆ ಸುಖ ಹಚ್ಚಿಕೊಳ್ಳುತ್ತ, ದೋಷಗಳನ್ನು–ದೌರ್ಬಲ್ಯಗಳನ್ನು ಸಮರ್ಥಿಸುತ್ತ ಸಾಗಿದ ನಮ್ಮ ಸಮಾಜದ ಚಿತ್ರ.

ನಾಟಕದಲ್ಲಿ ಬರುವ ಪಾತ್ರಗಳು, ಎಣಿಸಲು ಹದಿಮೂರಾದರೂ ಒಂಬತ್ತೆ. ಮಾಧವ–ಪರದೇಶಕ್ಕೆ ಹೋಗಿ ಬಂದ ತರುಣ; ಕಥೆಯ ನಾಯಕ. ಮನೋಹರ–ಮಾಧವನ ಗೆಳೆಯ; ಕನ್ನಡದ ಉಜ್ವಲಾಭಿಮಾನಿ; ಕರ್ನಾಟಕದ ಹೊಸಯುಗದ ತರುಣ. ಶ್ರೀನಿವಾಸರಾಯ–ಸಮಾಜದಲ್ಲಿ ಮನ್ನಣೆ ಪಡೆದ ಸದ್ಗೃಹಸ್ಥ; ಹಳೆಯದಕ್ಕೆ ತಲೆ ಬಗ್ಗಿಸಲಾರ, ಹೊಸದಕ್ಕೆ ತಲೆ–ತೆಗೆಯಲಾರ; ಗಾಳಿಬಿಟ್ಟಹಾಗೆ ಸಾಗುವವ. ವೇದವ್ಯಾಸಾಚಾರ್ಯ–ವ್ಯಾಕರಣವೆ ತಮ್ಮ ಉಪಜೀವನದ ಸಾಧನವೆಂದು ತಿಳಿದ ಬ್ರಾಹ್ಮಣನೊಬ್ಬ.

ಗೋಪಾಲ.—ಅರ್ಧಮರ್ಧ ಕಲಿತು ಆರೇಭಾಷೆಯ ಮೋಹದಲ್ಲಿದ್ದ ತರುಣ, ಬ್ರಾಹ್ಮಣನ ಅಣ್ಣನ ಮಗ. ಕೃಷ್ಣಮೂರ್ತಿ— ಗೀತಾಪ್ರವಚನ ಪಟು. ಶಿವಪ್ಪ—ಶ್ರೀನಿವಾಸರಾಯನ ನಂಬಿಗೆಯಾಳು; ಹುಂಬ ಒಕ್ಕಲಿಗ. ಮಾಲತಿ—ಶ್ರೀನಿವಾಸರಾಯನ ಸೋದರ ಸೊಸೆ; ಮನೋಹರನ ಸಹಾಧ್ಯಾಯಿನಿ; ಮಾಧವನಿಗಾಗಿ. ಸರಸ್ವತಿ—ಮಾಲತಿಯ ಗೆಳತಿ; ಚಿಕ್ಕಂದಿನಲ್ಲಿ ಮದುವೆಯಾದವಳು; ವೇದವ್ಯಾಸಾಚಾರ್ಯರ—ಪಾಣಿನಿಯ—ಹೆಂಡತಿ,—ಅಕ್ಷರ ಶತ್ರು. ಇವರೆಲ್ಲರೂ ನಮ್ಮ ಅಂದಿನ ಸಮಾಜದ ವಿವಿಧ ವಿಭಾಗಗಳ ಪ್ರತಿನಿಧಿಗಳು.

ಮಾಧವ--ಮನೋಹರ—ಮಾಲತಿ ಮೂವರು ಮಾಲತಿಯ ಊರಿಗೆ ಬರುವರು. ನಿಲ್ದಾಣದಲ್ಲಿಯೆ ನಿಷ್ಕರ್ಷೆಯಾಗುವುದು. ಮಾಧವನು 'ಪರದೇಶಿ' ಯಿದ್ದುದರಿಂದ ಯಾರ ಮನೆಗೆ ಹೋಗುವುದು ವಿಹಿತವಲ್ಲವೆಂದೆಣಿಸಿ, ಶಿವಪ್ಪನ ಮನೆಗೆ ಸಾಗಬೇಕೆಂದು ಗೊತ್ತು ಮಾಡುವನು. ಶಿವಪ್ಪ ಅಚ್ಚರಿಗೊಂಡರೂ ಒಪ್ಪುವನು. ಆದರೆ ಮಾಲತಿಯು ಒತ್ತಾಯಮಾಡಿ ತಮ್ಮ ಮನೆಗೆ ಕರೆದೊಯ್ಯುವಳು.

ಕಲಿತ ಮಾಲತಿಯನ್ನು ದಡ್ಡ ಗೋಪಾಲನಿಗೆ ಮದಿವೆ ಮಾಡಬೇಕೆಂದು ವೇದವ್ಯಾಸಾಚಾರ್ಯರು ಹವಣಿಸುತ್ತಿರುವರು—ಶ್ರೀನಿವಾಸರಾಯನ ರೊಕ್ಕಕ್ಕಾಗಿ. ಧನಿಕನಾದ ಶ್ರೀನಿವಾಸರಾಯನು ಬಾಹ್ಮಣನಾಗಿ ಹುಟ್ಟಿದುದರಿಂದ ಬ್ರಾಹ್ಮಣ ಸಮಾಜದ ಮುಖಂಡನೆನಿಸಿಕೊಳ್ಳುವನು—ಹೊರಗೆ. ಮನೆಯಲ್ಲಿ ಮಮತೆಯ ಮಾಲತಿಯ ಮಾತನ್ನು ಮೀರಲಾರ. ಬ್ರಾಹ್ಮಣ ಸಭೆಯಲ್ಲಿ ನಿರ್ಣಯಗಳನ್ನು ಮಾಡಿ ಬಂದರೂ ಅವು ಯಾವೂ ಇವನ ಮನೆಯ ಬಾಗಿಲನ್ನು ಸೇರುವುದಿಲ್ಲ. ಮನೆಯಲ್ಲಿ ಮಾಲತಿಯೆ ಯಜಮಾನಿ.

ಇರುತ್ತಿರಲು, ಮಾಧವ-ಮಾಲತಿಯರಲ್ಲಿ ಸಲುಗೆ—ಪ್ರೇಮ ಬೆಳೆಯುವುದು. ಇದರ ಸುಳುವು ವೇದವ್ಯಾಸಾಚಾರ್ಯನಿಗೆ ಸಿಗುವುದು. ಗೋಪಾಲನೊಡನೆ ಮದುವೆಯನ್ನು ಬೇಗನೆ ಮಾಡಿ ಮುಗಿಸಬೇಕೆಂದು ಹವಣಿಸುವನು. ಗೋಪಾಲನಿಗಾದರೊ ಆ ಕಲಿತ ಹುಡುಗೆಯನ್ನು ಮದುವೆಯಾಗಲು ಗಾಬರಿ. ತಾಯಿಯ ಮುಂದೆ ತನ್ನ ದುಃಖವನ್ನು ತೋಡಿಕೊಳ್ಳುವನು. ತಾಯಿಗೂ ಗೊತ್ತಾಗಿದೆ, ಮಾಧವ—ಮಾಲತಿಯರ ಸೆಳೆದಾಟ. ಮಾಲತಿ—

ಸರಸ್ವತಿಯದು ಓರಿಗೆಯವರು; ತಾನು ಮಾಲತಿಯ ಅತ್ತೆಯಾಗುವದಕ್ಕಿಂತ ಕತ್ತೆಯಾಗುವದು ಲೇಸೆಂದೆನಿಸುವದು ಅವಳಿಗೆ.

ವೇದವ್ಯಾಸಾಚಾರ್ಯರು ಗಡಿಬಿಡಿ ಮಾಡತೊಡಗುವರು. 'ಪರದೇಶಿ ಮಾಧವನನ್ನು ಹೊರದೂಡತಕ್ಕದ್ದು; ಮಾಲತಿಯನ್ನು ನಮ್ಮ ಮನೆಗೆ ಕಳುಹಿಸತಕ್ಕದ್ದು' ಎಂದು ಶ್ರೀನಿವಾಸರಾಯನಿಗೆ ಹೇಳುವರು. ಶ್ರೀನಿವಾಸರಾಯನಿಗೆ ಧರ್ಮಸಂಕಟ. 'ಮಾಧವನನ್ನು ಬಿಟ್ಟರೆ ನಿರ್ದಾಕ್ಷಿಣ್ಯನೆನ್ನುವರು; ಮಾಲತಿಯನ್ನು ಬಿಟ್ಟರೆ ನಿಷ್ಕರುಣನೆನ್ನುವರು; ಧರ್ಮವನ್ನು ಬಿಟ್ಟರೆ ದಡ್ಡನೆನ್ನುವರು. ನನಗಂತೂ ದಡ್ಡನೆನಿಸಿಕೊಳ್ಳುವುದರಲ್ಲಿಯೆ ಹೆಚ್ಚು ಆನಂದವಿದೆ.' ಎಂದು ಹೇಳುವನು. ನಿರುಪಾಯನಾಗಿ ಸಮಾಜದ ಆಜ್ಞೆಯನ್ನು ಮಾಲತಿಯ ಎದುರು ಹೇಳುವನು. ಇಬ್ಬರೂ ಗೋಳಿಡುವರು.

ಕೊನೆಗೆ, ಗೋಪಾಲನು ಮನೋಹರ–ಮಾಧವರೆದುರು 'ತಾನು ಮಾಲತಿಯನ್ನು ಮದುವೆಯಾಗಲು ಒಲ್ಲೆನೆ'ಂದು ಹೇಳುವನು. ಮಾಧವನಿಗೆ ಮುಂದುವರೆಯಲು ಅನುಕೂಲವಾಗುವುದು. ಮನದ ಬಯಕೆಯನ್ನು ಒಬ್ಬರೊಬ್ಬರು ಹೇಳುವರು. ಮಾಧವನು ಮಾಲತಿಯ ಕೈಹಿಡಿಯುವನು. 'ಪಾರಾದೆ' ಎಂದು ಗೋಪಾಲನು ಹುಚ್ಚುನಗೆ ನಗುವನು.

ಪ್ರೇಮ ಪ್ರವಾಹವು ಹರಿಯುವುದರಿಂದ ನಾಟಕವು ಸರಸವಾಗಿದೆ. ತಾರುಣ್ಯದ ಭರವು ಉಕ್ಕುತಿದೆ ಪ್ರತಿಮಾತಿನಲ್ಲಿ. ಮಾತುಗಳು ಉದ್ದುದ್ದವಾಗಿದ್ದರೂ ಹಿಂದಿನ ಸಂಸ್ಕೃತ ಕಾವ್ಯಾಲಂಕಾರಗಳಿಲ್ಲ. ಭಾಷಣದ ಶೈಲಿ ಇನ್ನೂ ಇದೆ. ಆದರೂ ಕಿಡಿ ಮಾತುಗಳು ಹೆಚ್ಚಾಗಿ ಹಾರಾಡುವುವು. ಮಾತಾಡಿದವರ ಶಬ್ದವನ್ನೆ ಹಿಡಿದು ಹೊರಳಿಸಿ ಅದರಿಂದಲೆ ಏಟು ಕೊಡುವುದು ಹೆಚ್ಚಾಗ ತೊಡಗಿದೆ. ಹಾಸ್ಯವು ಮೇಲುಗೈಯನ್ನು ಪಡೆಯುತ್ತಲಿದೆ.

ಪಾತ್ರಗಳು ಬರುವ–ಹೋಗುವ ಸಂನಿವೇಶಗಳು—ಬರೆದವನ ಕೃತಿಕೌಶಲ್ಯವನ್ನು ತೋರುವುವು.

ಮರಾಠಿಮಾದರಿಯ ಹಾಡುಗಳು ಸೇರಿಕೊಂಡಿವೆ. ನಿಜವಾಗಿಯೂ ನಾಟಕದ ಗತಿಗೆ ಈ ಹಾಡುಗಳಿಂದ ತಡೆಯಾಗುತ್ತದೆ. ಒಳ್ಳೆ ಸರಸವಾಗಿ ಮಾತನಾಡುವಾಗಲು ಹಾಡು; ದುಃಖಿಸುವಾಗಲೂ ಹಾಡು: ಸಿಟ್ಟಿಗೆದ್ದ

ಸೂರೆಗೊಳ್ಳುವಾಗಲೂ ಹಾಡು. ಹೀಗಾಗಿ ಪಾತ್ರಗಳು ಆಡಿದ ಮಾತಿನ ಪರಿಣಾಮವನ್ನು ತೊಡೆದು ಗಾನಲಹರಿಯಲ್ಲಿ ಒಯ್ದು ಬಿಡುವುವು ಹಾಡುಗಳು. ಹಾಡುಗಳಿಗೆ ನಾಟಕದಲ್ಲಿ ಪ್ರಮುಖ ಸ್ಥಾನವಿರಬಾರದು ಎನಿಸುವುದು.

'ಉದರ ವೈರಾಗ್ಯ'ಕ್ಕೆ ಮುನ್ನುಡಿ—ಉದ್ದ ಮುನ್ನುಡಿಯಿದ್ದುದು ಒಂದು ವೈಶಿಷ್ಟ್ಯ. ಮುನ್ನುಡಿಯಲ್ಲಿ, ನಾಟಕಕಾರನಿಗೆ ಇರಬೇಕಾದ ಲಕ್ಷಣಗಳನ್ನು ತೋರಿಸಿಕೊಡುವರು. ಅಂದಿನ ತನಕ ಒಳ್ಳೆ ಕವಿಗಳು, ಶಾಸ್ತ್ರ ಸಂಪನ್ನರು ಪುಸ್ತಕಗಳನ್ನು ಬರೆಯುತ್ತಿದ್ದರು. ಅಧಿಕಾರಿಗಳು ಬರೆಯುತ್ತಿದ್ದರು. ಇಂದು ಅನಧಿಕಾರಿಯಾದ ತಾವು ಬರೆಯುವರೆಂದು ಹೇಳಿದ್ದಾರೆ. ಅನಧಿಕಾರಿಯೆಂದ ಮೇಲೆ ತಪ್ಪುಗಳಿಗೆ ದೋಷವಿಲ್ಲ. 'ಬರೆದುದೊಂದು ಬಯಲ ಬೆಳಕಿನಂತೆ ತಿಳಿಯಾಗಿ ಹೊಳೆದರಾಯಿತು' ಎಂಬುದು ಅವರ ಗುರಿ.

' ನಾಟಕಗಳನ್ನು ಮೂರು ವಿಧವಾಗಿ ಮಾಡಬಹುದು. ಬರೆಯಲು ಯೋಗ್ಯವಾದವುಗಳು; ಓದಲು ಯೋಗ್ಯವಾದವುಗಳು; ಮತ್ತು ನೋಡಲು ಯೋಗ್ಯವಾದವುಗಳು. ಸಂಕೇತವೆಂದು ಇವುಗಳಿಗೆ ಕಥಾ—ನಾಟಕ, ಕಾವ್ಯ ನಾಟಕ, ಲೌಕಿಕ ನಾಟಕ ಎಂದು ಹೆಸರಿಡಬಹುದು. ಕವಿಗೆ ಈ ಮೂರೂ ಇಷ್ಟೆ? ಆದರೆ ಇಂದು ಯಾವ ತರಹದ ನಾಟಕಗಳು ಅವಶ್ಯವು? ನನಗೆ ನಾಟಕಗಳಲ್ಲಿ ಕಲ್ಪನೆಯ ಚಿತ್ರ ಬೇಡ; ಅದನ್ನು ಕಾದಂಬರಿಗಳಲ್ಲಿ ನೋಡಿರುವೆ. ನನಗೆ ನಾಟಕಗಳಲ್ಲಿ ಆಕಾಶವಾಣಿಯೂ ಬೇಡ, ದೇವ ದುಂದುಭಿಗಳೂ ಬೇಡ; ಅವುಗಳನ್ನು ಕಾವ್ಯದಲ್ಲಿ ಕೇಳಿರುವೆ. ಜಡಭೂಮಿಯಲ್ಲಿ ನಡೆಯುವ ಜನರ ನಡತೆಗಳು ರಂಗಭೂಮಿಯಲ್ಲಿ ಒಡೆದು ಕಾಣಬೇಕೆಂದು ನನ್ನ ಕುತೂಹಲ. ಕಾರಣ ಸದ್ಯದ ಕಾಲದಲ್ಲಿ ರಂಗಭೂಮಿಗೆ ಸಲ್ಲದ ನಾಟಕವು ನಾಟಕವೇ ಅಲ್ಲವೆಂದು ನನ್ನ ಅಭಿಪ್ರಾಯ. '

'ಮನರಂಜನೆಯು ನಾಟಕದ ಧ್ಯೇಯವಲ್ಲ; ಅದರ ಸ್ವಭಾವಗುಣ.'

'ವ್ಯಕ್ತಿಯ ಏರಿಳಿತಗಳನ್ನು ತೋರಿಸಿಕೊಡುವವನು ನಾಟಕಕಾರನು. ನಾಟಕವೆಂಬ ಕನ್ನಡಿಯೆ ಅವನ ಉಪಕರಣ. '

' ತಿಳಿಗನ್ನಡದಲ್ಲಿಯೆ ನಾಟಕಗಳನ್ನು ಬರೆಯಬೇಕು. ತಿಳಿಯುವ ಕನ್ನಡ—ತಿಳಿಗನ್ನಡ; ನಮ್ಮ ಸಲುವಾಗಿ ಭಾಷೆ; ಭಾಷೆಯ ಸಲುವಾಗಿ ನಾವು ಹುಟ್ಟಿದುದಿಲ್ಲ. '

ಈ ಬಗೆಯಾಗಿ ನಾಟಕಗಳ ಬಗೆಗೆ ವಿವೇಚನೆಯನ್ನು ಮಾಡಿ ತಮ್ಮ ಪದ್ಧತಿಯನ್ನು ಸಾರಿ ಬಿಟ್ಟಿದ್ದಾರೆ. ಈ ನಾಟಕಕ್ಕೆ ಇನ್ನೊಂದು ವೈಶಿಷ್ಟ್ಯವಿದೆ. ಅದು ಅದರ ಚರಿತ್ರಾತ್ಮಕ ಸೋಗು. ಈ ನಾಟಕದಲ್ಲಿ ಬಂದ ಬಹುಭಾಗವು ಅವರ ಅನುಭವವೆ. ಮುನ್ನುಡಿಯಲ್ಲಿಯ ಸಂಸ್ಕೃತ 'ಮನೋಹರ'ದ ಕನ್ನಡ 'ಎದೆವಯ್ಯ'ನ ರೂಪವು ಅಚ್ಚಕನ್ನಡದ ಕೆಚ್ಚೆದೆಯ ವೀರ ನಾಯಕರ ಬಗೆಗೆ ನಗೆಯಾಟಕ್ಕಾಗಿ. ಅದರಂತೆ ' ಮುದಗೊನೆ ' ' ಹದಗೊನೆ '; ನಾಟಕದಲ್ಲಿ 'ನಡೆಗೋಲು' ಮುಂತಾಗಿ.

ಮೊದಲಿನ ಆಸ್ಪತ್ರೆಯ ದೃಶ್ಯವು ಅವರು ಬೇನೆಯಿಂದ ಬಳಲುವಾಗಿನದೆ. ಅವೆ ಇಂಗ್ಲಂಡದಿಂದ ಬಂದಿದ್ದರು. ಕುಡಿಯುವುದು ಅಪರಿಚಿತವಿರಲಿಲ್ಲ. ಅದರ ಬಗ್ಗೆ ಇದ್ದ ಆಸೆಯನ್ನು ವ್ಯಕ್ತವಾಡುವುದು ಈ ಮಾತು. 'ಸೆರೆ ಇರ ಬಹುದು ಜಾತಿಯಿಂದ; ಸದ್ಯಕ್ಕಂತೂ ಆದರ ಮಹತ್ವ ಎಷ್ಟಿರುವುದೆಂಬುದನ್ನು ನೀನೇನು ಬಲ್ಲೆ. '

ಮಾಧವನ ವೇಷವು ಜಾಗಿರದಾರರು ಇಂಗ್ಲಂಡದಿಂದ ಬಂದು ತೊಡು ತ್ತಿದ್ದ ವೇಷದ ವರ್ಣನೆಯೆ: 'ತಲೆಕೂದಲು ಬೈತಲ ತೆಗೆದು ಬಾಚಿಕೊಂಡಿ ದ್ದಾನೆ. ತೆಳುವಾದ ದೋತರವನ್ನು ಉಟ್ಟು, ಶರ್ಟು ಕಾಲರುಗಳನ್ನು ಹಾಕಿಕೊಂಡು, ಗಿಡ್ಡವಾದ ಕೋಟನ್ನು ತೊಟ್ಟಿದ್ದಾನೆ. ಕಾಲೊಳಗೆ ಹೊಸ ಮಾದರಿಯ ಮೆಟ್ಟುಗಳು; ಮೀಸೆಗಳನ್ನು ಬೆಳಿಸಿಲ್ಲ. '

ಮುಂಬಯಿಯಲ್ಲಿ ಮೂರು ತಿಂಗಳು ಕಳೆದಾಗಿನ ತಮ್ಮ ಸ್ವಭಾವದ ಚಿತ್ರವನ್ನೆ ನಾಟಕದಲ್ಲಿ ಮೂಡಿಸಿದ್ದಾರೆ:

ಮಾಧವ: ' ನಾನು ಮೊದಲಿನಂತೆ ಸರಳನೇನೊ ನಿಜ; ಆದರೆ ಮೊದಲಿನ ಕೋಮಲತೆ ನನ್ನಲ್ಲಿಲ್ಲ. ಮೊದಲಿನಂತೆ ಹಟವಾದಿ? ಛೇ, ನಾನು ಮೊದಲು ಹಟವಾದಿಯಿದ್ದಿಲ್ಲ; ಛಲವಾದಿಯಿದ್ದೆ; ಈಗ ಹಟವಾದಿ ಯಾಗಿರುವೆ. ನಾನು ಕೇವಲ ಮೊದಲಿನಂತೆಯೆ ಇದ್ದರೆ ಏನೂ ಕಲಿತು ಬಂದಿಲ್ಲವೆಂದು ಅರ್ಥವಾಗುತ್ತಿದ್ದಿಲ್ಲವೆ? ಹುಟ್ಟನಿಂದ ಸಾವಿನವರೆಗೆ ಒಂದೇ ಸ್ವಭಾವವಿದ್ದರೆ ಅದೇನು ಸದ್ಗುಣವೆಂದು ತಿಳಿದಿರುವೆಯಾ ? '

* * *

ಮನೋಹರ: ಮಾಧವಾ! ನೀನು ವೈದಿಕಬ್ರಾಹ್ಮಣನ ಮಗನಿರ ಬೇಕೆಂದು ನನಗೆ ಸಂಶಯ ಬರುತ್ತದೆ.

* * *

ಮನೋಹರ: ಮಾಧವಾ! ನಿದ್ದೆಯಲ್ಲಿ ಎದ್ದು ತಿರುಗಾಡುವ ಚಟ ವಿದೆಯೇನು ನಿನಗೆ?

* * *

ಮನೋಹರ: ಮಾಧವಾ! ನಿನ್ನ ಮನೆಯಲ್ಲಿಯೇ ನೀನು ಅಯೋಗ್ಯ ನೆಂದು ಇವರು ಹೇಳುವುದಿಲ್ಲವೆ? ನಿನ್ನ ಸಮಾಜಕ್ಕೆ ನೀನು ಕಲಂಕ ನೆಂದು ಇವರು ಬೊಗಳುವುದಿಲ್ಲವೆ? ನಿನ್ನ ಧರ್ಮಕ್ಕೆ ನೀನು ಪಾಪಿ ಯೆಂದು ಇವರು ಬಯಲಡಂಗುರ ಹೊಡೆಯುವದಿಲ್ಲವೆ?'

* * *

ಪರದೇಶದಿಂದ ಬಂದು ನಮ್ಮ ಸಮಾಜದಲ್ಲಿ ಅನುಭವಿಸಿ, ಅನಿಸಿ ಕೊಂಡು ಅರಗಿಸಿಕೊಂಡುದನ್ನು ನಾಟಕ ರೂಪದಲ್ಲಿ ಇಳಿಸಿದುದರಿಂದ ಅವರ ಜೀವನದ ಸಂನಿವೇಶಗಳು ಹೆಚ್ಚಾಗಿವೆ. ಕನ್ನಡ ಸಾಹಿತ್ಯದ ದುರ್ದೆಸೆಯನ್ನು ಬಣ್ಣಿಸುವುದು ಈ ಮಾತು. ಕೊಂಕುಮಾತಿನ ಕಟುವಾದ ಏಟಿನ ಮಾದರಿ ಯೊಂದು:

ಮನೋಹರ: 'ಇಂಗ್ಲಂಡದ ಇತಿಹಾಸ ಕೇಳು, ಕನ್ನಡದಲ್ಲಿ ಸಿಗು ವುದು. ದೊಡ್ಡ ಸಿಕಂದರನು ಮರಣಹೊಂದಿದ ತಾರೀಖಿನ ತೊಡಕೆನ್ನು ವಿಯಾ? ಅದನ್ನಾದರೂ ಕನ್ನಡ ಇತಿಹಾಸದಲ್ಲಿ ಸಮರ್ಪಕವಾಗಿ ಬಿಡಿಸಿದೆ. ಶಿವಾಜಿಯ ಶೌರ್ಯದ ವರ್ಣನೆಬೇಕೆ? ಅದೂ ಕನ್ನಡದಲ್ಲಿ ದೊರೆವುದು. ಇಂತಹದನ್ನು ಬಿಟ್ಟು ಕನ್ನಡ ವಾಙ್ಮಯವು ಕರ್ನಾಟಕದ ಗತವೈಭವ, ಕರ್ನಾಟಕದ ವೀರರ ಚರಿತ್ರೆ, ಇಂತಹ ಐಹಿಕ ಸಂಗತಿಗಳ ಮೇಲೆ ವೆಚ್ಚ ಮಾಡಬಹುದೆ? ಮಾಧವಾ! ಕನ್ನಡಿಗರು ಕನ್ನಡದಲ್ಲಿ ಬರೆದರೆ ಅಲ್ಲವೆ ಕರ್ನಾಟಕದ ಇತಿಹಾಸವನ್ನು ಬರೆವುದು! ಆದರೆ ಕನ್ನಡಿಗರು ವೈಭವ ಶಾಲಿಗಳು. ಕನ್ನಡಿಗರ ಸಲುವಾಗಿ ದುಡಿಯಲು ಬೇರೆ ಜನರು ಇರಲು ಕನ್ನಡಿಗರು ತಾವಾಗಿಯೆ ಏಕೆ ದುಡಿಯಬೇಕು? ಸಂಸ್ಕೃತದ ಬ್ರಾಹ್ಮಣರು, ಪಾಲಿಯ ಬುದ್ಧರು, ಪ್ರಾಕೃತದ ಜೈನರು, ಇವರೆ ಕನ್ನಡದಲ್ಲಿ ಬರೆದವರು.'

ಮತ್ತೊಂದು :

ಶಿವಪ್ಪ : ಗೊತ್ತೈತ್ರಿ, ಈ ಶಿವಪ್ಪಗೆಲ್ಲಾ. ಗಂಡಸುಮಗ, ಒಲ್ಲ್ಯನ್ನೋದೆ ಛಂದಾ; ಸಿಟ್ಟಗೇಳಬೇಕ್; ಮಾವನ ಕಾಡಬೇಕ್; ಹೆಚ್ಚರೊಕ್ಕಾ ಬೇಡ ಬೇಕ್; ಝುಗಳಾ ತಗೀಬೇಕ್; ಇದೇನ್ ಬರಾಮಣ ಮಂದಿಗೆ ನಾ ಹೇಳೋ ಮಾತೇನ್ರಿ ? '

* * *

ನೀರು ಮೊದಲು ಒಳ್ಳೆಯದಿದ್ದರೂ ನಿಂತಲ್ಲಿ ನಿಂತರೆ ಕೊಳೆಯುವುದು; ಅದು ಹರಿಯುತಿರಬೇಕು. ನಮ್ಮ ಸಮಾಜವು ನಿಂತ ನೀರಿನಂತೆಯಾಗಿದೆ. 'ಬೆಳೆಯುವ ಸಮಾಜವನ್ನು ಬೆಳಕಿನಲ್ಲಿಡದೆ ಹೋದರೆ ಏನಾಗುವುದು ? ಅದನ್ನು ವೇದ–ಶಾಸ್ತ್ರ–ಸ್ಮೃತಿಗಳ ಕಾವಲಿನಲ್ಲಿಟ್ಟರೆ ಅದನ್ನೇನು ಕಾಪಾಡಿ ದಂತಾಗುವದೆ ? ' ಕುಂಬಳಕಾಯಿಗೆ ಕಬ್ಬಿಣದ ಕಟ್ಟು ಕೊಟ್ಟರೆ ಅದು ಕೊಳೆಯುವುದಲ್ಲದೆ ಬಲುಹಾಗಬಲ್ಲದೆ ? ' ಧರ್ಮದ ಕಟ್ಟು ಹಾಕುವರು ವ್ಯವ ಹಾರಕ್ಕೆ. ವ್ಯವಹಾರ ಬೇರೆ, ಧರ್ಮ ಬೇರೆ. ಯಾವುದೊಂದು ಹಂಚಿಕೆಯಿಂದ ಹೊಟ್ಟೆತುಂಬಿಕೊಳ್ಳುವುದು ವ್ಯವಹಾರ; ವ್ಯವಹಾರದ ಹೆಸರಿನಿಂದ ಮಾಡಿದ ಪಾತಕಗಳನ್ನು ಮುಚ್ಚಿ ಸಮಾಧಾನ ಮಾಡಿಕೊಳ್ಳುವ ಯುಕ್ತಿ, ಧರ್ಮ. '

ಉದರ ವೈರಾಗ್ಯವು ಆಗಿನ ಸಮಾಜದ ವಾಸ್ತವ ಚಿತ್ರವು. 'ಇದೇ ಸಂಸಾರ'ದಿಂದ 'ಉದರವೈರಾಗ್ಯ'ಕ್ಕೆ ಎಂತಹ ದೊಡ್ಡ ಮುಂದಡಿ. ಅದೇ ಬೆಳವಣಿಗೆಯ ಚಿನ್ಹ.

ಓದುವುದರಿಂದ, ಬರೆಯುವುದರಿಂದ ಮನಸ್ಸಿಗೇನೊ ಉಲ್ಲಾಸ. ಈ ಉಲ್ಲಾಸವೆ ಆ ಕಷ್ಟದಿನಗಳಲ್ಲಿ ಬದುಕಿಸಲು ಸಹಕಾರಿಯಾಯಿತು. ಏನಾದರೂ ಹೊಟ್ಟೆಯ ಚಿಂತೆ ತಪ್ಪೀತೆ. ? ಉಪವಾಸ ಬೀಳಬಹುದು: ಎಂಟುದಿನ–ಹತ್ತು ದಿನ-ಹದಿನೈದು ದಿನ ! ಆದರೆ ಹಾಗೆಯೆ ಕೊನೆಯವರೆಗೆ ಊಟವಿಲ್ಲದೆ ಇರುವುದಾಗುವುದೆ ? ಸವಿಯೂಟ ಸಿಕ್ಕದಿದ್ದರೆ ಸುಖವಾಗಲಿಕ್ಕಿಲ್ಲ; ಆದರೆ ಬದುಕಲು ಸಾದಾ ಊಟವಾದರೂ ಬೇಡವೆ ? ಇತ್ತ ದೈಹಿಕ ಹಸಿವೆ, ಅತ್ತ ಸಾಲದ ಭಾರ. ಕಡಿಮೆತಿಂದು–ಉಪವಾಸಬಿದ್ದು ಬದುಕಬಹುದು. ಆದರೆ ಸಾಲದ ಭಾರವು ಕುಗ್ಗಿಸುತ್ತಿದ್ದಿತು. ಮನವು ತಲ್ಲಣಗೊಳ್ಳುತ್ತಿತ್ತು. ಅಲ್ಲಲ್ಲಿ ಅರ್ಜಿಹಾಕಲು ಹರಿದಾಡುತ್ತಿತ್ತು ಮನವು.

ಚಳಿಗಾಲದ ರಜೆಗೆ ಗೆಳೆಯರು ತಮ್ಮ ತಮ್ಮ ಮನೆಗೆ – ಊರಿಗೆ ಹೋದರು. ಜಾಗಿರದಾರರು ಮತ್ತಿಷ್ಟು ಏಕಾಂಗಿಯಾದರು. ಈ ರಜೆಯ ಅವಧಿಯಲ್ಲಿ ಯಾರಾದರೂ ಇಂಗ್ಲಿಶ ಕಲಿಯುವವರಿದ್ದರೆ ಕಲಿಸಿ, ಕೆಲವು ದುಡ್ಡು ಗಳಿಸಬೇಕು. ಅಷ್ಟೆ ಮುಂದೆ ಸಾಗಲು ಅನುಕೂಲ, ಎಂದು ಮನದಲ್ಲಿ ಅರೆದಾಡಿ, ಕೊನೆಗೆ ನಿರ್ಧಾರಮಾಡಿದರು: 'ಇಲ್ಲಿ ಉತ್ತಮವಾಗಿ ಇಂಗ್ಲಿಶ ಕಲಿಸಲ್ಪಡುತ್ತದೆ; ವಿದ್ಯಾರ್ಥಿಗಳು ಸಮಕ್ಷಮ ಭೇಟಿಯಾಗಬೇಕು' ಎಂದು ಜಾಹೀರಾತು ಕೊಟ್ಟು ಬಂದರು. ಜಾಹೀರಾತು ಕೊಡುವಾಗ ಅದು ತರ ಬಹುದಾದ ದುಡ್ಡಿನ ಬಗ್ಗೆ ವಿಚಾರಮಾಡುತ್ತಿದ್ದುದರಿಂದ ಒಳ್ಳೆ ಮೋಜೆನಿಸಿತ್ತು. 'ಟಾಯಿಮ್ಸ ಆಫ್ ಇಂಡಿಯಾ' ಮುದ್ರಾಲಯದಿಂದ ತಿರುಗಿ ಮನೆಗೆ ಸಾಗುವಾಗ ತಲೆಯಲ್ಲಿ ಏನೇನೊ ವಿಚಾರಗಳು ಸುಳಿಯತೊಡಗಿದುವು. 'ಏನಾಯಿತಲ್ಲ! ಎಂಥ ವಿದ್ಯಾರ್ಥಿಗಳು ಬರುವರೊ? ಇಂಥ ಕೆಲಸ ಎಂದೂ ಮಾಡಿಲ್ಲ. ಬಂದವರಿಗೆ ಫೀ ಎಷ್ಟು ಹೇಳಬೇಕು? ಫೀ ಗುಣಾಕಾರ ಹಾಕುತ್ತ ಮನದಲ್ಲಿ ನಗುತ್ತ ಮನೆಯನ್ನು ಮುಟ್ಟಿದರು. ಆದರೆ ವಿಚಾರವು ಬೆನ್ನು ಬಿಡಲಿಲ್ಲ. ಜಾಹೀರಾತಿನ ಬಗೆಗೆ ಅದೇನೊ ಹೊಸವಿಚಾರ ಬರತೊಡಗಿತು. ಇಂಗ್ಲಂಡಕ್ಕೆ ಹೋಗಿ ಬಂದು 'ಎಂಥ ಕೆಲಸ ಮಾಡಬೇಕಾಯಿತಲ್ಲ! ಅದೂ ದುಡ್ಡಿನ ಸಲುವಾಗಿ? ತಿರುಗಿ ಹೋಗಿ ಜಾಹೀರಾತು ತೆಗೆಯಿಸಿ ಬರಬೇಕು ಎನ್ನಿಸಿತು. ಸಂಜೆಯಾಗಿತ್ತು; ಕಚೇರಿ ಮುಗಿದಿತ್ತು. ಮರುದಿನ ಪೇಪರದಲ್ಲಿ ಬಂದು ಬಿಡುವುದು. ಕೊನೆಗೆ ಜಾಹೀರಾತಿನ ವಿಷಯವು ಹೇಯವೆನಿಸ ತೊಡಗಿತು. ತಲೆ ದಿಮ್ಮೆನ್ನತೊಡಗಿತ್ತು. ಸಿಗರೇಟು 'ಸೇದುತ್ತ ಹಾಗೆಯೆ ಮಂಚದ ಮೇಲೆ ಬಿದ್ದುಕೊಂಡರು; ವೇಳೆಯು ಸಾಗುತ್ತಾ ಇತ್ತು. ವಿಚಾರ ನಿಂತಿತ್ತೆ? ಇಲ್ಲ. ಅದರ ವೇಗವೂ ಹೆಚ್ಚಿತ್ತು.

ರಾತ್ರೆ ಒಂಬತ್ತು ಗಂಟೆ. ತಲೆಯು ಕಾದ ಹಾಗೆ ಭಾಸವಾಗತೊಡಗಿತು. ತಣ್ಣನ್ನ ಗಾಳಿಯಲ್ಲಿ ಸುಳಿದಾಡಿ ತಲೆಯನ್ನು ಶಾಂತಮಾಡಿಕೊಂಡು ಬರಬೇಕೆನ್ನಿಸಿತು. ಚಟ್ಟನೆ ಎದ್ದರು. ಕೆಳಗಿಳಿದು ಹೊರಟರು. ಎಲ್ಲಿಗೆ ಹೊರಟಿದ್ದರೊ ಅವರಿಗೆಯೆ ತಿಳಿಯದು. ಚೌಪಾಟಿಯ ಬೀದಿ ಹಿಂದುಳಿಯಿತು. 'ಕೆನಡಿ ಪೂಲು' ಬಂತು. ಅಲ್ಲಿ ಒಂದು ಸಣ್ಣ ಸಂದಿ. ಅದು ಕಾಂಗ್ರೆಸ್ ಭವನದ ಕಡೆಗೆ ಸಾಗುವುದು. ಅದರ ಮಾರ್ಗವಾಗಿ ಕೆಲವೇಳೆ ಸಾಗಿದರು.

ತಟ್ಟನೆ ನಿಂತರು. ಎಲ್ಲಿಂದಲೊ ಸಂಗೀತವು ಕೇಳಬರುತ್ತಿತ್ತು. ಅದರ ಇಂ
ತಡೆಯಿತು ಇವರನ್ನು. ಎಲ್ಲಿಂದ ಬರುವುದೆಂದು ನೋಡಬೇಕೆಂದು ಕುತೂ
ಹಲ; ಸಾಗಿದರು. ಅದೊಂದು ಮಹಡಿಯ ಮನೆ. ದೀಪಗಳು ಉರಿಯ
ತ್ತಿವೆ. ಯಾರ ಮನೆಯಿದ್ದೀತೆಂಬ ವಿಚಾರವಿಲ್ಲದಲೆ ಹೊಕ್ಕರು. ಮೇ
ಬಂದಾಗ ಮುದುಕಿಯೊಬ್ಬಳು ಸಂಧಿಸಿದಳು.

ಆ ಮುದುಕಿಗೆ ಇವರ ವೇಷವನ್ನು ನೋಡಿ ಅಚ್ಚರಿಯಾಗಿರಬಹುದ
ಅವರಿಗೇನು? ವೇಷದ ಮೇಲೆಯೆ ಮೋಹವಿಲ್ಲ. ಇವರನ್ನು ಒಳಗೆ ಕರೆ
ಕುಳ್ಳಿರಿಸಿದಳು. ತಾನು ಒಳಗೆ ಹೋದಳು. ಹಾಡು ನಿಂತಿತು. ಆಗ ಜಾಗಿ
ದಾರರಿಗೆ ಎಚ್ಚರು ಬಂತು. ಎದುರು ನೋಡುತ್ತಾರೆ. ಹರೆಯದ ಚೆಲು
ಯೊಬ್ಬಳು; ಕಣ್ಣು ಅವಳನ್ನು ಬಿಟ್ಟು ಹೊರಳಲಾರದಾದುವು. ರೂಪ
ಮೋಹಕವೆನಿಸಿತು. ಇವೆಲ್ಲವೂ ಮಧ್ಯಾಹ್ನದ ಸಂಗತಿಗೆ—ವಿಚಾರಕ್ಕೆ ಎ
ದೊಯ್ದುವು. 'ಇವಳು, ರೂಪ-ಯೌವನವನ್ನು ಮಾರಿಕೊಂಡು ಉಪಜೀವಿ
ತ್ತಿದ್ದಾಳೆ. ನಾನು, ನನ್ನ ಯೌವನ—ಬುದ್ಧಿಯನ್ನು ಮಾರಲು ಇಂದೆಯೆ ಹ
ಬಂದಿರುವೆನಲ್ಲ! ಇವಳದು ಪ್ರಾಮಾಣಿಕ ರೀತಿಯಿಂದ ಸಾಗಿದ ಉದ್ಯೋ
ನನ್ನದು ಮನಸ್ಸಿಲ್ಲದುದು; ನಿರ್ವಾಹವಿಲ್ಲದುದು. ನಾನು ಅಪ್ರಾಮಾಣಿ
ಇದೇ ಭೇದ. ನಾನೂ ಸೂಳೆಗಾರಿಕೆ ಮಾಡಿದಂತಾಗುವುದಿಲ್ಲವೆ, ಒಳ್ಳೆಂ
ಹೆಸರಿನಲ್ಲಿ ? ' ............ ಇನ್ನೂ ಏನೇನೊ ವಿಚಾರ ಸಾಗಬಹುದಾಗಿತ್ತು
ಆದರೆ ಆ ಚೆನ್ನೆಯು 'ಏನು ಬೇಕಿತ್ತು' ಎಂದಳು. 'ಏನಿಲ್ಲ ! ನಾನೂ ನಿವ
ಜಾತಿಯವನೆ! ಅದಕ್ಕೆ ಬಂದಿದ್ದೆ' ಎಂದರು. ಅವಳಿಗೆ ಇವರ ಮಾತಿ
ಮರ್ಮವು ತಿಳಿಯಿತೊ ಇಲ್ಲವೊ! ನಸು ನಕ್ಕಳು. ಎದುರಿನ ಆಸನದಮೇ
ತಾನೂ ಕುಳಿತು, ಆ ಮುದುಕಿಯ ಕೈಯಿಂದ ಹಾಲು, ಬಾಳೆಹಣ್ಣು ಸಕ್ಕ
ತರಿಸಿಕೊಟ್ಟಳು. ಜಾತಿ ಬಾಂಧವ್ಯ ಬೆಳೆದ ಮೇಲೆ ಉಪಹಾರ ಮಾಡಲು ಏ
ಆತಂಕ? ಅಲ್ಲದೆ ಹೊಟ್ಟೆಯು ಯಾವಾಗಲೂ ಬರಿದು; ತಲೆ ಕಿಕ್ಕಿರಿದುದ
ಅವಳೊಡನೆ ಮಾತನಾಡುತ್ತ, ಹಣ್ಣು ತಿಂದು ಹಾಲುಕುಡಿದು ತೇಗಿದರ
ಏನೊ ಹೊಳೆದಂತಾಗಲು........ಎದ್ದರು. ಅವಳಿಗೆ ಅಚ್ಚರಿಯಾಗಿದ್ದರ
ಅಸ್ವಾಭಾವಿಕವೆನಿಸಲಿಲ್ಲ.

ಅವಳು ಒಬ್ಬ ಸೂಳೆ. ಧನಿಕ ಸಾಹುಕಾರನ ಆಸರದಲ್ಲಿದ್ದವಳ

ಎಂಬುದು ಮಾತಿನಲ್ಲಿ ತಿಳಿದು ಬಂತು. ಅವಳ ಮನೆಯನ್ನೇನೊ ಬಿಟ್ಟು ಬಂದರು. ಆದರೆ ಅವಳ ಚೆಲುವಾದ ಮೊಗವು ಮನದಲ್ಲಿ ಮುದ್ರೆಯನ್ನೊತ್ತಿತ್ತು; ಅದು ಸರಿಯಲೆ ಇಲ್ಲ.

ಆ ಚೆಲುವೊಗದ ಸೆಳೆದಾಟದಲ್ಲಿದ್ದಾಗ ಸಂಧಿಸಿದ ಗೆಳೆಯನೊಬ್ಬ: 'ಇಲ್ಲ್ಯಾಕೊ!....ಅದೂ ಈಗ' ಎಂದ; ನಡೆದ ಸಂಗತಿಯನ್ನು ಹೇಳಿದರು. 'ಅಂತೂ ಪಾರಾಗಿ ಬಂದುದು ಹೆಚ್ಚಿನದು' ಎಂದನು. 'ಪಾರಾಗಲು ಏನು ?— ಅವಳು ಬಲು ಚೆಲುವೆ ಇದ್ದಳು, ನೋಡು! ಆ ಚೆಲುವೊಗದ ಮರೆಗೆ ದುರುಳತನವಿರುವುದೆಂದು ತಿಳಿಯುವುದೆ ದುರುಳತನವೆನ್ನಿಸುವುದು' ಎಂದರು. ಅವನು ಸಿಗರೇಟು ಕೊಟ್ಟ. ಹೊತ್ತಿಸಿದರು; 'ಗುಡ್ ನಾಯಿಟ್' ಎಂದು ಅವನನ್ನು ಬೀಳ್ಕೊಟ್ಟು ಭರದಿಂದ ಕೋಣೆಯ ಕಡೆಗೆ ಸಾಗಿದರು.

ಅಂದು ರಾತ್ರಿ 'ಮುಕ್ಕಣ್ಣ-ವಿರಾಟಪುರುಷ'ದ ಹಂದರವು ಸಿದ್ಧವಾಯಿತು. ಒಬ್ಬ ಕವಿಗೂ ಸೂಳೆಗೂ ಭೇದವೇನು ? ಕವಿಯ ಬುದ್ಧಿ ಹೆರವರ ಸುಖಕ್ಕೆ; ಸೂಳೆಯ ಸೌಂದರ್ಯ ಹೆರವರ ವಿಹಾರಕ್ಕಾಗಿ: ಎಂಬ ಅಡಿಗಲ್ಲಿನ ಮೇಲೆಯೆ ಎದ್ದಿದೆ ಈ ನಾಟಕವು. ಅಂದು ತಾವು ಕಂಡುದು ತಮ್ಮ ಬಾಹ್ಯ— ಎರಡು ಕಣ್ಣುಗಳಿಂದಲ್ಲವೆಂದೆನಿಸಿತು. ಅಂತರಂಗದಲ್ಲಿ ಹೊಳೆದುದು. ಅಲ್ಲಿ ಒಂದು ಕಣ್ಣಿರಬೇಕು. ಅದು ಮಾನವನ ಮೂರನೆಯ ಕಣ್ಣು. ಕವಿಯ ಕಣ್ಣು. ' ಈ ಎರಡು ಕಣ್ಣುಗಳಿಂದ ಹಿಂದೆಯಾಗಲಿ, ಎಡಬಲವಾಗಲಿ, ಸ್ವಾಭಾವಿಕವಾಗಿ ನೋಡಲು ಬರುವುದಿಲ್ಲ. ಒಂದೆವೇಳೆಗೆ ಎಲ್ಲಕಡೆಯೂ ನೋಡುವ ಸಾಮರ್ಥ್ಯವುಳ್ಳ ಕಣ್ಣೆಂದರೆ ಮೂರನೆಯ ಕಣ್ಣು. '

' ವಿರಾಟಪುರುಷ—ಮುಕ್ಕಣ್ಣ 'ನ ದೃಷ್ಟಿ ವಿಶಾಲವಾದುದು. ಅದಕ್ಕೆಯೆ ಮುನ್ನುಡಿಯಾದರೂ ವಿಸ್ತೃತವಾಗಿದೆ. ಅದರಲ್ಲಿ ತಮ್ಮ 'ಕವಿ'ಯ ಕಲ್ಪನೆಯನ್ನು ಮಂಡಿಸಿದ್ದಾರೆ: ' ಈ ಮೂರನೆಯ ಕಣ್ಣಿನ ಉಪಯೋಗ ಮಾಡಿಕೊಳ್ಳುವವನೆ ಕವಿಯು. ಈ ಕಣ್ಣಿನ ಉಪಯೋಗ ಮಾಡಿಕೊಳ್ಳುವವರು ವಿರಳ; ಇಲ್ಲವೇ ಇಲ್ಲವೆಂದರೆ ಅತಿಶಯೋಕ್ತಿಯಾಗದು. ಎಲ್ಲರೂ ಎಲ್ಲ ಅವಯವಗಳ ಉಪಯೋಗವನ್ನು ಮಾಡುವ ಪರಿಪಾಠವು ಈ ಜಗತ್ತಿನಲ್ಲಿಲ್ಲ. ಕೆಲವರು ಕೇವಲ ನಡೆಯುವರು; ಕೆಲವರು ಕೇವಲ ದುಡಿಯುವರು; ಬೇರೆ

ಕೆಲರು ಹೊಟ್ಟೆ ತುಂಬಿಕೊಳ್ಳುವರು. ದುಡಿಯುವವರಿಗೆ ಹಸಿವೆಯಿಲ್ಲ; ಹಸಿದವರಿಗೆ ಊಟವಿಲ್ಲ; ಉಣ್ಣುವವರಿಗೆ ದುಡಿತವಿಲ್ಲ. ಈ ಶ್ರಮ ವಿಭಾಗದಿಂದಲೆ ಜಗತ್ತು ನಡೆದಿದೆ. ಇದೇ ತತ್ವದ ಮೇರೆಗೆ ವಿರ್‍ಾಟಪುರುಷನ ಬೇರೆ ಬೇರೆ ಅವಯವಗಳಿಂದ ಬೇರೆ ಬೇರೆ ಜಾತಿಗಳು ಹುಟ್ಟಿರಬಹುದು. ಏನೆ ಇರಲಿ; ಒಂದೊಂದು ಅವಯವವನ್ನು ಉಪಯೋಗಿಸುವ ರೂಢಿಯಿದ್ದ ಈ ಜಗತ್ತಿನಲ್ಲಿ ಮೂರನೆಯ ಕಣ್ಣಿನಿಂದ ಉಪಯೋಗ ಮಾಡಬೇಕಾದ ವಿಶಿಷ್ಟ ಜಾತಿಯೆ ಇರುವುದೆಂದು ಹೇಳುವರು. ಪುರಾಣದಲ್ಲಿ ಶಿವನು ಮುಕ್ಕಣ್ಣ; ಜಗತ್ತಿನಲ್ಲಿ ಕವಿಯು ಮುಕ್ಕಣ್ಣ.'

ಹಿಂದಿನವರು ಸ್ತ್ರೀಯೆಂದರೇನೆಂದುಕೊಂಡಿದ್ದರು ? 'ಸ್ತ್ರೀಯೆಂದರೆ ಸೌಂದರ್ಯದ ರಾಶಿ, ಬ್ರಹ್ಮನ ಸೃಷ್ಟಿಕೌಶಲ್ಯದ ಪರಮಾವಧಿ, ಜಗದ ಕಣ್ಣಿನ ಸುಗ್ಗಿ, ಮನದ ಮೆಚ್ಚು, ಪುರುಷರ ಮನದ ಗೊಂಬೆ, ಮನುಷ್ಯನಿಗೆ ಸುಖವನ್ನು ತಂದುಕೊಡುವ ಗುಣಸಮುದಾಯವೆ ಸ್ತ್ರೀ' ಹೀಗೆ ಎರಡು ಕಣ್ಣುಗಳಿಗೆ ಕಾಣಿಸುವುದನ್ನಷ್ಟೆ ಬೇರೆ ಬೇರೆ ಶಬ್ದಗಳಿಂದ ಹಾಡಿದ್ದಾರೆ. ತಮ್ಮ ಮೂರನೆಯ ಕಣ್ಣನ್ನು ತೆರೆದು ಸ್ತ್ರೀಯಳಿಗಾದರೂ ಮನಸ್ಸು, ಬುದ್ಧಿ, ಸಾಹಸಗಳಿರುವುವೆಂಬುದನ್ನು ನೋಡಿದಂತೆಯೆ ತೋರುವುದಿಲ್ಲ.' ನಮ್ಮ ಸಮಾಜದಲ್ಲಿ ಸ್ತ್ರೀಯ ಸ್ಥಿತಿಯು ಹೀಗಾಗಲಿಕ್ಕೆ ಕಾರಣವೇನು ? 'ಅವರನ್ನು ಈ ಸ್ಥಿತಿಯಲ್ಲಿ ಉಳಿಸಿದುದರ ದೂರು, ಕಲಿತವರೆನಿಸಿಕೊಳ್ಳುವವರ ಮೇಲೆಯೆ. ತಾವು ಕಲಿಸಲಿಲ್ಲ; ಅವರನ್ನು ಕಲಿಯಗೊಡಲಿಲ್ಲ; ತಾವು ಕಲಿತದ್ದನ್ನು ಅವರಿಗೆ ತಿಳುಹಿಸಲಿಲ್ಲ. ತಿಳಿದುಕೊಳ್ಳಲು ಅವರಿಗೆ ಅವಕಾಶಕೊಡಲಿಲ್ಲ. ಇಷ್ಟೇ ಅಲ್ಲ, ಹೆಂಗಸರ ಹೇಡಿತನವನ್ನೂ ತಿಳಿಗೇಡಿತನವನ್ನೂ ಹಾಡಿ ಹರಸಿದರು ಹಿಂದಿನ ಕವಿಗಳು. ಈ ನಿರವಧಿ ದಾಸ್ಯದಿಂದ ಸ್ತ್ರೀಯು ತನ್ನ ಸ್ತ್ರೀತ್ವದ ಭಾವನೆಯನ್ನು ಮರೆತಿದ್ದಾಳೆ.'

'ಇದಕ್ಕೆ ಕಾರಣ ನಮ್ಮ ಸಮಾಜ. ನಮ್ಮ ಹಿರಿಯರು. ನಮ್ಮ ತತ್ತ್ವಜ್ಞಾನ: ಮಾತುಮಾತಿಗೆ, 'ಆರೇನು ಮಾಡುವರು ಆರಿಂದಲೇನಹುದು; ಪೂರ್ವಜನ್ಮದ ಕರ್ಮ ವಿಧಿ ಬೆನ್ನು ಬಿಡದು' ಎಂದೂ 'ನಾಲ್ಕೊಪ್ಪತ್ತಿನ ಸಂಸಾರ; ದುಃಖಮಯ ಸಂಸಾರ; ಈ ಕ್ಷಣಿಕ ಸಂಸಾರದ ಬಗ್ಗೆ ಹೆಚ್ಚಿನ ವಿಚಾರವೇಕೆ' ಎಂದೂ ಇಲ್ಲಿಯ ಸ್ಥಿತಿಯನ್ನು ಅನಿವಾರ್ಯವೆಂದೂ ತಲೆಯಲ್ಲಿ

ತುಂಬಿಕೊಂಡು ತೂಗಾಡುವ ಜನರಿಗೆ ಸುಧಾರಣೆಯು ಹೊಳೆಯುವುದೆಂತು ? 'ನಿಜವಿದ್ದ ಸಂಗತಿಯೆಂದರೆ ನಮ್ಮಲ್ಲಿ ಸಹನಶೀಲತೆಯಿಲ್ಲ; ಮನೋಧೈರ್ಯವಿಲ್ಲ; ಆತ್ಮವಿಶ್ವಾಸವಿಲ್ಲ. ಎರಡನೆಯವರ ಅಜ್ಞಾನದಿಂದ ಹೊಟ್ಟೆತುಂಬಿಕೊಳ್ಳುತ್ತ ಬಂದವರಿಗೆ ತಮ್ಮಂತೆ ಮಿಕ್ಕವರು ಜ್ಞಾನವನ್ನು ದೊರಕಿಸಿಕೊಳ್ಳುವುದು ಸಹನವಾಗುವುದಿಲ್ಲ.' ಅವರು ಅಜ್ಞಾನದಲ್ಲಿ ಕೊಳೆಯುವುದನ್ನು ನೋಡಿಯೆ ಸುಖಬಡುವರು.

'ಸಮಾಜದ ಈ ಸ್ಥಿತಿಯನ್ನು ಹೋಗಲಾಡಿಸುವುದಕ್ಕೆ ಒಂದೆ ಒಂದು ಸೂತ್ರವೆಂದರೆ ಸ್ವಾರ್ಥಸೂತ್ರ. 'ನಾನು ನನ್ನದು ಎಂಬ ತಿಳಿವಳಿಕೆಯ ಅಭಿಮಾನವನ್ನು ಬೆಳೆಯಿಸಬೇಕು. ಈ 'ನಾನನ್ನಿಕೆ'ಯೆ ಪರಮಾರ್ಥದ ಮೂಲಮಂತ್ರ. ತನ್ನನ್ನು ತಾನು ತಿಳಿದುಕೊಳ್ಳದವನು ಎರಡನೆಯವರನ್ನು ತಿಳಿದುಕೊಳ್ಳುವ ಹವ್ಯಾಸಕ್ಕೆ ಬೀಳಬಹುದೆ ? ತನ್ನ ಸುಖದುಃಖದ ಬೀಜವನ್ನು ಬಲ್ಲವನಿಗೆ ಎರಡನೆಯವರ ಸುಖದುಃಖದ ಬೀಜವು ತಿಳಿಯದೆ ಹೋಗುವುದೆ ? ಎರಡನೆಯವರಿಗಾದ ದುಃಖವು ತನಗೆ ಆಗಿದೆಯೆಂದು ತಿಳಿದುಕೊಂಡವನಿಂದ ಪರೋಪಕಾರವಾಗುವುದಲ್ಲದೆ ದೇವರ ಹೆದರಿಕೆಯಿಂದ, ಧರ್ಮದ ಬೆದರಿಕೆಯಿಂದ, ಪುರಾಣಪಠಣದಿಂದ ಆಗದು ?

'ತಾನಾಗಿ ಬಂದ ದು:ಖವೆಲ್ಲ ಪಾಪ; ತಾನಾಗಿಯೆ ತಂದುಕೊಂಡ ದುಃಖವೆಲ್ಲ ಅಪರಾಧ. ಉತ್ಸಾಹವೇ ಪುಣ್ಯ-ಸಾಹಸವೆ ಮೋಕ್ಷ.'

ಈ ಬಗೆಯಾದ ವಿಚಾರವನ್ನು ಮುನ್ನುಡಿಯಲ್ಲಿ ಮಂಡಿಸಿ, ಅದನ್ನೆ ಪಾತ್ರ-ಸಂಭಾಷಣೆಯ ರೀತಿಯಲ್ಲಿ ನಾಟಕದಲ್ಲಿ ಮನಹಿಡಿಯುವಂತೆ ಚಿತ್ರಿಸಿದ್ದಾರೆ.

ರಾಮರಾಯ: ಧನಿಕ ಜಮೀನದಾರ. ಧನಿಕನಾದುದರಿಂದ ಅನೇಕರಿಗೆ ಅವನ ಆಸರವಿದೆ. ಹೊಟ್ಟೆಯ ಪಾಡಿಗಾಗಿ ಎಲ್ಲರೂ ಇವನ ಕಡೆಗೆ ನೋಡುವರು. ರಾಮರಾಯನ ವಿಲಾಸಕ್ಕಾಗಿ ಮನೆಯಲ್ಲಿ ಹಾಡು-ಕುಣಿತಕ್ಕಾಗಿ ವೇಶ್ಯೆಯೊಬ್ಬಳು: ಕಲಾವತಿ. ಅವಳಿಗೆ ಹಾಡು-ಕುಣಿತಗಳನ್ನು ಕಲಿಸಲು 'ಕವಿ'ಯೊಬ್ಬನು ರಾಮರಾಯನ ಸೇವೆಯಲ್ಲಿದ್ದಾನೆ. ಈ ಹಾಡು-ಕುಣಿತಗಳನ್ನು ನೋಡಿ ತಡೆಯಲಾರದವಳಾದರೂ ತಡೆದುಕೊಳ್ಳುವ ಸಾಂಪ್ರದಾಯವಂತೆಯಾದ ಹೆಂಡತಿ: ಕಮಲಾಬಾಯಿ. ರಾಮರಾಯನು ತಾನು ವಿಲಾಸಿ

ಯಾಗಿದ್ದರೂ ಬ್ರಾಹ್ಮಣನಾದುದರಿಂದ ಮನೆಯಲ್ಲಿ ಧರ್ಮಕರ್ಮಗಳಿಗಾಗಿ ಬ್ರಾಹ್ಮಣನೊಬ್ಬ. ಹೊಟ್ಟೆ ಹೊರಕೊಳ್ಳುವುದು, ದುಡ್ಡೆತ್ತುವುದು, ಅವನ ಧರ್ಮ; ಎರಡನೆಯವರ ಅಜ್ಞಾನವನ್ನೆ ತಮ್ಮ ಕ್ಷೇತ್ರವನ್ನಾಗಿ ಮಾಡಿಕೊಂಡು ಅದನ್ನು ಹರಗಿ, ದುಡ್ಡು ದೊರಕಿಸುವ ಹಂಬಲದಿಂದ ಕೌಲೆತ್ತಿನಂತೆ ಕತ್ತಲ್ಲಾಡಿಸುವನು ಆಚಾರ್ಯ; ಕಾಲ ಬಂದ ಹಾಗೆ ಕೂಗುವನು; ದುಡ್ಡಿಗೆ ಕೈ ಹಾಕುವನು.

ರಾಮರಾಯನಿಗೆ ಮಗನೊಬ್ಬ: ಚಂದ್ರಕಾಂತ. ವಿದ್ಯಾಲಯದಲ್ಲಿ ಕಲಿಯುತ್ತಿರುವನು; ಹೊಸವಿಚಾರದ ಹುಡುಗ. ಅವನ ಮದುವೆ ಮಾಡಬೇಕೆಂದು ರಾಯರ ಹಂಬಲ; ಆಚಾರ್ಯರ ಪುಟುವು. ಅವನಿಗೆ ಇವರು ಆರಿಸಿದ ಕನ್ಯೆ ಬೇಕಿಲ್ಲ. ಮನೆಯ ರೈತ ಧರಮಪ್ಪನ ಮಗಳು ರತ್ನಮ್ಮನಲ್ಲಿ ಅವನ ಮನಸ್ಸು; ಯಾರಿಗೂ ಗೊತ್ತಿಲ್ಲದೆ ಬೆಳೆಯುತ್ತಿದೆ ಅವಳಲ್ಲಿಯ ಆಸಕ್ತಿ. ಧರಮಪ್ಪ ಮುದುಕನಾದುದರಿಂದ ಅವನನ್ನು ಬಿಟ್ಟು ಹೋಗಲಾರಳು ರತ್ನಮ್ಮ–ವಯಸ್ಸಿಗೆ ಬಂದಿದ್ದರೂ. ತಿರಮಲನು ಧರಮಪ್ಪನ ಮಗ; ಧನಿಕ ರಾಮರಾಯನ ವೃತ್ತಿಯನ್ನು ನೋಡಿ ಸಹಿಸಲಾರದೆ ಅವನ ಸೇವೆಯನ್ನು ಬಿಟ್ಟು ಗಿರಣಿಯ ಕೂಲಿಗೆ ಸೇರಬೇಕೆನ್ನುವವ.

ಎಲ್ಲರೂ ರಾಮರಾಯನ ನೆರವಿನಲ್ಲಿದ್ದವರೆ. ರಾಮರಾಯನ ದುಡ್ಡು ದೊಡ್ಡಿಸ್ತಿಕೆಗಳಿಗಾಗಿ ಜೀವಿಸುವರು. ರಾಮರಾಯನೆ ನಡುಗಂಬ; ಉಳಿದವರು ಅವನ ಸುತ್ತಲೂ ಕುಣಿಯುವ ಗೊಂಬೆಗಳು. ತಮ್ಮದೆ ಆದ ಅಸ್ತಿತ್ವವಿಲ್ಲ. ದುಡ್ಡಿಗಾಗಿ ತಮ್ಮನ್ನೆ ಮರೆತು ಬಿಟ್ಟಿದ್ದಾರೆ. ದುಡ್ಡು ಹೊಟ್ಟೆಗಾಗಿ. ಮನಸ್ಸಿನ ಒಲವು ದುಡ್ಡಿನ ಮೇರೆಯನ್ನು ದಾಟುವುದು ಒಮ್ಮೊಮ್ಮೆ. ಕಲಾವತಿಯು ರಾಮರಾಯನ ನೆರವಿನಲ್ಲಿದ್ದುದು ದುಡ್ಡಿನ ಸಲುವಾಗಿ; ಮನಸ್ಸಿನಿಂದಲ್ಲ. ಮನಸ್ಸು, ಹರೆಯದ ಹುಮ್ಮಸ್ಸಿನಿಂದ ಕಾವ್ಯಶೃಂಗಾರಗಳಿಂದ ಸೂಸುವ ಕವಿಯಲ್ಲಿ. ರಾಮರಾಯನ ಸೇವೆಯಲ್ಲಿದ್ದರೂ ಕವಿಯ ಮನಸ್ಸು ಕಲಾವತಿಯಲ್ಲಿಯೆ. ಕವಿಯ ಆಸಕ್ತಿಯು ಕಲಾವತಿಯಲ್ಲಿ ಬೆಳೆಯುವ ಕಾಲಕ್ಕೆಯೆ ರಾಮರಾಯನಿಗೆ ಕಲಾವತಿಯು ಕಸವಾಗಿ ಕಂಡು, ಅವನ ಕಣ್ಣು ಹಸನ್ಮುಖಿಯಾದ ರತ್ನಮ್ಮನ ಮೇಲೆ ಬೀಳುವುದು. ಆದರೆ ಅದೆ ಸಮಯಕ್ಕೆ ಚಂದ್ರಕಾಂತನ ಒಲವು ರತ್ನಮ್ಮನ ಕಡೆಗೆ ತೀರ ಬಾಗಿರುವುದು

ರಿಂದ 'ಮನಸ್ಸಿನಿಂದ ತಾನು ರತ್ನಮ್ಮನನ್ನು ಮದುವೆಯಾಗಿರುವೆನೆಂದು ತಾಯಿ–ತಂದೆಗಳ ಎದುರು ಹೇಳಿಬಿಡುವನು. ಮುಂದೆ ಮದುವೆಯಾಗುವನು: ಅದೇ ಕಾಲಕ್ಕೆ ಕವಿಯೂ ಕಲಾವತಿಯ ಕೈ ಹಿಡಿಯುವನು.

ತಿರುಮಲನು ತೆಪ್ಪಗಾಗುವನು; ಧರಮಪ್ಪನು ಬೆಪ್ಪಗಾಗುವನು. ಆಚಾರ್ಯರಿಗೆ ಉಬ್ಬು; ರಾಮರಾಯನಿಗೆ ಮಬ್ಬು. ಕೊನೆಗೆ: 'ಪ್ರಿಯ ಚಂದ್ರಕಾಂತ! ನೀನು ಮಾಡುವುದಕ್ಕೆ ವಿವೇಕದ ಒಪ್ಪಿಗೆ ಇದ್ದರೂ ಅದನ್ನು ನೋಡುವುದಕ್ಕೆ ಮನೋಧೈರ್ಯವಿಲ್ಲ' ಎಂದು ಮಾತು ಮುಗಿಸುವರು.

ಈ ನಾಟಕದಲ್ಲಿ ಎಲ್ಲವೂ ಹೊಸದು. ವಿಚಾರ ಹೊಸದು, ರೀತಿ ಹೊಸದು. ಹಾಡುಗಳಿಲ್ಲ. ಆದರೂ ಇಲ್ಲೆನ್ನುವಂತಿಲ್ಲ. ಕಲಾವತಿಯು ವೇಶ್ಯೆಯಾದುದರಿಂದ, ಅವಳ ಬಾಯಿಯಿಂದ ಒಂದೂ ಹಾಡು ಬೇಡವೆಂದರೇನು? ಒಂದಿದೆ. ಅದಾದರೂ ಮರಾಠಿ ಹಾಡಿನ ಸರಣಿಯಲ್ಲಿಯೆ ಇದೆ. 'ಹೇ ಕೋಣ ಬೋಲಲೇ ಬೋಲಾ। ರಾಜಹಂಸ ಮಾಝಾ ನಿಜಲಾ' ಇದನ್ನು ಅನುಸರಿಸಿ 'ನೀನಿಂದು ಮಾತೆಯಾನಂದಾ, ಲಾಲಿಸೆನ್ನ ಕತೆಯಾ ಕಂದಾ' ಎಂದು ಕಲಾವತಿಯು ತನ್ನ ಜೀವನಕತೆಯನ್ನು ಆಚಾರ್ಯರ ಮಗು ಕೃಷ್ಣನಿಗೆ ಹೇಳುವಳು.

ಮಾತುಗಳು ಇನ್ನೂ ಉದ್ದುದ್ದವಾಗಿವೆ; ಆದರೆ ಬಿಗುವು ಹೆಚ್ಚುತ್ತಲಿದೆ. ಸಮಾಜಕ್ಕೆ ಪಾಠ ಹೇಳಬೇಕೆಂದು ಹೊರಟಾಗ, ಹೊಸ ವಿಚಾರಗಳ ಮಂಡನೆ ಮಾಡುವಾಗ ಉದ್ದುದ್ದ ಮಾತುಗಳು ಬರುವುದು ಸ್ವಾಭಾವಿಕ. ಮಾತುಗಳು ಆವೇಶಯುಕ್ತವಾಗಿವೆ. ಕೇಳುಗರನ್ನು ಮುಗ್ಧಮಾಡಿದರೂ ನಟನೆಗೆ ಆಸ್ಪದ ಕಡಮೆಯಾಗುವುದು. ಒಂದು ಪಾತ್ರವು ಉದ್ದವಾಗಿ ಭಾಷಣ ಮಾಡತೊಡಗಿದಾಗ ಇನ್ನೊಬ್ಬನು ರಂಗಭೂಮಿಯ ಮೇಲೆ ದಂಗುಬಡೆದಂತೆ ನಿಲ್ಲಬೇಕಾಗುವುದು. ಮಾತಿನಲ್ಲಿ 'ಶ್ರೀರಂಗ'ರ ಕಟುಮಾತಿನ ಏಟುಗಳು ಹೆಚ್ಚು ಹೆಚ್ಚಾಗಿ ಬರತೊಡಗಿವೆ. ಕೊಂಕು ಮಾತುಗಳಂತೂ ಮೇರೆವರೆದು ಬರಲಿವೆ:

ರತ್ನಮ್ಮ: ನಾಯೇನು ಹಾರುವರ ಹೆಂಗಸಲ್ಲ; ಗಂಡ ಗಳಿಸಿದ್ದರ ಮೇಲೆ ಗುರ್ರ ಅನ್ನಲಿಕ್ಕೆ.

ಆಚಾರ್ಯ: ತನ್ನ ಯಜಮಾನನ ಇಚ್ಛೆ ತನಗೆ ತಿಳಿದುಕೊಳ್ಳಲು ಬರದಿದ್ದರೆ ಅವನೇನು ಬ್ರಾಹ್ಮಣನೆ?

* * *

ಕಲಾವತಿ: ಗಂಡಸರಿಗೆ ಮೂರು ಬಿಟ್ಟು ನೂರು ಕಣ್ಣುಗಳಿದ್ದರೂ ನಡೆವುದು; ಆದರೆ ಎರಡೆ ಕಣ್ಣುಗಳಿಂದ ಹೆಂಗಸು ಕಣ್ಣು ಬಿಡುತ್ತ ಕುಳಿತಿರಲು ಮೂರನೆಯ ಕಣ್ಣಿನ ತಾಪವೇಕೆ ಅವಳಿಗೆ?'

* * *

ಅವರ ಜೀವನದಲ್ಲಿಯ ಸಂನಿವೇಶಗಳಿಗೆ–ಸ್ವಭಾವಕ್ಕೆ ಸರಿಹೋಗುವ ಮಾತುಗಳು ಕೆಲವು ಬಂದಿವೆ. 'ಇದ್ದದ್ದನ್ನು ಇದ್ದಂತೆ ನುಡಿಯುವ ಚಟವೊಂದು ನನ್ನಲ್ಲಿದೆ' ಎಂದೂ 'ಹೊಟ್ಟೆಯ ಸಲುವಾಗಿ ನನ್ನ ಬುದ್ಧಿ ಶಕ್ತಿಗಳನ್ನು ಮಾರಿಬಿಟ್ಟಿರುವೆ–ಇದುವರೆಗೆ ಯಾರೂ ಕೊಂಡುಕೊಂಡಿಲ್ಲ–ಆದರೂ ಮಾರಿ ಬಿಡುವ ನಿಶ್ಚಯ ಮಾಡಿರುವೆ' ಎಂದೂ ಇವೆ.

ಈ ನಾಟಕದಲ್ಲಿ ವೇಶ್ಯೆಯ ಬಗೆಗೆ ತಮ್ಮ ಮಾತು–ಮತವನ್ನು ತಿಳಿಸಿದ್ದರೂ ವೇಶ್ಯಾಜೀವನದ ಬಗ್ಗೆ ಇದ್ದ ಕುತೂಹಲ ಕಡಿಮೆಯಾಗಲಿಲ್ಲ. ಅದನ್ನು ಹೆಚ್ಚಾಗಿ ತಿಳಿಯಬೇಕೆಂಬ ಹಂಬಲ ಮನದಲ್ಲಿತ್ತು. ಸಮಯ ಹುಡುಕುತ್ತಲೆ ಇದ್ದರು. ವೇಶ್ಯೆಯರ ಮನೆಗೆ ಹೋಗುವುದು ಹೇಗೆ? ಅವರಲ್ಲಿ ಹೊಕ್ಕು ಸುರಕ್ಷಿತವಾಗಿ ಹೊರಬೀಳುವುದು ಸಾಹಸದ ಮಾತೆ. ಅದರಲ್ಲಿಯೂ ದುಡ್ಡಿಲ್ಲದ ಕಾಲದಲ್ಲಿ; ದೂರದಿಂದ ನೋಡಲಿಕ್ಕೆ ದುಡ್ಡೇಕೆ? ಎಂದು ಒಮ್ಮೆ ರಾತ್ರಿ ೧೦ರ ಸುಮಾರು ಕೋಣೆಯನ್ನು ಬಿಟ್ಟು ನಡೆಯುತ್ತ ಹೊರಟರು — ಫೋರಾಸ ಬೀದಿಯ ಕಡೆ.

ಮುಂಬಯಿ ಕಂಡವರಿಗೆ ಆ ಬೀದಿಯ ಬಣ್ಣನೆ ಬೇಕಿಲ್ಲ. ಅದು ಸೂಳೆಗೇರಿ. ಮಹಡಿಯ ಮನೆಗಳು ಎರಡೂ ಸಾಲುಗಳಲ್ಲಿ; ಕೆಳಗೆ ಅಂಗಡಿಗಳು. ಮೇಲೆ ಸೂಳೆಯರ ಮನೆ. ೧೧ ಹೊಡೆದು ಹನ್ನೆರಡರ ಮಜಲು ಬರಲು ತೊಡಗಿತ್ತು. ಬೀದಿಯಲ್ಲಿ ಜನರ ಸುಳಿದಾಟ ನಿಂತಿದೆ. ಟ್ರಾಮುಗಳಿಲ್ಲ. ದೀಪಗಳು ಎದ್ದು ಬೆಳಗುತ್ತಿರುವುವು. ನಮ್ಮ ನೆರಳು ಕೂಡ ಭಯವನ್ನುಂಟು ಮಾಡುವುವು. ಜಾಗಿರದಾರರು ಸಾಗಿದ್ದಾರೆ, ಫೋರಾಸ ಬೀದಿಯಲ್ಲಿ. ಕೈ ಪಾಯಜಮಾದ ಕಿಸೆಯಲ್ಲಿ; ನೋಟ ಮೇಲೆ. ಇವರು ಮೇಲೆ

ನೋಡುತ್ತಿರುವುದು, ಮೇಲೆ ಕುಳಿತವರಿಗೆ ಆಸೆ ತರತೊಡಗಿತು. ಇವರು ಕೇವಲ ನೋಡಲಿಕ್ಕೆಂದು ನಡೆದವರು. ಆದರೂ ಈ ನೋಟ ಹೆಚ್ಚುಕಾಲ ಬಾಳಲಿಲ್ಲ. ಇಬ್ಬರು ಪಠಾಣರು ಬಂದು ಕೈ ಹಿಡಿದು ಎಳೆಯತೊಡಗಿದರು. 'ನಡೆ ಒಳಗೆ' ಎಂದರು; 'ನಾನು ಅದಕ್ಕೆ ಬಂದವನಲ್ಲ!' ಎಂದು ಹೇಳುವಾಗ ಮೋರೆಯ ಮೇಲೆ ಕಳೆಯೆ ಇರಲಿಲ್ಲ. ಅವರು ಕೇಳದೆ ಎಳೆಯತೊಡಗಿದರು. ಆ ಎಳೆತವನ್ನು ತಡೆಯಲಾರದೆ ಗಾಬರಿಯಲ್ಲಿ ಚೀರಿಕೊಂಡರು. ಒಮ್ಮೆಲೆ ಹಿಂದಿನಿಂದ ಬೂಟುಗಳ ಸಪ್ಪಳ........ 'ಏಯ್! ತಡೆಯಿರಿ' ಎಂದು ಅಂದರು ಇಬ್ಬರು ಸೀಖರು; ಅವರು ಬಂದು, ಇವರ ವೇಷವನ್ನೂ ನಿಸ್ತೇಜ ಮುಖವನ್ನೂ ನೋಡಿ, 'ಈ ಬೀದಿಯಲ್ಲಿ ನಿಮ್ಮಂತಹರು ಬರಲು ಯೋಗ್ಯವಲ್ಲ' ಎಂದರು. ಅವರನ್ನು ಆ ಪಠಾಣರಿಂದ ಬಿಡಿಸಿ, ಒಂದು ಬಗಿ ಮಾಡಿಕಳಿಸಿದರು. ಆ ಸೀಖರು ಮುಂಬಯಿಯ 'ಸಮಾಜಪಾಲಕ' (Vigilence Society)ರು.

ಬೆಮರೊರೆಸಿಕೊಳ್ಳುತ್ತ ಕೋಣೆಗೆ ತಲುಪಿದರು. ಕೈ ಬಿಟ್ಟವು ಒಂದೂವರೆರೂಪಾಯಿ—ಬಗಿಗಾಗಿ.

ಜೀವನದ ಈ ಪ್ರಯೋಗಾವಸ್ಥೆಯು ಬಹುಕಾಲ ಸಾಗಲಿಲ್ಲ. ಕಷ್ಟವಾದರೂ ಅನಂತಕಾಲದ ವರೆಗೆ ಇದ್ದರೆ ಮಾನವನು ಬದುಕಲಿಕ್ಕಿಲ್ಲ. ೧೯೩೦ನೆಯ ಜನೆವರಿ ೨೦ ಕ್ಕೆ ಕೆಲಸೊಂದು ಸಿಕ್ಕಿತು. ಎಂತಹ ಕೆಲಸ! ಕೆಲಸವಿಲ್ಲದಾಗ ಎಂತಹದೇನು? ಮುಂಬಯಿಯ ಹಾಫ್‌ಕೀನ್ ಸಂಸ್ಥೆಯಲ್ಲಿ ಹೊತ್ತಿಗೆವನೆಯ ಪಾರುಪತ್ಯಗಾರ (Librarian)ನ ಸ್ಥಳ. ಮೂರು ತಿಂಗಳ ಮಟ್ಟಿಗೆ; ನೂರು ರೂಪಾಯಿಯ ಮೇಲೆ.

ಗಾಲಿಗಳು ತಿರುಗತೊಡಗಿದುವು. ಮುಂದಿನ ಜೀವನದ ದಾರಿ ನಿಚ್ಚಳವಾಗಿ ಕಾಣದಿದ್ದರೂ ದಾರಿ ಸಾಗತೊಡಗಿತು. ಇಲ್ಲಿಯವರೆಗೆ, ದುಡ್ಡಿಲ್ಲದುದಕ್ಕೆ ಎಷ್ಟು ಮಂದಿಗೆ ಸುಳ್ಳು ಬೀಳುವ ಪ್ರಸಂಗ ಬಂದಿತ್ತೊ? ಮೋರೆ ತಪ್ಪಿಸುವ ಯೋಗ ಲಭಿಸಿತ್ತೊ? ಒಮ್ಮೊಮ್ಮೆ ಪತ್ರಹಾಕಲು ಅಂಚೆಚೀಟಿಗೂ ಅಭಾವ. ಗೆಳೆಯರಾದರೂ ಸಹಾಯ ಮಾಡುವರಾದರೂ ಎಷ್ಟು? ಹಾಗೆ ಸಹಾಯ ಕೇಳಿಕೊಂಡು ಸುಖ ಬಡುವ ಜಾತಿ ಬೇರೆ ಅಲ್ಲ; ತನ್ನ ಕಷ್ಟ ತನಗೆ; ಅದರ ಜಳ ಇತರರಿಗೇಕೆ ತಗಲಬೇಕೆಂಬುದು. ಆದರೂ ಒಮ್ಮೊಮ್ಮೆ ಕೈಮೀರಿ ಹೋಗುತ್ತಿತ್ತು; ನಿರ್ವಾಹವಿದ್ದಿಲ್ಲ.

ಒತ್ತಟ್ಟಿಗೆ ಕೆಲಸವು ಪ್ರಾರಂಭವಾದ ಮೇಲೆ ಎಲ್ಲ ವೇಳೆಯೂ ತಮ್ಮದೆ ಹೇಗೆ ಆಗುವುದು? ಮುಂಜಾವಿನ ಹನ್ನೊಂದರಿಂದ ಸಾಯಂಕಾಲದ ಐದು ಗಂಟೆಯ ವರೆಗೆ ವಾಚನಮಂದಿರದಲ್ಲಿರಲೇಬೇಕು. ಒಂದು ವರುಷದ ವರೆಗೆ, ವೇಳೆಯೆಲ್ಲ ತಮ್ಮದೆ ಎಂದು ತಿಳಿದುಕೊಂಡು ತಮ್ಮ ಮನಬಂದಂತೆ ಇದ್ದರು. ಈಗ ಅದು ಆಗದಾಯಿತು. ಅದಕ್ಕಾಗಿ ಮನಸ್ಸಿನಲ್ಲಿ ಬೇಸರ. ಕೆಲಸವೇನೊ ಸಿಕ್ಕಿದೆ. ಅದರಿಂದ ಸದ್ಯದ ಮಟ್ಟಿಗೆ ಅನುಕೂಲವೇನೊ ನಿಜ. ಆದರೆ ಎರಡನೆಯವರ ಮನಸ್ಸಿನಂತೆ ಸೇವೆ ಮಾಡಬೇಕಲ್ಲ! ಮಾಡದೆ ಗತ್ಯಂತರ ವಿದ್ದಿಲ್ಲ. ಅಲ್ಲಿಯಾದರೂ ಏನು ದಾರಿ ಸುಗಮವೆ? ಅಲ್ಲಿ ಕೆಲಸ ಸುರು ಮಾಡಿ ಒಂದು ವಾರವಾಗಿದ್ದಿಲ್ಲ. ಮೇಲಧಿಕಾರಿಯೊಡನೆ ಚಿಕ್ಕ ಚಕಮಕಿ ಯಾಯಿತು. ಮೇಲಧಿಕಾರಿಗೆ ಇವರ ಬಗ್ಗೆ ಅದೇನೊ ವಿಚಿತ್ರ ವಿಚಾರ. ಇವರು ಕಾರ್ಯವನ್ನು ದಕ್ಷತೆಯಿಂದ ಮಾಡುವುದಿಲ್ಲವೆಂದು ಅವನಿಗೆ ಸಂಶಯ ಬಂದಂತೆ ಇತ್ತು. ಅಲ್ಲದೆ ವಾಚನಾಲಯದ ಪುಸ್ತಕಗಳನ್ನು ತಮ್ಮ ಸ್ವಂತದ ಉಪಯೋಗಕ್ಕೆ, ಹವ್ಯಾಸಕ್ಕೆ ಬಳಸುವರೆಂದು ಅನ್ನಿಸತೊಡಗಿತ್ತು. ಅದಕ್ಕಾಗಿ ಇವರ ಮೇಲೆ ಗುರ್ರೆನ್ನುವುದರಲ್ಲಿದ್ದನು. ಆದರೆ ಜಾಗಿರದಾರರು ಅವನಿಗೆ ಸೊಪ್ಪು ಹಾಕಲಿಲ್ಲ. ಮಾತಿಗೆ ಪ್ರತಿಮಾತನಾಡಿ, ತಮ್ಮ ಪಕ್ಷವನ್ನೆ ಸಮರ್ಥಿ ಸುತ್ತಿದ್ದರು. ಆ ಅಧಿಕಾರಿಗೆ ಮರುಮಾತು ಬಾರದು. ಇವರಾದರೂ ಅಲ್ಲಿ ಎಷ್ಟು ದಿನ ಇರುವವರು? ಕೇವಲ ಮೂರುತಿಂಗಳು.

ಈ ಚಕಮಕಿಯ ಕಾರಣ ಆ ಮೇಲೆ ತಿಳಿದುಬಂತು. ಆ ಅಧಿಕಾರಿಯು ಸಾಮ್ರಾಜ್ಯವಾದಿ ಇಂಗ್ಲಿಶರ ಗಡ್ಡೆಯಲ್ಲಿಯವನೊಬ್ಬ; ಭಾರತೀಯರು ಬಗ್ಗಿ ನಡೆಯಬೇಕೆಂದು ಅವನ ಮನೀಷೆ. ಅಲ್ಲದೆ ಜಾಗಿರದಾರರು ಬರುವ ಮುಂಚೆ ಅಲ್ಲಿ ಕೆಲಸಮಾಡುತ್ತಿದ್ದವನು, ಅಧಿಕಾರಿ ಬಂದ ಕೂಡಲೆ, ಆಸನದಿಂದ ಎದ್ದು ನಿಂತು, ಮಾತಿಗೊಮ್ಮೆ 'ಸರ್' ಎಂದು ಅಧಿಕಾರಿಯ ಎದುರು ಸುಳಿದಾ ಡುತ್ತಿದ್ದನಂತೆ. ಇವರೊ ಇಂಗ್ಲಂಡ ಕಂಡು ಬಂದವರು. ಇಂಗ್ಲಿಶರನ್ನು ಅವರ ದೇಶದಲ್ಲಿಯೆ ಕಂಡು—ಅವರ ಸ್ವಭಾವದ ಆಳನ್ನು ತಿಳಿದವರು. ತಮ್ಮ ಕುರ್ಚಿಯ ಮೇಲೆ ಕುಳಿತುಕೊಂಡು, ಬಾಯಲ್ಲಿ ಬಿಳಿಬತ್ತಿಯನ್ನು ಹಿಡಿದು ಕೊಂಡು ತಮ್ಮ ಕಾರ್ಯದಲ್ಲಿ ತೊಡಗಿರುತ್ತಿದ್ದರು. ಅಧಿಕಾರಿ ಬಂದರೂ ಅಷ್ಟೆ. ಇವರೇನು ಆಸನ ಬಿಟ್ಟು ಏಳುತ್ತಿದ್ದಿಲ್ಲ. ತಾವೇನೂ ತಮ್ಮ

ಕೆಲಸವೇನೊ. ಇದು ಆ ಅಧಿಕಾರಿಗೆ ಹಿಡಿಯದಾಯಿತು. ಮಾಡುವನೇನು? ಗಾಡಿ ಸಾಗಿತು. ಇಬ್ಬರೂ ಅಭಿಮಾನಿಗಳು. 'ನೆಲವನ್ನು ಗುದ್ದಿ ಅಗಿವುದು ಕಠಿಣ' ಎಂಬುದು ತಿಳಿದಿರಬೇಕು ಆ ಅಧಿಕಾರಿಗೆ!

ಮೂರು ತಿಂಗಳ ಕೆಲಸ! ಎಷ್ಟು ಮಾಡಿದರೂ ಅಷ್ಟೆಯೆ, ಎಂದು ತಮ್ಮ ಮುಂದಿನ ಜೀವನದ ಕಾರ್ಯವನ್ನು ಮಾಡುತ್ತಿದ್ದರು. 'ಭಾಷಾ ಶಾಸ್ತ್ರ'ದ ಮೇಲೆ ಪುಸ್ತಕವೊಂದನ್ನು ಒರೆಯಬೇಕೆಂದು ಸಮಯ ಸಿಕ್ಕಾಗೆಲ್ಲ ಓದುತ್ತಿದ್ದರು. ಹಾಫ್‌ಕೀನ್ ಸಂಸ್ಥೆಯಲ್ಲಿದ್ದುದರಿಂದ ಕೆಲವು ವೈದ್ಯಕೀಯ ಶಬ್ದಗಳ ಪರಿಚಯವೂ ಆಯಿತು. ಅಲ್ಲಿಯ ಗ್ರಂಥಗಳ ಸಹಾಯವು ಸಾಕಾಗದಿದ್ದರೆ ಆಗಾಗ 'ರಾಯಲ್ ಏಸಿಯಾಟಿಕ್' ಸಂಸ್ಥೆಯ ವಾಚನಮಂದಿರಕ್ಕೆ ಹೋಗುತ್ತಿದ್ದರು.

ಈ ಅಭ್ಯಾಸದ ಅವಸರ, ನೌಕರಿಯ ಒತ್ತಡದಲ್ಲಿಯೆ, ಆಗಾಗ ಗೆಳೆಯರಲ್ಲಿ ಹೋಗುವುದು: ಹೊಸ ಗೆಳೆಯರ ಗುರುತು. ಇದೆ ಸಮಯಕ್ಕೆಯೆ ಪಂಡಿತ ತಾರಾನಾಥರ ಪ್ರತ್ಯಕ್ಷ ಪರಿಚಯವು ಆಯಿತು. ಈ ಮೊದಲೆ ತಮ್ಮ ನಾಟಕಗಳನ್ನು ಅವರಿಗೆ ಕಳಿಸಿದ್ದರು. ಮುಂಬಯಿಗೆ ಬಂದಾಗ, ಅದೆ ಬರೆದಿದ್ದ 'ಮುಕ್ಕಣ್ಣ-ವಿರಾಟಪುರುಷ'ವನ್ನು ಅವರಿಗೆ ಓದಲು ಕೊಟ್ಟರು. ಅವರು ಅದನ್ನು ಓದಿ ನೋಡಿದರು. ಬರೆದ ಜಾಗಿರದಾರರನ್ನು ನೋಡಿದರು. ಇವರ ಒಡಕ ದೇಹ; ಹೊಳೆಯುವ ಕಣ್ಣು. ಅದೇನೊ ಆತ್ಮೀಯತೆಯು ಬೆಳೆಯತೊಡಗಿತು. ಇವರ ಪ್ರಕೃತಿಯ ಬಗ್ಗೆ ಅವರು ವಿಚಾರಿಸಿದರು. ಇವರು ಏನು ಹೇಳಬಹುದಾಗಿತ್ತು? ಇಂಗ್ಲಂಡದಲ್ಲಿಯ 'ಪ್ಲುರಸಿ'ಯ ಬಗ್ಗೆ ಹೇಳಿದರು. ಉಪವಾಸದ–ವನವಾಸವನ್ನು ಸೂಚಿಸಿದರು. ಇದೆಲ್ಲ ದೇಹದ ಬೇನೆಯ ಬಗೆಗೆ. ಇದು ಏನೂ ಅಲ್ಲ. ಮನಸ್ಸಿನ ಬೇಗೆಯ–ಭಯಂಕರ ಬೇಗೆಯ ತಿಳಿವನ್ನು ಮಾಡಿಕೊಟ್ಟರು. ಮನದಂತೆ ನಡೆಯಬೇಕೆಂದು ಹಂಬಲ; ಬೆಂಬಲವಿಲ್ಲದೆ ಬೇರೆಯವರ ಬೆನ್ನು ಹತ್ತಬೇಕಾಗಿದೆ. ಇವರ ಮಾತಿನಲ್ಲಿಯ ಜಳವು ಅವರಿಗೂ ತಾಗಿರಬೇಕು. ಆ ಜಳದಲ್ಲಿಯೆ ಗೆಳೆತನವು ಬೆಸುಗೆಯನ್ನು ಹೊಂದುತಲಿತ್ತು. ಅವರ ಗೆಳೆತನವು ಮುಂಬರುವ ಸುದಿನಗಳ ಸೂಚಿ ಎಂಬಂತೆಯಾಯಿತು.

೧೯೩೦ ಫೆಬ್ರುವರಿ ಮೊದಲನೆಯ ತಾರೀಖು. ಜಾಗಿರದಾರರಿಗೆ ಸಂಬಳ

ಸಿಗುವ ದಿನ. ತಾನು ಗಳಿಸಿದ ದುಡ್ಡು! ಅದು ಎಷ್ಟೆ ಇರಲಿ; ತಮ್ಮ ಶಕ್ತಿಯನ್ನು ಉಪಯೋಗಿಸಿ, ಬುದ್ಧಿಯನ್ನು ಬಳಸಿ, ಪಡೆದುಕೊಂಡ ದುಡ್ಡು! ಅದರ ಸ್ಪರ್ಶ ನವಿರು ತರುವದು. ಆದರೆ ಜಾಗಿರದಾರರಿಗೆ, ಅದು ಕೈಯಲ್ಲಿ ಬಂದಮೇಲೆ ವಿಚಿತ್ರ ವಿಕಾರವಾಗತೊಡಗಿತು. ಕೈಯಲ್ಲಿ ಬಂದಿದೆ ದುಡ್ಡು! ಎಷ್ಟು? ೩೮–೧೦–೦. ಅಹುದು ಅದೆಲ್ಲ ತಮ್ಮದೆ. ಆದರೆ ಈಗ ಜನರಿಂದ ಸಾಲವಾಗಿ ತಂದುದನ್ನು ತೂಗಿನೋಡಿದರೆ, ಇದು ಏತಕ್ಕಾಗಬೇಕು. ಗಳಿಕೆಯ ಹೆಸರು ಇರುವುದರಿಂದ ಹೆಚ್ಚಿನ ಹೊಣೆ. ಮೊದಲಿನಂತೆ ಕಡವಾಗಿ ತರಲು–ಕೇಳಲು ಮನವು ಮುದುಡಿಕೊಳ್ಳುವುದು. ದುಡ್ಡು ಬರತೊಡಗಿದೆ ಎಂಬುದೆ ಸಮಾಧಾನ. ಅದನ್ನೆಲ್ಲ ಹಂಚಿಕೊಟ್ಟರು ಕೊಡಬೇಕಾದವರಿಗೆ; ಮತ್ತೆ ಕೈ ಬರಿದು; ಗಳಿಸಲು ತೊಡಗಿಲ್ಲವೆ?

ಏನೂ ಗೆಲುವು ಕಾಣಲಿಲ್ಲ. ಆದರೂ ಸೋಲು ಮಾತ್ರ ಸರಿಯ ತೊಡಗಿತು. ಆಸೆಯ ಕಿರಣಗಳು ಬಲಿಯತೊಡಗಿದುವು. ಮನದ ಆಸೆ ಬೆಳೆದಂತೆ ದೇಹಕ್ಕಾಗಿ ಹೆಚ್ಚು ವಿಚಾರ ಮಾಡಬೇಕಾಯಿತು. ಮನದ ಹಂಬಲುಗಳನ್ನು ಹರಗಿ, ಬೆಳೆಯಿಸಬೇಕಾದರೆ, ದೇಹದಾರ್ಢ್ಯ ಬೇಕಲ್ಲವೆ; ದೇಹದ ಗಟ್ಟಿಗತನವಿಲ್ಲದಿರೆ ವಿಚಾರಗಳು ವಿಚಾರಗಳಾಗಿಯೆ ಉಳಿವುವು. ಗಾಳಿ ಬಯಲಲ್ಲಿ ಬೀಸಿದಂತೆಯೆ.

ಸಿಗರೇಟು ಸೇದುವುದು, ಚಹಾಕುಡಿಯುವುದು, ಉಪವಾಸಬೀಳುವುದು, ದಿನದ ಕರ್ಮವಾಗಿ ದೇಹವು ಒಣಗತೊಡಗಿತು. ತಿಂದುದು–ಒಂದು ವೇಳೆ ತಿಂದರೆ–ದಕ್ಕಬಹುದೊ, ಎಂಬ ಸಂಶಯ ಬರತೊಡಗಿತು. ತಿನ್ನದೆ ಬಿಟ್ಟರೆ ದೇಹದ ಸವಕಳಿ ಪೂರೈಕೆಯಾಗದೆ ಸವೆದು ಹೋಗಬಹುದಲ್ಲ! ಕ್ಷಯರೋಗವು ಸೇರುವುದೆಂಬ ಭಯವು ಬರತೊಡಗಿತು. ಆಗಾಗ ಅನ್ನಿಸುತ್ತಿತ್ತು: 'ಈ ನನ್ನ ಮಾರ್ಮಿಕ ಮಿದುಳಿಗೆ ಇಂತಹ ಕುರಕ ದೇಹವು ಜೋಡಿ ಬಿದ್ದಿರುವುದಲ್ಲ' ಎಂದು.

ಎಂತಹ ಭಾರ! ಸಾಲದ ಭಾರ ಮೊದಲನೆಯದು; ಮನೆಯವರ ಗೋಳು ಎರಡನೆಯದು; ಮನದ ಹೆಬ್ಬಯಕೆಗಳು ಉರಿದುರಿದು ಹೋಗುವುದು ಮೂರನೆಯದು. ದೇಹಕ್ಕಾಗಿ ಚಿಂತೆ, ನೌಕರಿಗಾಗಿ ನವೆಯುವುದು; ಬರೆಯಲು ಹಿಡಿದ ಪುಸ್ತಕವನ್ನು ಮುಗಿಸಬೇಕೆಂಬ ಹಂಬಲ. ಇದ್ದ ನೌಕರಿಯ ಕೆಲಸ

ವನ್ನಂತೂ ಮಾಡದೆ ಗತಿಯಿಲ್ಲ. ಇದ್ದ ನವಕರಿ ಇಟ್ಟುಕೊಂಡು, ಮುಂದಿನ ನವಕರಿಗಾಗಿ ಅಲೆಯುವುದು. ಈ ಎಲ್ಲ ಭಾರವನ್ನು ತಡೆಯಲು ದೇಹವೇನು ಗಟ್ಟಿಯೆ? ದೇಹವು ಕಾರ್ಯಮಾಡಲು ಒಲ್ಲೆನ್ನುತ್ತಿತ್ತು. ಬಲುಮೆಯಿಂದ ದುಡಿಸುವುದೂ ಒಮ್ಮೊಮ್ಮೆ ಪ್ರಸಂಗ ಬರುತ್ತಿತ್ತು. ಆದಕ್ಕಾಗಿ ಆಗಾಗ ಸಂಧಿವಾತದ ಪ್ರಕರಣ.

ಹಿಂದೆ ಹಾಕಿದ ಅರ್ಜಿಗಳ ಕತೆಯು ಮುಂದುವರಿದು ಅಂತೂ ಒಮ್ಮೆ ವಿಚಾರಕ್ಕೆ ಬಂತು. ಹೊಸದಾಗಿ 'ಅಂಧೇರಿ'ಯಲ್ಲಿ ಕಾಲೇಜೊಂದು ಸ್ಥಾಪನೆ ಯಾಗುವುದರಲ್ಲಿತ್ತು. ಅದರಲ್ಲಿಯ ಸಂಸ್ಕೃತ ಅಧ್ಯಾಪಕ ಸ್ಥಾನಕ್ಕೆ ಕಾದಾಟ. ಜಾಗಿರದಾರರೊಬ್ಬರು ಹುರಿಯಾಳು. ಧಾರವಾಡದಲ್ಲಿ ಪ್ರಾಧ್ಯಾಪಕರಾಗಿದ್ದ ಭಡಕವಾ್ಕರ, ಇನ್ನಿಬ್ಬರು, ಬೇರೆ ಇದ್ದರು. ಈ ಕಾದಾಟದಲ್ಲಿ ಗೆಲವು ಜಾಗಿರದಾರರ ಕಡೆಗೆಯೆ ಒಲವು ತೋರುತ್ತಿತ್ತು, ಪದವಿಗಳ ಘನತೆಯ ಮೂಲಕ; ಕೆಲ ಮಹನೀಯರ ಸಹಾಯದ ಮೂಲಕ. ಆದರೆ ಇಂದಿನ ತನಕ ನಡೆದುಬಂದ ಸ್ಥಿತಿಯು ವಿಚಿತ್ರ ಇತಿಹಾಸವನ್ನು ಹೇಳುತ್ತಿತ್ತು. ಏನಾದರೂ ಮಹತ್ವದ ಕೆಲಸವಿದ್ದರೆ ಅದಕ್ಕೆ ಅಡ್ಡಿ. ಯಾರ ಸಹಾಯವೂ ಫಲಿಸುತ್ತಿರಲಿಲ್ಲ. ಈ ಸಲವೂ ಚಿನ್ಹಗಳು ಆಶಾದಾಯಕವಿದ್ದಿಲ್ಲ. ದೇಹಕ್ಕೆ ಸಂಧಿವಾತ; ಮೈ ಬಿಸಿ; ಮನದ ಬೇನೆ. ಅಂತೂ ಸಾವರಿಸಿಕೊಂಡು ಹೋಗಿ 'ಸಂದರ್ಶನ'ವನ್ನು ಮುಗಿಸಿಕೊಂಡು ಬಂದರು. ಸಂದರ್ಶನವು ಸಾವಧಾನವಾಗಿ ಸಾಗಿತು. ಮುಂದಿನ ವಿಚಾರವೆಲ್ಲ ಪ್ರಿ. ರಾಲಿನ್‌ಸನ್ ಅವರ ಮೇಲೆಯೆ ಹೆಚ್ಚು ಅವಲಂಬಿಸಿತ್ತು. ಹೆಚ್ಚು ಸಮಾಧಾನ ಬರತೊಡಗಿತು. ಆದರೆ ಪರಿಣಾಮಕ್ಕಾಗಿ ಕಾಯಬೇಕಲ್ಲ.

ಎಪ್ರಿಲ ತಿಂಗಳು. ಇನ್ನೂ ಏನೂ ತಿಳಿದಿಲ್ಲ. ಆಸೆಯ ಕಾವು ಏರ ತೊಡಗಿತ್ತು. ಒಂದಕ್ಕಾಗಿ ಆಸೆ ಮಾಡಿಕೊಂಡು ಕುಳಿತಾಗ ಉಳಿದುದೆಲ್ಲವೂ ಬೇಸರ. ಇದ್ದ ನವಕರಿಯು 'ಮೂರು ದಿನ'ದ್ದೆಂದು ಅನಾಸ್ಥೆ ಬರತೊಡಗಿತು. ಅದಕ್ಕೂ ಹೆಚ್ಚಿನ ಕಾರಣವೊಂದಿತ್ತು; ಸೇವೆಯೆಂದರೆ ಮೈಯುರಿಯುತ್ತಿತ್ತು. ಮನವು ಯಾರೊಬ್ಬರ ಆಧೀನದಲ್ಲಿದ್ದು ಗೊತ್ತಿಲ್ಲ. ಆದರೆ ಮಾಡುವುದೇನು? ಮನೆಯವರ ಹಿತಕ್ಕಾಗಿ, ಸಾಲದ ಭಾರಕ್ಕಾಗಿ, ಮನದ ಒಲವನ್ನು ಒತ್ತಿ ಹಾಕ ಬೇಕಾಯಿತು. ನವಕರಿಮಾಡಬೇಕೆಂಬುದು ದುಡ್ಡಿನ ಮೋಹಕ್ಕಲ್ಲ; ಪದವಿ

ಪ್ರಾಪ್ತಿಗಲ್ಲ, ಸಾಲಕ್ಕಾಗಿ. ಸಾಲದ ಭಾರ ಕಡಿಮೆ ಮಾಡುವುದಕ್ಕಾಗಿ. ಆ ಭಾರದ ಕೆಳಗೆ ಕುಸಿದು ಕುಗ್ಗುತ್ತಿರುವ ಮನೆಯ ಜನರನ್ನು ಪಾರುಮಾಡುವುದಕ್ಕಾಗಿ. ಅದಕ್ಕಾಗಿ ಎಂಥ ಅಪಮಾನವಾದರೂ ಸಹಿಸಬೇಕು, ಕೆಲ ಸಾಲ ತೀರುವ ತನಕ. ತಮ್ಮ ಮೇಲೆ, ತಮ್ಮ ಪರಿಸ್ಥಿತಿಯ ಮೇಲೆ ಸಿಟ್ಟಿಗೆದ್ದ ಮನಸ್ಸಿಗೆ ಸಮಾಧಾನ ತಂದುಕೊಡಲು ಯತ್ನಿಸಿದರು: 'ಹೆಚ್ಚೆಂದರೆ ಹನ್ನೆರಡು ವರುಷ ನೌಕರಿ ಮಾಡುವೆ. ಮುಂದೆ, ಮನವೆ! ನೀನು ಸ್ವತಂತ್ರನಾಗುವಿ' ಎಂದು ಹೇಳುತ್ತಿದ್ದರು ತಮ್ಮ ಮನಕ್ಕೆ—ಸ್ವತಂತ್ರವೃತ್ತಿಯ ಮನಕ್ಕೆ.

ವಿಚಾರಗಳು ತೆರೆಗಳಾಗಿ ಬರುತ್ತಿದ್ದುವು. ಒಂದೆ ವಿಷಯವೆಂತಲ್ಲ. ಶಿಕ್ಷಣ—ಶಿಕ್ಷಣದ ಪದ್ಧತಿ; ಸಮಾಜ; ಧರ್ಮ; ತತ್ವಜ್ಞಾನ; ನೀತಿ; ಎಲ್ಲವೂ ಬಂದು ಹೋಗುವುವು. ಎಲ್ಲವುಗಳ ಬಗ್ಗೆ ವಿಶೇಷ ವಿಚಾರಗಳು. ಗೆಳೆಯರ ಮುಂದೆ ಒದರಿಕೊಳ್ಳುವುದು. ಒಮ್ಮೊಮ್ಮೆ ಚರ್ಚಿಸುವುದು; ಬರೆಯುವುದು. ಮನ ಹಗುರು ಮಾಡಿಕೊಳ್ಳುವುದು. ಆಗಲೆ ನಿರ್ಣಯವಾದುದು, ಮನದ ವಿಚಾರಗಳನ್ನು ಜನದ ಎದುರು ಇಡಲು ಸಾಧನವು 'ನಾಟಕ'ವೆಂದು. ವಿದ್ಯಾಖಾತೆಯಲ್ಲಿಯ 'ಸೇವೆ'ಯೆ ಅದಕ್ಕೆ ಪೋಷಕವೆಂದು. ಅದಕ್ಕಾಗಿ ಹಾತೊರೆಯ ತೊಡಗಿದರು. ಈ ನಿರ್ಣಯದೊಂದಿಗೆ ಬಗೆಬಗೆಯ ಪ್ರತಿಜ್ಞೆಗಳನ್ನು ಮಾಡಿದರು. ಪ್ರತಿಜ್ಞೆಗಳು ಪೂರೈಸಲ್ಪಟ್ಟರೆ ಅವಕ್ಕೆ ಬೆಲೆ ಹೆಚ್ಚು. ಅವುಗಳ ಕಾಲವನ್ನು ನಿರೀಕ್ಷಿಸಬೇಕು.

ಈಗ ನಿರೀಕ್ಷಿಸಬೇಕಾದದು ಅಂದಿನ 'ಸಂದರ್ಶನ'ದ ಫಲಿತಾಂಶವನ್ನು. ಎಪ್ರಿಲ್ ತಿಂಗಳಲ್ಲಿ ಅವರ ಪಾರುಪತ್ಯಗಾರ ಕೆಲಸವು ಕೊನೆಗಂಡಿತು. ಮತ್ತೆ, 'ತಾವು ತಾವಾದರು'. ಮೊದಲಿನಂತೆ ನೌಕರಿಯಿಲ್ಲ. ಕೈಯಲ್ಲಿ ದುಡ್ಡಿಲ್ಲ. ಮುಂಬೈ ಬಿಡುವ ಹಾಗಿಲ್ಲ. ಮತ್ತೆ ತಲೆಯಲ್ಲಿ ವಿಕೃತ ವಿಚಾರಗಳು ಬರತೊಡಗಿದುವು: ೧೯೨೯ರ ಎಪ್ರಿಲ್-ಮೇದಲ್ಲಿ ಹಿಂದು ಮುಸ್ಲಿಮ ದೊಂಬಿಗಳು ನಡೆದಾಗ ತಾವು ಸೇರಿಕೊಂಡು ತಮ್ಮ ಜೀವಿತದ ಮುಕ್ತಾಯ ಮಾಡಬೇಕೆಂದು ಮಾಡಿದುದು, ಪೋಲೀಸರು ಬೇಡೆಂದುದು; ಎಲ್ಲ ವಿಚಾರಗಳು—ಹೋದ ವರುಷದ ಸಂಗತಿಗಳೂ ಚಿತ್ರಮಾಲೆಯಂತೆ ಹಾದು ಹೋಗತೊಡಗಿದುವು. ಕೆಲಕಾಲ ನವಕರಿ ಮಾಡಿ ಮತ್ತೆ ಅಲೆದಾಡಬೇಕಾಯಿತು.

ದಿನಗಳು ಸರಿಯತೊಡಗಿದುವು.

ಮೇ ತಿಂಗಳು ಹ-ದಿ-ನೈ-ದ-ನೆಯ ತಾರೀಖು. ಜಾಗಿರದಾರರಿಗೆ ಬಂತು ಮರಿಯೋಲೆ(D. O.)ಯೊಂದು. 'ಕರ್ನಾಟಕ ಕಾಲೇಜದಲ್ಲಿ ಅಧ್ಯಾಪಕರಾಗಿ ಮಾಡಿದೆ' ಎಂದು. ಆಣತಿ ಇನ್ನೂ ಬಂದಿದ್ದಿಲ್ಲ. ತನ್ನ ವೇಗದಿಂದಲೆ ಅದು ಬರುವುದು. ಇವರ ಆತುರದ ಅಳತೆ ಅದಕೆಲ್ಲಿ ? ಇವರಾವರೊ ಮುಂಬೈಯಲ್ಲಿ ನಿಂತರೆ ದಾರಿಕಾಯುತ್ತ ? ಗೆಳೆಯ ವಾಳವೇಕರನ ಆಮಂತ್ರಣದ ಮೇರೆಗೆ ತುಂಗಭದ್ರೆಗೆ ತೆರಳಿದರು.

ಮುಂಗಾಲಿಗೆ ಜೋರು ಬಂತು. ಮುಂದೆ ಬರುವ ಯೋಗ ಬಂತು. ತಾರಾನಾಥರಲ್ಲಿ ಕೆಲದಿನವಿದ್ದು ತಿರುಗಿ ಬಂದರು. ಅವರು, ಇವರ 'ಮುಕ್ಕಣ್ಣ' ನನ್ನು ಮೆಚ್ಚಿದ್ದರು. ತಮ್ಮ ಗೆಳೆಯರಿಗೆ ಅದರ ಬಗ್ಗೆ ವರ್ಣನೆ ಮಾಡಿ ಹೇಳುತ್ತಿದ್ದರಲ್ಲದೆ 'ರಂಗಭೂಮಿ'ಯಲ್ಲಿ ಅಚ್ಚು ಹಾಕಿಸುವುದಕ್ಕೆ ಕಳಿಸಿದರು. 'ಪ್ರೇಮ'ದ ಸಂಪಾದಕೀಯ ಮಂಡಲದಲ್ಲಿಯೊಬ್ಬರನ್ನಾಗಿ ಮಾಡಿಕೊಂಡರು. 'ಪ್ರೇಮ'ದ ಮಂಡಲಕ್ಕೆ ಮತ್ತೊಂದು ಮುತ್ತು.

೧೯೩೦ನೆಯ ಜೂನ್ ಹದಿನಾರನೆಯ ತಾರೀಖಿಗೆ ಜಾಗಿರದಾರರು ಧಾರವಾಡದ ನಿಲ್ದಾಣದಲ್ಲಿ ಇಳಿದರು. ಪ್ರೊಫೆಸರರಾಗಿ ಬಂದಿದ್ದರೂ ಅವರ ಕಿಸೆಯಲ್ಲಿ ಎರಡಾಣೆಯ ತುಣುಕೊಂದು. ಅದು ಧಾರವಾಡದಲ್ಲಿಯ ಅವರ ಜೀವಿತದ ಬಂಡವಲು. ಆ ತುಣುಕು ಇನ್ನೂ ಅವರಲ್ಲಿದೆ. ಬಂಡವಲು ಅದು; ಅದಕ್ಕೆ ಕೈ ಹಚ್ಚುವುದುಂಟೆ ?



ಆರನೆಯ ಸ್ಥಿತಿ

# ಪ್ರೊಫೆಸರ

೧೯೩೦ನೆಯ ಜೂನ ೨೪ನೆಯ ದಿನ!

ಕರ್ನಾಟಕ ಕಾಲೇಜದಲ್ಲಿ ಹುಡುಗರ ಸುಳಿದಾಟ ಹೆಚ್ಚಾಗಿ ಕಾಣಬರುತ್ತಿತ್ತು. ಕಾಲೇಜು ಆರಂಭವಾಗಿ ಮೂರು ನಾಲ್ಕು ದಿನಗಳಾದರೂ ಅಂದೆಯೆ ಅಭ್ಯಾಸಕ್ಕೆ ಮೊದಲು. ಮೊದಲ ವರುಷದ ಹುಡುಗರಲ್ಲಿ ಹೊಸ ಉತ್ಸಾಹ. ಶಾಲೆಯ ವಾತಾವರಣ ದಾಟಿ ಕಾಲೇಜದ ಗಡಿಗೆ ಬಂದು ಮುಟ್ಟಿದುದಕ್ಕೆ ಹೆಮ್ಮೆ. ವಾರಕ್ಕೊಮ್ಮೆ ಮುಂಜಾನೆ ಶಾಲೆ ತಪ್ಪಿತೆಂದು ಎದೆಯುಬ್ಬಿಸಿ ಕೊಂಡು ಅಡ್ಡಾಡುವವರು ಎಷ್ಟೋ ಜನ! ಹೊಸ ಹುಡುಗರಿಗೆ ಎಲ್ಲವೂ ಹೊಸ ಅನುಭವವೆ. ಕಾಲೇಜದ ವಾತಾವರಣ ಹೊಸದು. ಅಧ್ಯಾಪಕರು ಹೊಸಬರು; ರೀತಿ-ನೀತಿ ಹೊಸದು. ಹುಡುಗರೆಲ್ಲರೂ ಹೊಸದರ ಹುರುಪಿನಲ್ಲಿದ್ದವರೆ.

ಹೊಸ ಹುಡುಗರಿಗೆ ಎಲ್ಲ ಪ್ರೊಫೆಸರರು ಹೊಸಬರಾಗಿದ್ದರೂ ಇಡಿ ಕಾಲೇಜಕ್ಕೆಯೆ ಒಬ್ಬ ಹೊಸ ಪ್ರೊಫೆಸರರು ಬಂದಿದ್ದಾರೆ. ಹೊಸಬರೆಂದರೆ-ಹೊಚ್ಚ ಹೊಸಬರು. ಆದರೆ ಮೋರೆಯ ಮೇಲೆ ಹಳೆಬರಂತೆ—ದಿನ ಹೋದವರಂತೆ ಕಳೆ.

ಜಾಗಿರದಾರರಿಗೆ ಅಂದು ಮೊದಲ ಪಾಠ, ಇಂಟರಕ್ಲಾಸದವರಿಗೆ; ಕಲಿಸುವ ವಿಷಯ ತರ್ಕಸಂಗ್ರಹ. ಪ್ರೊಫೆಸರರ ರೀತಿಯನ್ನು ನೋಡಬೇಕೆಂಬ

ಕುತೂಹಲದಿಂದ, ಪ್ರಿವಿಯಸ್, ಬಿ. ಎ. ದವರೂ ಬಂದು ನುಗ್ಗಿದ್ದಾರೆ. ಹೊಸಬರೆಂದರೆ ಹುಯಿಲೆಬ್ಬಿಸುವುದು ರೂಢಿ. ೨ ಗಂಟೆ ಆಗಿದೆ. ಪ್ರೊಫೆಸರ್ ಜಾಗಿರದಾರರು ಕ್ಲಾಸಿನಲ್ಲಿ ಕಾಲಿಟ್ಟರು. ಹುಡುಗರು ತಮ್ಮ ರೀತಿಯಿಂದ ಕೈ ಬಡೆದು, ಕಾಲು ಬಡೆದು, ಡೆಸ್ಕ ಬಡೆದು ಸ್ವಾಗತಿಸಿದರು. ಹುಡುಗರಿಗೆ ಮೊದಲನೆಯ ದಿನವಾದರೂ ಜಾಗಿರದಾರರಿಗೆ ಪರೀಕ್ಷೆಕಾಲವಾಯಿತು.

ಏಕೆಂದರೆ — ಮಾತನಾಡಬೇಕಲ್ಲ! ಇಲ್ಲಿಯವರೆಗೆ ಮಾತನಾಡುವುದೆಂದರೆ ಮೈಮೇಲೆ ನವಿರೇಳುತ್ತಿತ್ತು. ಅಂದಿನ ದಿನವೂ ನವಿರು ಬಂತು. ಶಾಂತವಾಗಿ ಸುತ್ತಲೂ ನೋಡಿದರು. ಸಿಂಹಾವಲೋಕನವಾಗುವುದರೊಳಗೆ ಹುಡುಗರು ಶಾಂತರಾಗಿದ್ದರು. ಎಲ್ಲೆಲ್ಲಿಯೂ ನಿಃಶಬ್ದತೆ. ಪ್ರೊಫೆಸರರ ಬಾಯಿಯಿಂದ ಏನು ಬರುವುದೊ, ಕುತೂಹಲದಿಂದ ಕಾದಿದ್ದರು ಹುಡುಗರು. ಪ್ರೊಫೆಸರರು ಮೊದಲು ಕೆಲವು ಔಪಚಾರಿಕ ಮಾತುಗಳಾಡಿ, ಅಭ್ಯಾಸಕ್ಕೆ ಕೈಹಾಕಿದರು. ಆ ಮೇಲೆ ಗಾಡಿ ಧಢ ಧಢ ಸಾಗತೊಡಗಿತು. ಒಂದು ಗಂಟೆಯ ಅವಧಿಯಲ್ಲಿ ಪುಸ್ತಕವನ್ನು ಬಿಟ್ಟು ತರ್ಕದ ವಿಷಯವಾಗಿ ಹರಟೆ ಹೊಡೆದು ಪಾರಾದೆನೆಂದು ಎದ್ದರು.

ಗಂಟೆಯಾದ ಕೂಡಲೆ ಗುಜುಗುಟ್ಟುವುದು ಪ್ರಾರಂಭವಾಯಿತು. ಹೊಸ ಹುಡುಗರಿಗೆ ಆನಂದ. ಮೇಲಿನ ವರ್ಗದವರಿಗೆ ಮೋಜು. ತಮ್ಮ ಕೈಗೆ ಕಸುವು ಬರತೊಡಗಿತೆಂದು ಕನ್ನಡಿಗರಿಗೆ ಉಬ್ಬು. ಮರಾಠಿಗರು ಮೂಗು ಮುರಿಯತೊಡಗಿದರು. 'ಮೊದಲನೆಯ ದಿನ! ಅವರ ಬಗೆಗೆ ಹೆಚ್ಚು ಹೇಳಲು ಬರುವಂತಿಲ್ಲ!' ಎಂದು ಸಮಾಧಾನದ ಮಾತನಾಡಿದವರೂ ಇದ್ದರು.

ಮರುದಿನವೂ ಹಾಗೆಯೆ! ಮೊದಲವರುಷದವರಿಗೆ ಪಾಠ. ಒಂದು ಗಂಟೆಗೆ ೨೦–೨೫ ಶ್ಲೋಕಗಳನ್ನು ಓದಿ ಮುಗಿಸಿದರು. ಶಾಲೆಯಲ್ಲಿ ಕಟೆದು ಕಟೆದು ಹೇಳಿಸಿಕೊಂಡ ಮೊದಲು ವರುಷದ ಹುಡುಗರು ಕಕ್ಕಾವಿಕ್ಕಿಯಾದರು. ಶಾಲೆಯಲ್ಲಿ ಶಿಕ್ಷಕರೊಂದಿಗೆ ಸಲುಗೆ ಇರುವುದು. ಕಾಲೇಜದಲ್ಲಿ ಹಾಗಲ್ಲ. ತಮಗೆ ತಿಳಿಯಲೊಲ್ಲದು ಎಂದು ಹೇಳಲು ಗಾಬರಿ. ಯಾರು ಹೇಳಬೇಕು? ಕೊನೆಗೊಬ್ಬ ಧೈರ್ಯಮಾಡಿ, 'ಗಂಟೆಗೆ ೨೦–೨೫ ಶ್ಲೋಕಗಳನ್ನು ಹೇಳಿದರೆ ನಮಗೆ ನಿಮ್ಮ ವೇಗದಂತೆ ಸಾಗಲು ಆಗದು' ಎಂದು ಹೇಳಿದ. 'ಒಳ್ಳೇದು'

ಎಂದು ಅಂದಿನ ಪಾಠ ಮುಗಿಸಿದರು. ಮರುದಿನದಿಂದ ಸಾವಧಾನವಾಗಿ ಸಾಗತೊಡಗಿತು—ಅಷ್ಟರಲ್ಲಿ 'ಸಾವಧಾನ' ಬಂದಿತ್ತು.

ಈ ಪರೀಕ್ಷೆಯಾಗುವುದರೊಳಗೆ ಮತ್ತೊಂದು ಕಾದಿತ್ತು. ಸರಕಾರಿ ಸೇವೆಯಲ್ಲಿ ಸೇರುವವರ ವೈದ್ಯಕೀಯ ಚಿಕಿತ್ಸೆಯಾಗಬೇಕು. ಸಿವಿಲ್‌ಸರ್ಜನ್‌ನ ಕಡೆಗೆ ಹೋದರು. ಅವನು ಎಲ್ಲವನ್ನು ಪರೀಕ್ಷೆಮಾಡಿದ. ಸಮಾಧಾನಕರವಾಗಿ ಕಂಡಿತು. ಆದರೆ ಮೂತ್ರ ಪರೀಕ್ಷೆ ಮಾಡುವಾಗ ತಡೆದ. ಮೂತ್ರದಲ್ಲಿ ಏನೂ ಇಲ್ಲ. ನಿರೋಗಿ ಮನುಷ್ಯನಲ್ಲಿರಬೇಕಾದ ಲವಣ–ಆಮ್ಲ–ಸಕ್ಕರೆಯ ಅಂಶವು ಇದ್ದಿಲ್ಲ. ಅದರ ಕಾರಣವು ಅವನಿಗೆ ತಿಳಿಯಲಿಲ್ಲ. ಮೊಗದ ಮೇಲೆ ಆರೋಗ್ಯವಿದ್ದಂತೆ ಕಳೆ. 'ಇನ್ನೊಂದು ವಾರ ತಡೆದು ಬನ್ನಿರಿ' ಎಂದು ಹೇಳಿ ಕಳುಹಿಸಿದ. ಎಂಟು ದಿನಗಳ ಮೇಲೆ ಹೋದರು. ಆಗ್ಗೆಯೂ ಹಾಗೆಯೆ! ಆಗ ಸರ್ಜನನು ಕೇಳಿದನು. 'ನಿಮ್ಮ ಇರುವಿಕೆಯಲ್ಲಿ ಏನಾದರೂ ವ್ಯತ್ಯಾಸ ವಾಗಿದೆಯೇನು?' 'ಏನಿಲ್ಲ! ಜುಲೈ ೧ ರಿಂದ ಊಟವಿಲ್ಲ, ಬರಿಯ ಚಹ ಎರಡು ಕಪ್ಪು' ಎಂದು ಹೇಳಿದರು. ಅದು ಅಗಸ್ಟ ಮಧ್ಯದ ಸುಮಾರು. 'ಹೀಗೇಕೆ?...ಇರಲಿ! ಎಂಟು ದಿನ ಊಟಮಾಡಿ ಬನ್ನಿ' ಎಂದು ಹೇಳಿದ. ಆ ಮೇಲೆ ಎಲ್ಲವೂ ಸರಿಯಾಯಿತು.

ಎರಡಾಣೆಯ ಬಂಡವಲ ಮೇಲೆ ಧಾರವಾಡದ ನಿಲ್ದಾಣದ ಮೇಲೆ ಇಳಿದ ಜಾಗಿರದಾರರು ನಾಲ್ಕಾರು ದಿನಗಳ ವರೆಗೆ ಗೆಳೆಯ ಜಮುಖಂಡಿಯವರಲ್ಲಿ ಇದ್ದರು. ಅವರಲ್ಲಿದ್ದಾಗ ಊಟಮಾಡುತ್ತಿದ್ದರು. ಆದರೆ ಮುಂದೆ ತಮ್ಮ ವಾಸವನ್ನು 'ಫಡನೀಸ' ಅವರ ಬಂಗಲೆಗೆ ಸಾಗಿಸಿದರು. ಅಲ್ಲಿ ಬಂದ ನಂತರ ಊಟ ಮಾಡುವುದು ಬೇಸರವಾಗತೊಡಗಿತು. ಉಪವಾಸ ಬಿದ್ದು ಚಟವಾದುದು ಒಂದು ಕಾರಣ; ಊಟದ ವೆಚ್ಚಕ್ಕೆ ನಾಕಾಗದಷ್ಟು ದುಡ್ಡು ಹತ್ತಿರದಲ್ಲಿ. ಇವೆರಡು ಕಾರಣಗಳ ಮೂಲಕ ಊಟ ಬೇಸರ. ಆದರೆ ಡಾಕ್ಟರನ ಸಲಹೆಯ ಪ್ರಕಾರ ಊಟಮಾಡತೊಡಗಿದರು.

ಇವೆಲ್ಲ ಹೊರಗಿನ ಜನರ ಸಮಾಧಾನಕ್ಕಾಗಿ; ಮನಸ್ಸಿನಲ್ಲಿ ಸಮಾಧಾನ ವಿಲ್ಲ. ವಾಸೂಮಾಸ್ತರರು ಬಂದರು–ಹೋದರು. ಸಾಲದ ಭಾರದ ಬುಡದಲ್ಲಿ ಬಗ್ಗಿಹೋಗಿತ್ತು ಮನವು. ಸಂಬಳವೇನೊ ಬರತೊಡಗಿದೆ. ಆದರೆ ಪ್ರೊಫೆಸರನ ಸ್ಥಿತಿಯನ್ನು—ಸಮಾಜದಲ್ಲಿಯ ಸ್ಥಿತಿಯನ್ನು ಕಾಯಿದುಕೊಂಡು ದುಡ್ಡು

ಉಳಿಸಿ, ಸಾಲಕ್ಕೆ ಕಟ್ಟಬೇಕಾದರೆ ಸಾಕು ಬೇಕಾಗುತ್ತಿತ್ತು. ಯಾವ ಹಂಚಿಕೆ ಹಾಕಿದರೂ ಸಾಲದಾಯಿತು. ಕೆಲಸವಿಲ್ಲದೆ ನಿರುದ್ಯೋಗಿಯಾಗಿದ್ದಾಗ ಒಂದು ತರಹದ ವಿಚಾರ; ಈಗ ಮತ್ತೊಂದು ರೀತಿಯಲ್ಲಿ. ತಮ್ಮ ಕಷ್ಟಗಳ ಜಳವು ಹೆರವರಿಗೆ ತಾಗಬಾರದೆಂದು ಯಾರೊಡನೆಯೂ ಹೆಚ್ಚು ಮಾತನಾಡುವುದು ಬೇಕಾಗುತ್ತಿದ್ದಿಲ್ಲ. ಮಂಚದ ಮೇಲೆ ಬಿದ್ದುಕೊಂಡು ಸಿಗರೇಟು ಸೇದುವುದು, ವಿಚಾರ ಮಾಡುವುದು, ಇದ್ದುದರಲ್ಲಿಯೆ ಸುಖವೆನಿಸುತ್ತಿತ್ತು. ಏಕಾಂಗಿಯಾಗಿರುವುದು ಹಾಯೆನಿಸುತ್ತಿತ್ತು.

'ಭಾಷಾಶಾಸ್ತ್ರ'ದ ಗ್ರಂಥವನ್ನು ಸಿದ್ಧಮಾಡಬೇಕೆಂದು ದುಡಿಯತೊಡಗಿದರು. 'ಸಂಸ್ಕೃತ ನಾಟಕದ ಅಭ್ಯಾಸ'ವೆಂಬ ಪ್ರಬಂಧವನ್ನು ಮುಂಬೈಯಲ್ಲಿದ್ದಾಗ ಪ್ರಾರಂಭಿಸಿದ್ದರಲ್ಲದೆ ಮುಂಬಯಿ ವಿಶ್ವವಿದ್ಯಾಲಯದ ಪತ್ರಿಕೆಯಲ್ಲಿ ಅದರ ಒಂದು ಪ್ರಕರಣವು ಅಚ್ಚಾಗಿತ್ತು. ಕಾಲೇಜದಲ್ಲಿ ಅಭ್ಯಾಸ ಹೇಳಲು ಅನುಕೂಲ ಎಂದು ಆ ಪ್ರಬಂಧವನ್ನು ಪೂರ್ತಿ ಮಾಡಲು ತೊಡಗಿದರು.

ಇವಲ್ಲದೆ, ಮನದೊಲವಿನ ಮಾತು–ನಾಟಕವು ಆಗಾಗ ಕೆರಳಿಸುತ್ತಿತ್ತು. ಕಾಲೇಜದ ಮೊದಲ ಟರ್ಮು ಕೇವಲ ಹಿಂದಿನ ಸಂಕಲ್ಪಗಳ ಪೂರ್ತಿಗಾಗಿ ಮೀಸಲಾಗಿದ್ದಂತೆ ತೋರಿತು. ಹಾಫಕೀನ ಸಂಸ್ಥೆಯಲ್ಲಿಯ ನವಕರಿ ಮುಗಿದು ಮುಂದಿನ ದಾರಿ ಕಾಣುವ ವರೆಗೆ ಕಳೆಯಬೇಕಾದ ಅವಧಿಯಲ್ಲಿ 'ಅಧಿಕಮಾಸ'ವೆಂಬ ನಾಟಕವನ್ನು ಬರೆಯತೊಡಗಿದ್ದರು. ಅದನ್ನು ಧಾರವಾಡದಲ್ಲಿ ಪೂರ್ತಿ ಮಾಡಲು ಹಿಡಿದರು.

ನವಕರಿಗಾಗಿ ಆಗಾಗ ಮುಂಬಯಿಯಿಂದ ಪುಣೆಗೆ ಅಲೆದಾಡಬೇಕಾಗುತ್ತಿತ್ತು. ಒಮ್ಮೆ ಒಂದು ಸಂಗತಿ ನಡೆಯಿತು. ಅದು 'ಅಧಿಕಮಾಸ'ಕ್ಕೆ ಪ್ರಚೋದನೆ ಕೊಟ್ಟಿತು.

ಇವರು ಕುಳಿತ ಡಬ್ಬಿಯಲ್ಲಿಯೆ ಎದುರಾಗಿ ಇಬ್ಬರು ತರುಣಿಯರು ಕುಳಿತಿದ್ದಾರೆ. ಅವರೊಂದಿಗೆ ದಿನ ಹೋದವನೊಬ್ಬ. ಅವರಲ್ಲಿ ಮಾತು ನಡೆದಿತ್ತು: ಒಬ್ಬಳದು ಚಿಕ್ಕಂದಿನಲ್ಲಿಯೆ ಮದುವೆಯಾಗಿತ್ತಂತೆ. ಅದೇಕೊ ಅವಳ ಗಂಡನು ಅವಳನ್ನು ತೊರೆದನಂತೆ. ಮುಂದೆ ಅವಳು ಕಲಿಯ ತೊಡಗಿದಳಂತೆ. ಆಗ ಎಂ. ಬಿ. ಬಿ. ಎಸ್. ಕ್ಲಾಸಿನಲ್ಲಿ ಓದುತ್ತಿದ್ದಳೆಂದು

ತಿಳಿದು ಬಂತು. ರೂಪದಿಂದ ಅಷ್ಟೊಂದು...ರೂಪವತಿಯಲ್ಲ, ತೆಳುವಾದ ದೇಹ. ಇನ್ನೊಬ್ಬಳು ಚೆಲುವೆ. 'ಗಂಡ ಬಿಟ್ಟದ್ದು ಒಳ್ಳೆಯದೆ ಆಯಿತು' ಎಂದಳು ಮೊದಲಿನವಳು. ಆ ಮಾತು ಜಾಗಿರದಾರರ ಮನವನ್ನು ಸೆಳೆಯಿತು. ನಮ್ಮ ಸಮಾಜದ ಮದುವೆಯ ವಿಚಾರಕ್ಕೆ ಸಾಗಿಸಿತು. ಇಂತಹಳ ಗಂಡನು ಬದುಕಿದ್ದರೂ ಇವಳ ದೃಷ್ಟಿಯಿಂದ ಸತ್ತಂತೆಯೆ. ಅಷ್ಟು ಬೇಗ, ಅವಳಿಗೆ ತಿಳಿಯದೆ ಇದ್ದಾಗ, ಮದುವೆ ಏಕೆ ಮಾಡಬೇಕಾಗಿತ್ತು ? ತೀರ ಚಿಕ್ಕವಳಿದ್ದಾಗ ಮದುವೆಯಾಗಿ ಗಂಡ ಬಿಟ್ಟು–ಸತ್ತು ಹೋದವಳ ಮದುವೆ, ಮುಂದೆ ಏಕಾಗ ಬಾರದು ? ಅದು ಸಮಾಜದಲ್ಲಿ ನಡೆದು ಬಂದ ರೀತಿ—ನೀತಿಗೆ ವಿರುದ್ಧ. ಇಂತಹರ ಮದುವೆಗಳಾಗಬೇಕಾದರೆ, ಪುನರ್ವಿವಾಹವಾಗಬೇಕಾದರೆ, ಪದ್ಧತಿ-ಮದುವೆಗಳಂತೆ ಇದ್ದ ಹನ್ನೆರಡು ತಿಂಗಳಲ್ಲಿ ಆಗುವಂತೆ ಇಲ್ಲ. ಅದಕ್ಕೆ ಬೇಕು ಬೇರೆ ಕಾಲ–'ಅಧಿಕಮಾಸ.'

'ಅಧಿಕಮಾಸ'ವು ನಮ್ಮ ಸಮಾಜದ ವಿವಾಹಸಂಸ್ಥೆಯ–ದುಃಸ್ಥಿತಿಯನ್ನು ಚಿತ್ರಿಸುವುದು. ತಾಯಿತಂದೆಗಳು ತಮ್ಮ ಮಗಳನ್ನು ಒಬ್ಬನಿಗಾಗಿ ಎಂದು ನಿಶ್ಚಯಿಸಿರುವರು. ಮಗಳು ತನಗಾಗಿ ಬೇರೊಬ್ಬನ್ನು ನೋಡಿಕೊಂಡು ಅವನೊಡನೆ ಕೂಡಿರುವಳು. ಗೊತ್ತು ಮಾಡಿದ ವರನಿಗೆ ಈ ವಿಷಯವು ತಿಳಿದು ಅವನಿಗೆ ಅಸಹ್ಯವೆನಿಸಿ ಬೇರೊಬ್ಬಳನ್ನು ಬಯಸುವನು—ಅವಳು ನಿರ್ಮಲಳೆಂದು. ಆದರೆ ಆ ಮೇಲೆ ತಿಳಿದು ಬರುವುದು ಅವಳೂ ಮೊದಲೊಬ್ಬನ ಹೆಂಡತಿಯಾಗಿದ್ದಳೆಂದು.

ರೇಲವೆಯಲ್ಲಿ ಕಂಡ–ಕೇಳಿದ ಸಂಗತಿಯು ನಾಟಕದ ತಳಹದಿಯಾಗಿರುವುದರಿಂದ ನಾಟಕದಲ್ಲಿ, ಸ್ಟೇಶನ್, ಸ್ಟೇಶನ್‌ಮಾಸ್ತರ–ಪೋರ್ಟರ, ಇವೆಲ್ಲ ಪ್ರಾಸಂಗಿಕ ಹಿನ್ನೆಲೆಯಾಗಿವೆ. ಇಡಿ ನಾಟಕದಲ್ಲಿ ಮೋಜಿನ ಪಾತ್ರವೆಂದರೆ ಸುಬ್ಬರಾಯ: ಶಾಲಾಶಿಕ್ಷಕ. ಶಾಲಾಶಿಕ್ಷಕರಿಗೆ ವ್ಯವಹಾರ ಜ್ಞಾನವಿರುವುದಿಲ್ಲವೆಂಬ ವಿಚಾರವನ್ನಿಟ್ಟುಕೊಂಡು ಸುಬ್ಬರಾಯನ ಚಿತ್ರವನ್ನು ತೆಗೆದಿದ್ದಾರೆ. ಆ ಚಿತ್ರವು ಸ್ಫುಟವಾಗಿದೆ. ಅವನು ಯಾವ ಮಾತೆ ಆಡಲಿ; ಅದರಲ್ಲಿ ಶಾಲಾ ಶಿಕ್ಷಕನ ಸ್ಪರ್ಶವಿದೆ. ಮಾದರಿಗಾಗಿ:

ಸುಬ್ಬರಾಯ: ಒಳ್ಳೇದು ! ನನ್ನ ಮಾತು ಸಿದ್ಧಮಾಡಲಿಕ್ಕೆ ನಮ್ಮ ಪಠ್ಯ ಗ್ರಂಥದ ಕವಿಯ ಒಂದು ಸರಸ ದೃಷ್ಟಾಂತ ಕೊಡುವೆ.

ಶಾರದೆ: ನಿಮ್ಮ ದೃಷ್ಟಾಂತ ಬೇಡ; ವೇದಾಂತ ಬೇಡ.

ಸುಬ್ಬರಾಯ: (ಸಂದರ್ಭ ತಿಳಿಯದೆ) ದೃಷ್ಟಾಂತವೆಂದರೆ ವೇದಾಂತವಲ್ಲ. ವೇದವು ಅದೃಷ್ಟ. ಕೇಳಿಯಾದರೂ ಕೇಳಿರಿ. ಕವಿಯು ಅನ್ನುವುದು ಹೀಗೆ: (ಶಾಲೆಯ ರೂಢಿಯ ಹಾವಭಾವಗಳಿಂದ) 'ಕೊಡದೊಳಗೆಷ್ಟು ನಿಲ್ವುದು ಸಮುದ್ರ ಜಲಂ'— ಅಂದರೆ, ಸಮುದ್ರ ಸಂಬಂಧಿ ಜಲವು ಕೊಡದೊಳಗೆ ಎಷ್ಟು ದಿವಸವಾದರೂ ನಿಲ್ಲೇನಿಲ್ಲುವುದು. ಯಾಕೆ ? ನೋಡಿರಿ ! ಕವಿಯ ಶಾಬ್ದಿಕ ಪ್ರಾಯೋಗಿಕ ಚಾತುರ್ಯ ! ಸಮುದ್ರ ಜಲಂ ಎಂದು ಹೇಳಿರುವ, ಜಾಣ; ಅಂದರೆ ಸಮುದ್ರ ಸಂಬಂಧಿಕ ಜಲ. ಅದು ಎಂತಹದು? ಉಪ್ಪು! ಆದ್ದರಿಂದ ಎಷ್ಟು ದಿವಸ ಕೊಡದೊಳಗಿಟ್ಟರೂ ಉಪ್ಪುನೀರನ್ನು ಕುಡಿಯುವವರು ಯಾರು ? ಅದು ಹಾಗೆಯೆ ಉಳಿಯುವುದು, ಎಂಬ ತಾತ್ಪರ್ಯ. ಅದರಂತೆ, ಮುಂದೆ ಲಕ್ಷ್ಯವಿರಲಿ; ಶ್ಲೇಷವೆಂಬ ಅಲಂಕಾರ ಬರುವುದು; ಯಾವ ಅಲಂಕಾರ ? ಶ್ಲೇಷ ! ಹಂ— ಅದರಂತೆ, 'ಕೊಡದೆ ಒಳಗೆಷ್ಟು ನಿಲ್ವುದು.' ಅಂದರೆ—ಕೊಡಲಾರದೆ ಒಳಗೆ ನಿಲ್ಲುವುದು ಬಲುಕಷ್ಟ. ( ಶಾರದೆಯು ನಗುವಳು ) ಯಾಕೆ ? ದೃಷ್ಟಾಂತವು ಪ್ರಸಂಗಾವಧಾನಿಯಲ್ಲವೆ ? '

ಆಗಿನ ಕನ್ನಡನಾಡಿನ ಬಗೆಗೆ, ತಮ್ಮ ಅನುಭವದ ಕೆಲವು ಮಾತುಗಳನ್ನು ಹೇಳಿದ್ದಾರೆ:

ರಮೇಶ: ಕರೀ ನೀರಿನ ಶಿಕ್ಷೆಯೆಂದರೇನು ಗೊತ್ತಿದೆಯೆ ? ತನ್ನ ದೇಶದಿಂದ ಹೊರಗೆ ಹಾಕಿಸಿಕೊಳ್ಳುವುದು. ಕನ್ನಡಿಗರಿಗೆ ಕರೀ ನೀರಿನ ಶಿಕ್ಷೆಯಿಲ್ಲವೆ ? ನೀವು ಹುಟ್ಟುವುದಿಷ್ಟೆ ಕರ್ನಾಟಕದಲ್ಲಿ. ಬೆಳೆಯುವುದು ಎರಡನೆಯವರ ಸಂಸ್ಕೃತಿಯಲ್ಲಿ. ವಿದ್ಯೆ ಕಲಿಯಬೇಕಾದರೆ ಕರ್ನಾಟಕ ಬಿಟ್ಟು ಹೋಗಬೇಕು. ಕಲಿತ ವಿದ್ಯೆಯ ಉಪಯೋಗ ಮಾಡಿಕೊಳ್ಳಬೇಕಾದರೆ ಕರ್ನಾಟಕದ ಹೊರಗೆ ಇರಬೇಕು. ಹಣ ಗಳಿಸಬೇಕಾದರೆ ಕರ್ನಾಟಕ ಬಿಡಬೇಕು. ಗಳಿಸಿದ ಹಣವು ಕರ್ನಾಟಕ ಬಿಡಬೇಕು. ಉತ್ತರದಲ್ಲಿಯ ಮಾರವಾಡಿ ಜನರ ವಿರುದ್ಧ ದಕ್ಷಿಣದಲ್ಲಿ ನಾವು ಕನ್ನಡಿಗರು. ಮಾರವಾಡಿಗಳು ಹೊರಗೆ ದುಡಿದು ಮನೆತುಂಬುವರು. ನಾವು

ತುಂಬಿದ ಮನೆಯನ್ನು ಹೊರಗೆ ತೂರಿ ಬಿಡುವೆವು. ಕರ್ನಾಟಕಕ್ಕಾಗಿ ದುಡಿಯುವವರಿಲ್ಲ; ಕರ್ನಾಟಕವು ದುಡಿಯುವವರ ಸಲುವಾಗಿ ಅಲ್ಲ. ( ಕಿಸೆಯೊಳಗೆ ಕೈ ಹಾಕಿ ) ನೋಡಿದಿಯಿಲ್ಲೊ ! ಇಂತಹ ಚಟವನ್ನು ಸಹ ಹೊರಗೆಯೆ ಕಲಿಯಬೇಕಾಗುವುದು. (ಸಿಗರೇಟು ಹಚ್ಚುವನು) ಯಾವುದೇ ಕೆಲಸವಾಗಲಿ; ಮಾಡುವ ಕೆಲಸವಿದ್ದರೆ ಅದನ್ನು ಮಾಡಲು ಕರ್ನಾಟಕವನ್ನು ಬಿಡಬೇಕಾಗುವುದು.

ನಮ್ಮ ಸಮಾಜಕ್ಕೆ ಏಟೊಂದು:

ರಮೇಶ: ನಮ್ಮ ದೇಶದ ಕಲ್ಪನೆಯೆ ಹಾಗಿದೆ. ಗಂಡಸು ಹೆಂಗಸು ಕೂಡಿ ಬಂದರೆ ಆಗಿ ಹೋಯಿತು. ಹೆಂಗಸು ದೊಡ್ಡವಳಿದ್ದರೆ ತಾಯಿ–ಮಗ; ಗಂಡಸು ದೊಡ್ಡವನಿದ್ದರೆ ಗಂಡ–ಹೆಂಡಿರು; ಗಂಡಸು ಹೆಂಗಸರ ನಡುವೆ ಮತ್ತೊಂದು ತರದಿಂದ ಸಂಬಂಧವಿರುವುದು ಶಕ್ಯವಿದೆಯೆಂದು ಕಲ್ಪನೆ ಕೂಡ ಇವರಿಗೆ ಬರುವುದಿಲ್ಲ.

ತಮ್ಮ ಬಗ್ಗೆ ಹೇಳಿಕೊಳ್ಳುವುದು:

ರಮೇಶ: ನಿಮ್ಮ ಈ ಎರಡು ಕಣ್ಣಿಗೆ ಕಾಣಿಸುವುದೆಲ್ಲ ಸುಳ್ಳು; ಮನುಷ್ಯನಿಗೆ ಮೂರನೆಯದೊಂದು ಕಣ್ಣು ಇರುವುದೆಂದು ಒಬ್ಬ ಶ್ರೇಷ್ಠ ತತ್ವಜ್ಞಾನಿಯು ಹೇಳಿದ್ದಾನೆ. (ಮುಕ್ಕಣ್ಣ-ವಿರಾಟಪುರುಷ)

ಸ್ವಭಾವದ ಬಗೆಗೆ:

ರಮೇಶ: ಸಹವಾಸದಿಂದ ಸ್ವಭಾವದ ಪರಿಚಯವಾಗಿರಬೇಕೆಂದು ತಿಳಿದಿದ್ದೆ. ಇನ್ನು ಸ್ಪಷ್ಟ ಹೇಳಿಬಿಡುವೆ. ನಾನು ಸ್ವಭಾವದಿಂದಲೆ ಹಟವಾದಿಯು; ಆದರೆ ನನ್ನ ಹಟವು ಬುದ್ಧಿಯ ಹಟವು. ಸತ್ಯಕ್ಕಾಗಿ ಬುದ್ಧಿಯನ್ನು ಸರಿಯಾಗಿ ಹರಿಬಿಡುವ ಹಟವು ನನ್ನದು; ಬುದ್ಧಿಗೆ ಸರಿಯಾಗಿ ತೋರುವ ಸತ್ಯದ ಹಟ ನನ್ನದು.

ಪ್ರೊಫೆಸರ ಜಾಗಿರದಾರರು ನಾಟಕಕಾರರಿದ್ದಾರೆಂದು ಸುದ್ದಿ ಹಬ್ಬತೊಡಗಿತು ಕಾಲೇಜದಲ್ಲಿ. ಕನ್ನಡಿಗರು ಎದೆಯೇರಿಸಿ ನಡೆಯತೊಡಗಿದರು. ಕರ್ನಾಟಕದ ಕೇಂದ್ರವೆನಿಸಿದ ಧಾರವಾಡದಲ್ಲಿ ಕಾಲೇಜು ಇದ್ದರೂ ಅಲ್ಲಿ

ಆಳುವವರೆಲ್ಲ ಮರಾಠಿ ಗೋತ್ರದವರೆ ಆಗಿದ್ದರು. ಅದಕ್ಕೆ ಕನ್ನಡಕ್ಕೆ ಮನ್ನಣೆ ಕಡಿಮೆ ಇತ್ತು. ಜಾಗಿರದಾರರ ಬರವು ಆ ಜನರಿಗೆ ಬರೆ ಕೊಟ್ಟಂತಾಯಿತು. ಕನ್ನಡಿಗರ ಉಬ್ಬನ್ನು ಉದುರಿಸಬೇಕೆಂದು ಮರಾಠಿ ಹುಡುಗರಿಂದ ಪ್ರಯತ್ನಗಳು ನಡೆದು, ಅವರು ಜಾಗಿರದಾರರನ್ನು ಕಡಗಣಿಸುತ್ತಿದ್ದರು. ಯಾವುದಕ್ಕೂ ಕಾಲ ಬರಬೇಕಲ್ಲವೆ? ಬಂತು! ಮರಾಠಿಗರಿಗೆ ಅಳಿಗಾಲ.

ಕರ್ನಾಟಕ ಕಾಲೇಜದ ನಾಟ್ಯಸಂಘದವರು ಜಾಗಿರದಾರರು ಬರೆದ 'ಉದರ ವೈರಾಗ್ಯ' ವನ್ನು ರಂಗಭೂಮಿಯ ಮೇಲೆ ತರಬೇಕೆಂದು ಪ್ರಯತ್ನ ಮಾಡತೊಡಗಿದರು. ಒಳ್ಳೇ ಹುರುಪಿನಿಂದ ಕಾರ್ಯ ನಡೆಯತೊಡಗಿತು. ಈ ಹುರುಪನ್ನು ನೋಡಿ ಮೂಗು ಮುರಿದವರನೇಕರು. ಅವರು ನಾಟಕವನ್ನು ನೋಡಲು ಕೂಡ ಮನಸ್ಸು ಮಾಡಲಿಲ್ಲ. ೧೯೩೦ನೆಯ ಸಪ್ಟೆಂಬರ ೨೯ನೆಯ ದಿನ ಶ್ರೀ. ಲೋಕೂರ ನಾರಾಯಣರಾಯರ ಅಧ್ಯಕ್ಷತೆಯಲ್ಲಿ ನಾಟಕವು ಜರುಗಿತು. ಜಾಗಿರದಾರರ ನಾಟಕವು ಮೊದಲನೆಯ ಸಲ ರಂಗಭೂಮಿಯ ಮೇಲೆ ಬಂದುದು. ಅದನ್ನು ಮೊದಲು ಮಾಡಿದರು, ಕರ್ನಾಟಕದ ಕುಲಪುರೋಹಿತರಾದ ಶ್ರೀ ಆಲೂರು ವೆಂಕಟರಾಯರು. ಹಿಂದೆ ಅವರೆ ಭವಿಷ್ಯ ನುಡಿದಿದ್ದರು. ಅವರ ಭವಿಷ್ಯವು ಸತ್ಯಸೃಷ್ಟಿಗೆ ಬಂತು. ನಾಟಕವು ಒಳ್ಳೆ ಯಶಸ್ವಿಯಾಯಿತು.

ನಾಟಕ ಮುಗಿದ ಮೇಲೆ ನಾಟಕಕಾರನ ಅಭಿನಂದನೆಯಾಯಿತು. ಸುತ್ತಲಿಂದಲೂ ಸೇರಿಬರುವ ಚಪ್ಪಾಳೆಗಳ ನಡುವೆ ನಿಂತ ಜಾಗಿರದಾರರು; ಕೊರಳಿಗೆ ಮಾಲೆ, ಅದು ಹೂವಿನ ಮಾಲೆಯೇನೊ ನಿಜ; ಆದರೆ ಅದು ಮುಂಬರುವ ಗೆಲುವಿನ ಮಾಲೆಯಂತಿತ್ತು. ಅಂದಿನ ಹಿಗ್ಗು ಹಿಂದಿನ ದಿನಗಳನ್ನು—ಕುಗ್ಗಿಸಿದ ದಿನಗಳನ್ನು ಬಗ್ಗಿಸಿತು. ಜಾಗಿರದಾರರ ಹೆಸರು ಪ್ರತಿಯೊಬ್ಬನ ಬಾಯಲ್ಲಿ. ಮರುದಿನ ಕಾಲೇಜದಲ್ಲಿ ವಿಶೇಷ ಗೌರವ. ಮೂಗು ಮುರಿಯುವವರ ಮೋರೆ ಕೆಳಗಾಯಿತು. ಎದೆಯುಬ್ಬಿಸಿದ ಕನ್ನಡಿಗರ ಮೊಗ ಮೇಲಾಯಿತು.

ಏಳ್ಗೆಯ ಕಾಲ ಬಂತು. ಡಿಸೆಂಬರ ೧೦ನೆಯ ದಿನ ಹುಬ್ಬಳ್ಳಿಯ ನ್ಯೂ ಇಂಗ್ಲಿಶ ಹಾಯ್‌ಸ್ಕೂಲಿನಲ್ಲಿ ಭಾಷಣವೊಂದು. ಮೊದಲನೆಯ ಸಾರ್ವಜನಿಕ ಭಾಷಣ. ಭಾಷಣದ ಬೆದರು ಬಂತು. ಆದರೆ ಅದು ಅವರನ್ನು

ತಡೆಯಲಿಲ್ಲ. ಹೆಸರು ಪಡೆದುದರ ಅರಿವೊಂದು. ಕಾಲೇಜದಲ್ಲಿ ಮಾತ ನಾಡಿದುದರ ಅನುಭವ ಮತ್ತೊಂದು. ಭಾಷಣವು ರಸವತ್ತಾಗಿತ್ತು. 'ನಾಟಕವೂ ಶಿಕ್ಷಣವೂ' ಎಂಬ ವಿಷಯದ ಮೇಲೆ— ಇಂಗ್ಲಿಶದಲ್ಲಿ. ಮುಂದೆ ಆ ಭಾಷಣದ ಕನ್ನಡದ ಸಾರವು 'ಪ್ರೇಮ'ದಲ್ಲಿ ಬಂತು. ನಾಟಕಕಾರ ಮಾತ್ರವಲ್ಲದೆ ಮಾತುಗಾರನೆಂದು ಮನ್ನಣೆ ಬಂತು.

ಪರಿಸ್ಥಿತಿಯಲ್ಲಿ ಬದಲಾವಣೆ ಬರತೊಡಗಿತು. ವಾಸಸ್ಥಾನವೂ ಬದ ಲಾಯಿತು. ಅಲ್ಲಿದ್ದಾಗಿನ ಒಂದು ಸಂಗತಿ. ಎಲ್ಲೆಲ್ಲಿಯೂ ಜಾಗಿರದಾರರ ಹೆಸರು ಕೇಳಬರುತ್ತಿತ್ತು. ಅದು ಹೆಚ್ಚಾಗಿ—ಸ್ಪಷ್ಟವಾಗಿ ಕೇಳಿಬರುತ್ತಿತ್ತು, ಕನ್ಯೆಯರ ತಂದೆಗಳಿಗೆ. ಒಬ್ಬ ಕನ್ಯಾಪಿತನು ತನ್ನ ಮಗನನ್ನು ಇವರೆಡೆಗೆ ಕಳುಹಿಸಿದ್ದ, ಮದುವೆಯ ವಿಚಾರ ಮಾಡಲು. ಆ ಮಗನು ಧಾರವಾಡಕ್ಕೆ ಬಂದನು. ಜನರು ಕೆಲವರು, ಜಾಗಿರದಾರರ ಬಗೆಗೆ ಕೆಲವು ವಿಚಿತ್ರ ಕಲ್ಪನೆ ಅವನ ತಲೆಯಲ್ಲಿ ಹಾಕಿದರು. ಅವನಿಗೆ ಧೈರ್ಯ ಸಾಲಲಿಲ್ಲ; ತಿರುಗಿ ಹಾಗೆಯೆ ಊರಿಗೆ ಹೋದ. ಅವನ ತಂದೆ ಅವನನ್ನು ಬಾಯಿಗೆ ಬಂದಂತೆ ಬಯಿದು, 'ನಿನ್ನನ್ನು ಕೇಳಲು ಕಳಿಸಿದುದು ಜಾಗಿರದಾರರನ್ನು—ಜನರನ್ನಲ್ಲ' ಎಂದು ಬೆದರಿಸಿದನು. 'ನಾವು ಕನ್ಯೆ ಕೊಡಬೇಕೆಂಬುದು ಜಾಗಿರದಾರರಿಗೆ; ಜನರ ಮಾತೇನು ?' ಎಂದು ಮಗನನ್ನು ಮರಳಿ ಕಳುಹಿಸಿದ. ಮನದಲ್ಲಿ ಜನರು ಹೇಳಿದ ವಿಚಾರಗಳನ್ನಿಟ್ಟುಕೊಂಡು, ಅಪ್ಪನ ಆಜ್ಞೆಯನ್ನು ದುಬ್ಬಕ್ಕೆ ಅನಿಸಿ ಕೊಂಡು, ಅವನು ಜಾಗಿರದಾರರ ಮನೆಗೆ ಬಂದ. ತಾನು ಬಂದ ಕಾರಣ ವನ್ನು ತಿಳಿಸಿದ. ಜಾಗಿರದಾರರಿಗೆ ತಿಳಿದಿತ್ತು, ಅವನು ಮೊದಲೊಮ್ಮೆ ಬಂದು ಹೋದುದು. ಅವನನ್ನು ಪೀಡಿಸಬೇಕೆಂದು, 'ನೀವು ಬಂದಿದ್ದೀರಿ ನನ್ನ ಮದುವೆಯ ಬಗ್ಗೆ ವಿಚಾರಿಸಲು; ಊರಲ್ಲಿ ಜನರು ಹೇಳಿರಬಹುದು, ನಾನು ಒಬ್ಬ ಕುಡುಕನೆಂದು. ಪರದೇಶ ಕಂಡು ಬಂದವನೆಂದು ಅನೇಕ ರೋಗಗಳು ಅಂಟಿವೆಯೆಂದೂ ಜನರು ಹೇಳಿರಬಹುದು. ನನ್ನ ಬಗೆಗೆ ನಿಮಗೆ ಸಂಪೂರ್ಣ ಮಾಹಿತಿ ಸಿಕ್ಕಿದೆ. ಆದರೆ ನಿಮ್ಮ ಹುಡುಗೆಯ ಬಗ್ಗೆ ನನಗೆ ಏನೂ ಗೊತ್ತಿಲ್ಲವಲ್ಲ! ನಿಮ್ಮ ಹುಡಿಗೆಗೆ ಮಕ್ಕಳು ಎಷ್ಟು? ತಂದೆ ಯಾರು ಎಂಬುದು ಮಹತ್ವವಿಲ್ಲ!' ಎಂದು ಕೇಳಿದಾಗ ಬಂದವನು ಮುಂದು ಗಾಣದವನಾಗಿದ್ದ. ಅವನಿಗೆ ಅಪ್ಪಣೆ ಕೊಡಬೇಕೆಂದು, 'ಈಗ ನೀವು

ಹೋಗಿರಿ ! ನಿಮ್ಮ ಹಿರಿಯರಿಗೆ ಹೇಳಿರಿ' ಎಂದು ಹೇಳಿಕಳಿಸಿದರು. ಮದುವೆಯ ಮಾತು ಎಂದರೆ ಅವರಿಗೇನೊ ಮುಳ್ಳು ಬರುತ್ತಿತ್ತು. ಸಾಲವಿನ್ನೂ ಸಹಿಸಲಾರ ದಷ್ಟು ಇದ್ದಾಗ ಮತ್ತೊಂದು ಏಕೆ ಗಂಟು ಕಟ್ಟಿಕೊಳ್ಳಬೇಕು, ಎಂದು.

ವಾಸಸ್ಥಾನವು ಬದಲಾಯಿತು. ಹೊಸ ಹವ್ಯಾಸಗಳೂ ಬಂದುವು. 'ಮುಹೂರ್ತ' ವೆಂಬ ಏಕಾಂಕವೊಂದನ್ನು ಬರೆದರು. ಅದು ಒಳ್ಳೆಯ 'ಮುಹೂರ್ತ'. ಅನಂತರ ತೀರ ಹೊಸದೊಂದು ಸಂಗತಿ. ಇಂಗ್ಲಿಶದಲ್ಲಿ ಮೂರಂಕಿನ ನಾಟಕವೊಂದನ್ನು ಬರೆದರು. ರಾಮಾಯಣದ ಕತೆಯನ್ನೆ ಹಿನ್ನೆಲೆಯಾಗಿ ಮಾಡಿಕೊಂಡು, ನಾಟಕವನ್ನು ಬರೆದುದಾಗಿದೆ. ಅದರ ಹೆಸರು: 'ಮಾನವನೊ ಅತಿಮಾನವನೊ' (Human or Superhuman?) ಎಂದು. ಅದರಲ್ಲಿ ರಾಮನು ಮಾನವನೊ ಅತಿಮಾನವನೊ ಎಂದು ವಿಚಾರಿ ಸಿದ್ದಾಗಿದೆ. ಅಲ್ಲದೆ ತಮ್ಮ ಮತದಂತೆ ಸ್ತ್ರೀಯ ಮೇಲ್ಮೆಯನ್ನು ತೋರಿಸಿ ದ್ದಾರೆ, 'ಸೀತೆ'ಯ ಪಾತ್ರದಲ್ಲಿ. ಇಂಗ್ಲಿಶ ಭಾಷೆಯಲ್ಲಿದ್ದರೂ ಆ ನಾಟಕದಲ್ಲಿ ಕ್ಷಣಕ್ಷಣಕ್ಕೆ ಜಾಗಿರದಾರರ ಸ್ಪರ್ಶವು ಎದ್ದು ಕಾಣುವುದು.

ರಾಮಾಯಣದ ಕತೆ ಯಾರಿಗೆ ಗೊತ್ತಿಲ್ಲ ? ರಾಮ-ಲಕ್ಷ್ಮಣ-ಸೀತೆಯರು ತಮ್ಮ ವನವಾಸವನ್ನು ದಂಡಕಾರಣ್ಯದಲ್ಲಿ ಕಳೆಯುತ್ತಿರುವರು. ಶೂರ್ಪ-ನಖಿಯು ಬಂದು ಒಮ್ಮೆ ರಾಮನನ್ನು ನೋಡುವಳು. ಅವನ ರೂಪ-ಯೌವನವು ಅವಳ ಮನಸೆಳೆಯುವುದು. ರಾಮನ ಮನಸ್ಸಾದರೂ ಮಾನವ ನಂತೆ ಹೊಯ್ದಾಡುವುದು. ಇದರ ಸುಳುವು ಸೀತೆಗೆ ಸಿಗುವುದು. ಅವಳು ಮುನಿಸು ತೋರುವಳು. ರಾಮನು ಲಕ್ಷ್ಮಣನಿಗೆ ಆಜ್ಞೆಮಾಡಿ ಶೂರ್ಪ-ನಖಿಯ ಮೂಗು-ಮೋರೆಯನ್ನು ಗಾಸಿಸುವನು. ಶೂರ್ಪನಖಿಯು ಅದ ನ್ನೆಲ್ಲ ರಾಮನ ಮೇಲಿನ ಪ್ರೇಮಕ್ಕಾಗಿ ಸಹಿಸುವಳು. ರಾಮನಲ್ಲಿಯ ಅವಳ ಪ್ರೇಮ ನಿಶ್ಚಲ. ಲಂಕೆಗೆ ಹೋಗುವಳು. ಅಣ್ಣ ರಾವಣನು, ಸಿಟ್ಟಿಗೆದ್ದು ವೈರಿಯನ್ನು ಕೊಲ್ಲುವೆನೆಂದು ಆವೇಶದಿಂದ ಹೇಳುವಾಗ,

**Shurpa :** Is love just a vanity to man ? Is it but one vice of man? To me –a woman– love is life. If you would kill my love, kill my life. What would you with Rama's

> life ? I love him not because he lives but that he lives in me. Rama lives because I love him. Kill him! I do not love his body. He would live so long I live. He would live for me for ever.'

ಎಂದು ಹೇಳಿದರೂ ರಾವಣನು ಮೋಸದಿಂದ, ಸೀತೆಯನ್ನು ಲಂಕೆಗೆ ಓಡಿಸಿಕೊಂಡು ಹೋಗುವನು. ಸೀತೆಯಿಲ್ಲದ ರಾಮನ ಜೀವಿತವು ಸಪ್ಪಗಾಯಿತು. ಇದನ್ನು ಕೂಡ ನೋಡಿ ತಡೆಯದಾದಳು ಶೂರ್ಪನಖಿ. ರಾಮನು ಸುಖದಿಂದಿರಬೇಕೆಂದು ಸೀತೆಯು ಇದ್ದ ಸ್ಥಾನವನ್ನು ಹೇಳುವಳು. ಪ್ರೇಮವು ತ್ಯಾಗದಿಂದಲ್ಲವೆ ತಿಳಿವುದು ?

ಶೂರ್ಪನಖಿಯ ಚಿತ್ರವು ಚೆನ್ನಾಗಿ ಬಂದಿದೆ. ಅವಳ ಬಗೆಗೆ ಕನಿಕರವುಂಟಾಗುವುದು. ರಾಮನಲ್ಲಿ ಪ್ರೇಮ ಮಾಡುವುದು ಅವಳ ತಪ್ಪೆ ? ಅವಳ ವ್ಯಾಖ್ಯೆಯ ಪ್ರಕಾರ ಗಂಡಸು ಕೇವಲ ಆಜ್ಞೆಮಾಡಿ ಹೆಂಗಸನ್ನು ಆಳಬಾರದು: Vain man! before you command me prove that you are my master. ತನ್ನೊಡೆಯನೆಂದು ಅವಳಿಗೆ ಮನವರಿಕೆಯಾದ ಮೇಲೆ ಅವನಿಗೆ 'ತನ್ನದೆಲ್ಲ' ವನ್ನು ಅರ್ಪಿಸುವಳು.

ರಾಮನು ಮಾನವನೊ ಅತಿಮಾನವನೊ ಎಂಬ ಪ್ರಶ್ನೆಯಿಂದ ಹೊರಟು, ರಾಮನಲ್ಲಿ ಮಾನವನ ಗುಣಗಳನ್ನು ಎತ್ತಿ ತೋರಿಸಿ ಮಾನವನ ಅವಸ್ಥೆಯು ಅತಿಮಾನವನ ಅವಸ್ಥೆಯ ಮೊದಲ ಮೆಟ್ಟಲು ಎಂಬ ನಿರ್ಣಯಕ್ಕೆ ಬರುವರು: No soul there is that ever could be divine before it is human.

ಮನಹಿಡಿಯುವ ಮಾತುಗಳು ಕೆಲವು:

> ' There is nothing so dangerous as a young man with a child's freedom. Freedom is the heart's striving for the things unattained. Freedom is not a Fact like an old man, but it is a Force like a young mind. '

* * *

**Would ever a wicked man be good enough to admit his own wickedness. It is easy to show but not so easy to feel one's own wickedness. The moment a man knows himself to be wicked, he ceases to be wicked. '**

ಹಳೆಯ ಕತೆಗೆ ಹೊಸ ಮೆರುಗು; ಹೊಸ ಸೋಗು. ಹೊಸ ವಿಚಾರವು ಹರೆಯದ ಸೊತ್ತು.

ಈ ನಾಟಕವನ್ನು ಬರೆದು ಮುಗಿಸಿ, ತಮ್ಮ 'ಭಾಷಾಶಾಸ್ತ್ರ'ದ ಪ್ರಥಮ ಭಾಗದ ಕೈ ಪ್ರತಿಯನ್ನು ಪುಣೆಗೆ ಪ್ರಕಾಶನಕ್ಕಾಗಿ ಕಳಿಸುವುದರಲ್ಲಿಯೆ ಬಂದಿತ್ತು ಕಾಲೇಜದ ಪರೀಕ್ಷೆ. ಇಲ್ಲಿ ಪ್ರೊಫೆಸರರ ಮತ್ತೊಂದು ಪರೀಕ್ಷೆಯಾಯಿತು. 'ಇಡಿವರುಷ ಕಲಿಸಿದರೂ ಪಠ್ಯ ಪುಸ್ತಕದಲ್ಲಿಯ ಪರೀಕ್ಷೆಯ ಭಾಗದ ಅರಿವೆ ಇಲ್ಲ' ಎಂದು ಕೆಲವರು ದೂರುತ್ತಿದ್ದರು. ಇಂಟರದವರಿಗೆ ತರ್ಕ ಸಂಗ್ರಹವಿತ್ತು. ಇಡಿಯದನ್ನೆ ಜಡೆದರು ಪ್ರೊಫೆಸರರು. ಅದರಲ್ಲಿಯ 'ದೀಪಿಕೆ'ಗಳು ಪರೀಕ್ಷೆಗೆ ಇಲ್ಲವೆಂಬುದು ಗೊತ್ತಿದ್ದಿಲ್ಲ. ಯಾರೊ ಒಬ್ಬರು ಬಂದು, 'ಅವು ಪರೀಕ್ಷೆಗೆ ಇಲ್ಲ; ಸುಮ್ಮನೆ ವರುಷವೆಲ್ಲ ಅವುಗಳ ಮೇಲೆ ಹೇಳಿದಿರಿ' ಎಂದರು. ಪ್ರೊಫೆಸರರು ಸುಮ್ಮನೆ ನಕ್ಕುಬಿಟ್ಟರು.

ಪಠ್ಯ ಪುಸ್ತಕವೆಂದರೆ ಅವರಿಗೆ ತಲೆಶೂಲೆ; ಅದಕ್ಕೆ ಪರಂಪರೆಯೆಇದೆ. ಜಾಗಿರದಾರರು ತಾವು ಪ್ರಿವಿಯಸ್‌ದಲ್ಲಿದ್ದಾಗ ಪಠ್ಯ ಪುಸ್ತಕಗಳನ್ನೆಲ್ಲ ಒತ್ತಟ್ಟಿಗೆ ಕೂಡಿಸಿ, ಹೋಳಿಮಾಡಿದ್ದರು. ಪಠ್ಯಪುಸ್ತಕವು ಜ್ಞಾನಮಿತಿ ಮಾಡುವುದೆಂದು, ಇವರ ಕಲ್ಪನೆ. ಓದುವುದೇ ಬೇಸರ ಬಂದ ಇವರ ಗೆಳೆಯನೊಬ್ಬನಿದ್ದ; ಇವರು ಹೋಳಿಮಾಡುವ ಸುಸಂಧಿಯನ್ನು ಸಾಧಿಸಿ ತನ್ನಲ್ಲಿದ್ದ ಎಲ್ಲ ಪುಸ್ತಕವನ್ನು ಅದರಲ್ಲಿ ಸುರುವಿದನಂತೆ. ಇಬ್ಬರು ಚಪ್ಪಾಳಿ ಇಕ್ಕಿದ್ದರು. ಇಬ್ಬರ ವಿಚಾರಗಳು ಬೇರೆಯೆ.

'ಇದ್ದದ್ದನ್ನು ಇದ್ದಂತೆಯೆ ಹೇಳುವುದರಲ್ಲಿ ಏನು ಜಾಣತನ! ಎರಡನೆಯವರು ಹೀಗೆ ಹೇಳಿದ್ದಾರೆ ಎಂದು ದನಿಗೂಡಿಸುವುದು ತರವಲ್ಲ. ಆ ವಿಷಯದ ಮೇಲೆ ತಮ್ಮ ವೈಯ್ಯಕ್ತಿಕ ವಿಚಾರವನ್ನು ಮಂಡಿಸಬೇಕು' ಎಂಬುದು ಅವರ ಧ್ಯೇಯ.

ಕಾಲೇಜದ ಹೊಸ ವರುಷ, ನಿವಾಸಸ್ಥಾನವೂ ಹೊಸದಾಯಿತು.

ತಮ್ಮ ಮೊದಲಿನ ಬೀಡಾರವನ್ನು ಬಿಟ್ಟು ಗುಂಜೀಕರ ಅವರ ಬಂಗಲೆಗೆ ಬಂದರು. ಗುಂಜೀಕರ ಬಂಧುಗಳ ಸಂಚಯವು ಮುಂಬಯಿಯಲ್ಲಿ ಆಗಿತ್ತು. ಅದು ಬೆಳೆಯುವ ಯೋಗ ಬಂತು.

ಮಾನವನ ಬೆಳೆವಣಿಗೆಗೆ ಗಳಿತನವು ಪುಟುವು ಕೊಡುವುದು. ಹೋದ ವರುಷ 'ಉದರ ವೈರಾಗ್ಯ'ದಿಂದ ಜಾಗಿರದಾರರು ಹೆಸರು ಪಡೆದಿದ್ದರು. ಹೊಸ ವರುಷಕ್ಕೆ ಹೊಸದೊಂದು ನಾಟಕ. ಅದು ಹೊರ ಹೊಮ್ಮಲಿಕ್ಕೆ ಪ್ರಸಂಗವೂ ಬಂತು. ಗಳಿಸತೊಡಗಿದ ಮೇಲೆ ತೊಂದರೆಗಳು, ಆರ್ಥಿಕ ತೊಂದರೆಗಳು ಹೆಚ್ಚಿದುವು-ಹೆಚ್ಚು ಎದ್ದು ಕಾಣತೊಡಗಿದುವು. 'ಇನ್ನೇನು ಗಳಿಸತೊಡಗಿರುವರಲ್ಲ!' ಎಂದು ಪ್ರತಿಯೊಬ್ಬರೂ ಎಳೆದಾಡುವವರೆ. ಕಷ್ಟಪರಂಪರೆಗಳು ಹಣಿಕಿಕ್ಕತೊಡಗಿದುವು. ಈ ಕಷ್ಟದಿಂದ ಪಾರಾಗಲು ಉಪಾಯವೇನು? ಎಂದು ವಿಚಾರಿಸತೊಡಗಿದ್ದರು. ಆಗ ಅವರ ಸ್ವಭಾವಕ್ಕೆ ತಕ್ಕಂತೆ, ದಿವ್ಯೌಷಧಿಯೊಂದು ದೊರೆಯಿತು. 'ಬೇಡಾದದ್ದನ್ನು ಮರೆತು ಬಿಡು; ಉಳಿದದ್ದೆಲ್ಲ ತಾನೇ ಬೇಕಾಗುವುದು? ದುಃಖವನ್ನೆಲ್ಲ ಮರೆತು ಬಿಟ್ಟರೆ ಉಳಿದುದೆಲ್ಲ ಸುಖ. ಕಷ್ಟಗಳನ್ನು ಮರೆತರೆ, ಉಳಿದುದು ಆನಂದ' ಈ ವಿಚಾರ ಸರಣಿಯ ಮೇಲೆ ಎದ್ದಿದೆ 'ವೈದ್ಯರಾಜ'; ಎಲ್ಲ ಮನಸ್ಸಿನ ಬೇನೆಗಳಿಗೆ ಒಂದೆ ಗುಳಿಗೆ.

ಈ ನಾಟಕವನ್ನು ಕರ್ನಾಟಕ ಕಾಲೇಜದ ನಾಟ್ಯ ಸಂಘದವರು ೧೪-೯-೩೧ನೆಯ ದಿನ ಮೊದಲು ಸಲ ಆಡಿ ತೋರಿದರು. ೧೯೩೨ರ ಎಪ್ರಿಲ ತಿಂಗಳಲ್ಲಿ ಅಚ್ಚಾಯಿತು. ಅಚ್ಚಾದ ಪ್ರತಿಗಳು ಅಲ್ಲಲ್ಲಿ ಮಾರಾಟಕ್ಕೆ ಹೋದುವು. 'ವೈದ್ಯರಾಜ' ಎಂಬ ಹೆಸರನ್ನು ಕೇಳಿ ಆಯುರ್ವೇದದ ಅಭ್ಯಾಸಿಯೊಬ್ಬ ಲಗುಬಗೆಯಿಂದ ಪೇಟೆಗೆ ಹೋಗಿ ಒಂದು ಪ್ರತಿ ಕೊಂಡು ಕೊಂಡು ನೋಡಿದ. ಇದ್ದ ಬೇನೆಯು ಹೋಗುವ ಬದಲು ಅವನಿಗೆ ಹುಚ್ಚು ಹಿಡಿದಂತಾಯಿತು. ಸಿಟ್ಟಿಗೆದ್ದು ಆರ್ಭಟಿಸುತ್ತ ಮರಳಿ ಬಂದು ಪುಸ್ತಕದ ವ್ಯಾಪಾರಿಗೆ, 'ಹೀಗೆ ಹೆಸರಿನಿಂದ ಮೋಸ ಮಾಡಬಾರದು' ಎಂದು ಗದ್ದರಿಸಿ, ತಿರುಗಿಕೊಟ್ಟು ಹೋದನಂತೆ.

ವೈದ್ಯರಾಜಕ್ಕೆ 'ಎದೆವಯ್ಯ'ನ ಮುನ್ನುಡಿಯಿದೆ. 'ಉದರವೈರಾಗ್ಯ'ದಿಂದ ಇದಕ್ಕೆ ಒಂದೆ ವರುಷದ ಅಂತರ. 'ಎದೆವಯ್ಯ'ನ ಹುಚ್ಚುಹೋಗಿದ್ದಿಲ್ಲ.

ಅಥವಾ ಮೂರನೆಯವನಾಗಿ ತಮ್ಮನ್ನು ನೋಡಿಕೊಳ್ಳಬೇಕೆಂಬುದು ಬೇಕಿತ್ತು, ಎನ್ನಬಹುದು. ಮುನ್ನುಡಿಯಲ್ಲಿ 'ಪಾಪದಿಂದ ಪುನರ್ಜನ್ಮ' ಎಂಬ ಮಾತಿನ ಮಥಿತಾರ್ಥವನ್ನು ಕೊಟ್ಟಿದ್ದಾರೆ. ಎರಡನೆಯ ನಾಟಕವು ಅಚ್ಚಾಗುವುದು—ಅದರಲ್ಲಿಯೂ ಕನ್ನಡ ಸಾಹಿತ್ಯದಲ್ಲಿ—ಇದು ಪುಣ್ಯದ ಮಾತು, ಎಂದು ನಂಬಿದಾಗ, 'ಪಾಪದಿಂದ ಪುನರ್ಜನ್ಮ' ಎಂಬುದು ಹೇಗೆ ಸತ್ಯ ? ತಿಳಿಯದಂತಾಯಿತು. ಅದರ ವಿವೇಚನೆ ಮಾಡಿ 'ಪುಣ್ಯದಿಂದ ಪುನರ್ಜನ್ಮ; ಪಾಪದಿಂದ ಮುಕ್ತಿ' ಎಂಬ ಹೊಸ ಸಿದ್ಧಾಂತವನ್ನು ಮಂಡಿಸಿದರು. ಉಳಿದ ಕ್ಷೇತ್ರಗಳ ಮಾತು ಒತ್ತಟ್ಟಿಗಿರಲಿ; ಈ ಮಾತು ಸಾಹಿತ್ಯ ಕ್ಷೇತ್ರದಲ್ಲಿ ಅಕ್ಷರಕ್ಕೂ ಸತ್ಯ.

ಸಾಮಾಜಿಕ ನಾಟಕವೆಂದ ಮೇಲೆ ಸಮಾಜದಲ್ಲಿ ಸಿಕ್ಕುವ ಜನರ ಚಿತ್ರಗಳೆ ಅಲ್ಲಿವೆ. 'ನಾಟಕದ ನಾಯಕನು ಎಲ್ಲ ಸದ್ಗುಣಗಳ ತವರುಮನೆ'ಯಾಗಿರಬೇಕೆಂದರೆ ಸಮಾಜದಲ್ಲಿ ಅಂತಹ ವ್ಯಕ್ತಿಗಳು ಸಿಗುವುವು ಎಷ್ಟು ? ಒಂದುವೇಳೆ ಕೆಲವು ಸಿಕ್ಕರೆ ಅವರಷ್ಟೆ ಸಮಾಜದಲ್ಲಿರುವರೆ ಹೇಗೆ ? ಸಮಾಜವೆಂದ ಮೇಲೆ ಕೀಳು ಮೇಲುಗಳು ಇರುವುದು ಸಹಜ. ಒಳ್ಳೆತನದ ಬದಿಗೆಯೆ ದುರುಳತನ ಅಂಟಿಕೊಂಡಿರುವುದು. ಹೆಚ್ಚಿನ ಅಂಶವು ಒಳ್ಳೆತನದ್ದಾಗಿದ್ದರೆ ಅವನು ಒಳ್ಳೆಯವನು. ಅವನ ಒಳ್ಳೆತನಕ್ಕೆ ಬಾಧೆ ಬರುವಂತೆ ಒಮ್ಮೊಮ್ಮೆ ಅವನಿಂದ ದುರುಳತನವೂ ಸಂಭವಿಸಬಹುದು. ಇದೆಲ್ಲವೂ ಸಮಾಜ ಸಹಜ. ಇಂತಹ ಸಹಜ ವ್ಯಕ್ತಿಗಳ ಚಿತ್ರಗಳು ಸಾಮಾಜಿಕ ನಾಟಕಗಳಲ್ಲಿ ಬರುವುವು. ಯಾರೂ ಪರಿಪೂರ್ಣರಲ್ಲ. ಎಲ್ಲರೂ ಸಾಮಾನ್ಯ ಜನರೆ; ಸಾಮಾನ್ಯರಿಗೆ ಸಾಮಾನ್ಯರ ಚಿತ್ರ.

ಹರಿಹರರಾಯ ಒಬ್ಬ ಹೆಸರಾದ ಮುಂದಾಳು, ವಕೀಲ; ವಯಸ್ಸಾಗಿದೆ. ಮನೋರಮೆಯು ಅವನ ಎರಡನೆಯ ಹೆಂಡತಿ. ಅವಳನ್ನು ಮೊದಲು ವಿದ್ಯಾಧರನಿಗೆ ಕೊಡಬೇಕೆಂದು ಮಾಡಿತ್ತು. ವಿದ್ಯಾಧರನು ತರುಣನು; ತನಗಾಗಿದ್ದವಳನ್ನು ಬೇರೆಯವನು ಕಚ್ಚಿಕೊಂಡು ಹೋದನಲ್ಲ, ಎಂದು ಕುನಸು ಅವನಿಗೆ. ಮನೋರಮೆಯು ತನ್ನವಳೆಂದು ಸಲುಗೆ ಬೆಳೆಸಿದರೆ 'ಪರಸತಿಯಳ ಬಲಾತ್ಕಾರ'ವಾಗುವುದು. ಬಿಟ್ಟರೆ ಮನಸ್ಸಿನ ಸೆಳದಾಟವನ್ನು ತಡೆಯಲಾಸಲ್ಲ. ಬೇರೆಯವನಲ್ಲಿ ಮನಸ್ಸಿದ್ದ ತರುಣ ಹೆಂಡತಿಯನ್ನು ಮದಿವೆ ಮಾಡಿಕೊಂಡುದು ಹರಿಹರರಾಯನ ತಪ್ಪೆ ? ಇದರಲ್ಲಿ ನೀಚರು ಯಾರು ?

ತಿಮ್ಮಾಜಿ ಹರಿಹರರಾಯನ ಕಾರಕೂನ. ‘ ಮರೆಯುವುದೆಂದರೆ ಮರೆಯುವುದು; ಎಲ್ಲವನ್ನು ಮರೆಯುವುದು ’ ಎಂಬುದು ಅವನ ಮೂಲ ಮಂತ್ರ. ಅವನ ಮಗ ಕಾಮಿ: ಸ್ಫೂರ್ತಿಯ ಮೂರ್ತಿ; ‘ ವಾಡಿಕೆಯ ಜಾಡ ಬಲೆಯಲ್ಲಿ ಸಿಕ್ಕು ಸುಖಬಡುವವ. ’

ಹರಿಹರರಾಯನು ಹರೆಯದ ಹೆಂಡತಿಯನ್ನು ಮದುವೆಮಾಡಿ ಕೊಂಡುದು ತಪ್ಪೆ ? ಮಗಳಾದ ಮೋಹಿನಿಗೆ ಶಿಕ್ಷಣ ಕೊಡಿಸದೆ ಇದ್ದುದು ತಪ್ಪೆ? ಮುಂದಾಳು ಎನಿಸಿಕೊಂಡು ಮನೆಯ ಸ್ಥಿತಿಯ ಅರಿವಿಲ್ಲದೆ ಮಾತ ನಾಡುವುದು ನೀಚತನವೆ ? ತಾರುಣ್ಯದ ವೇಗದಂತೆ ಸಾಗುವ ವಿದ್ಯಾಧರನ ನಡತೆ ಸರಿಯಾದುದಲ್ಲವೆ ? ಇವೆಲ್ಲ ಬೇನೆಗೆ ‘ವೈದ್ಯರಾಜ’ವು ಔಷಧಿ. ಕಣ್ಣಿಗೆ ಕಾಣುವ, ಕಿವಿಯಿಂದ ಕೇಳುವ, ಸಮಾಜದಲ್ಲಿಯ ವ್ಯಕ್ತಿಗಳ ಸ್ವಭಾವ ಚಿತ್ರವನ್ನು ತೋರಿಸುವುದೆ ಈ ನಾಟಕದ ಧ್ಯೇಯ.

ನಾಟಕಕ್ಕೆ ‘ನನ್ನದೀ–(ನಾಂದಿ)ಯೊಂದು. ಅದರಲ್ಲಿ ನಾಟಕಕಾರನು-ಪರಮಾತ್ಮನೊಂದಿಗೆ ತನ್ನ ಶಕ್ತಿಯ ಬಗ್ಗೆ ವಾದಿಸುವನು. ನಾಟಕಕಾರನು ಸೃಷ್ಟಿಯನ್ನು ನಿರ್ಮಿಸಬಲ್ಲ. ಪರಮಾತ್ಮನು ನಿರ್ಮಿಸುವ ಕಾರ್ಯವನ್ನು ಮಾಡಿದರೆ, ನಾಟಕಕಾರನು ಸೃಷ್ಟಿಸಿದ ವ್ಯಕ್ತಿಗಳ ಪೋಷಣೆಯನ್ನೂ ಮಾಡು ವನು. ಈ ವಾದವನ್ನು ಸಾಗಿಸುವಾಗ ‘ಮಾತಿನಲ್ಲಿ ನನ್ನನ್ನು ಸೋಲಿಸು ವಿಯಾ ’ ಎಂಬ ಆಹ್ವಾನವನ್ನು ಕೊಟ್ಟು, ‘ಬರೆದುದನ್ನು ಅಳಿಸುವ ಅವಿಚಾರಿ ನಾನಲ್ಲ’ ಎಂದು ತಮ್ಮ ಶಕ್ತಿಯನ್ನು-ಸ್ವಭಾವವನ್ನು ತೋರಿಸಿಕೊಟ್ಟಿದ್ದಾರೆ.

ಜಾಗಿರದಾರರ ನಾಟ್ಯಸೃಷ್ಟಿಯು ಬೆಳೆಯುತ್ತಲಿದೆ-ವಿವಿಧ ರೀತಿಯಿಂದ ಬೆಳೆಯುತ್ತಲಿದೆ. ಕೊಂಕುಮಾತುಗಳು, ಸಿಡಿಮಾತುಗಳು, ಮಾತು ಹೊರಳಿ ಸುವುದು ಸಹಜವಾಗಿ ಬಿಟ್ಟಿದೆ. ಈ ನಾಟಕದಲ್ಲಿಯ ತಿಮ್ಮಾಜಿಯ ಸ್ವಗತ ಮಾತು ನಾಟಕಕಾರನ ಶಕ್ತಿಯ ಬಗೆಗೆ ಹೇಳುವುದು. ಹರಟೆ ಹೊಡೆಯಲು ಚಟವಿದ್ದವರಿಗೆ ಸ್ವಗತ ಭಾಷಣದ ಹಿಡಿತ ಸಾಧಿಸಿರುವುದು. ಹರಟೆ ಹೊಡೆ ಯುವುದು ಜಾಗಿರದಾರರಿಗೇನು ಹೊಸದಲ್ಲ. ಮೊದಲಿನಿಂದಲೂ ಬೆಳೆದು ಬಂದ ಚಟ. ಆದರೆ ಇತ್ತೀಚೆಗೆ ಸಾಲದ ತೊಂದರೆ ಬಹಳವಾಗಿ ಜನರ ಸಂಗಡ ಹರಟೆ ಕಡಮೆಯಾಗಿದೆಯಾದ್ದರಿಂದ ‘ಸ್ವಗತ’ದಲ್ಲಿ ಹೊರಬರುತ್ತಿದೆ. ಒಂದು ಕಂದೀಲು ಹಚ್ಚಬೇಕಾದ ಸಂನಿವೇಶವನ್ನು ಮಾತಿನಿಂದ ಅದೆಷ್ಟು

ರಸವತ್ತಾಗಿ ತೋರಿಸಿರುವರು ? ಅಭಿನಯಕಾರನಿಗೆ ಸಂಪೂರ್ಣ ಅವಕಾಶ. ಒಳ್ಳೆಯ ನಟನಿದ್ದುದಾದರೆ ಅವನದು ಇಲ್ಲಿ ಮೇಲುಗೈ.

ಇದರ ನಟನೆಯನ್ನು ಶ್ರೀ. ಸೂಳಿಭಾವಿಯವರು ಮಾಡಿದುದನ್ನು ನೋಡಿದವರು-ನೆನೆಸಿದರೆ ಸಾಕು-ನಗು ಬಂದು ಬಿಡುವುದು. ಈ ನಗೆಯ ಸೌರಭಕ್ಕಾಗಿ, ಪ್ರಿ. ಜತಾರವರು ಅದಷ್ಟು ಭಾಗವನ್ನು ಬೇರೆಯಾಗಿಯೆ ಮತ್ತೊಮ್ಮೆ ಮಾಡಿಸಿದರು. ಆದರೂ ಅವರ ಮನತಣಿಯಲಿಲ್ಲ. ನಗುವುದು ಎಂದಾದರೂ ಸಾಕಾಗುವುದೆ ? ನಗುವು ಬೆಳೆಯಲು ಸಾಧನ. ನಗುವು ದುಃಖವನ್ನು ಮರೆಸುವುದು. ದುಃಖದಿಂದ ಬಳಲುವವರಿಗೆ 'ವೈದ್ಯರಾಜ'ವು 'ರಾಜವೈದ್ಯ'ನಂತೆ ಇದೆ.

'ಹಿಡಿಗಲ್ಲಿಗೊಂದು ಪುಡಿಗಲ್ಲು ಬೇಕು' ಎಂಬಂತೆ ದೊಡ್ಡ ನಾಟಕ ಬರೆಹಗಳ ನಡುನಡುವೆ. ಏಕಾಂಕ-ದೃಶ್ಯ- ಲೇಖನಗಳು ಉದಯವಾಗುತ್ತಿದ್ದುವು. 'ಜಾಹೀರವ್ಯಾಖ್ಯಾನ' 'ಪೂರ್ವರಂಗ', **'Mighty Minds of Youth'** ಇವು ಬಂದುವು ಈ ಅವಧಿಯಲ್ಲಿ.

ದುಡಿದು ಬೇಸತ್ತು ಬದಲಾವಣೆಯನ್ನು ಬಯಸಿದಾಗ ತುಂಗಭದ್ರೆಯಲ್ಲಿ ತಾರಾನಾಥರ ಸಹವಾಸದಲ್ಲಿ ಕಾಲಕಳೆಯುತ್ತಿದ್ದರು. ೧೯೩೨ ರ ಮೇದಲ್ಲಿ ತುಂಗಭದ್ರೆಯಿಂದ ಮರಳುವಾಗ ಬಳ್ಳಾರಿಯಲ್ಲಿ ತರುಣ ಅಪರಾಧಿಗಳ ಗುಂಪೊಂದನ್ನು ಕಂಡರು. ಅವರನ್ನು ಸೈನ್ಯದ ವಸತಿಯ ಕಡೆಗೆ ಮೂಕ ಪ್ರಾಣಿಗಳಂತೆ ಸಾಗಿಸಿಕೊಂಡು ಹೊರಟಿದ್ದರು. ಅದರ ಚಿತ್ರವು ಮನದಲ್ಲಿ ಮೂಡಿತು. 'ಇಷ್ಟು ತರುಣರು ಅಪರಾಧಿಗಳು ಯಾಕೆ ? ಅಪರಾಧಿಯಾಗುವುದು ದಡ್ಡತನದ ಮೂಲಕ, ದಡ್ಡತನದಲ್ಲಿ ಕೊಳೆಯುವುದರ ಮೂಲಕ. ದಡ್ಡತನವನ್ನು ಹೋಗಲಾಡಿಸಲು ಶಿಕ್ಷಣ ಕೊಡಬೇಕು........ಶಿಕ್ಷಣ....' ತಲೆಯು ಸುಳಿಯಲಾರಂಭಿಸಿತು.

ಕಾಲೇಜು ಸುರುವಾಯಿತು. ಪ್ರತಿನಿತ್ಯದಂತೆ ವರ್ಗಗಳು ನಡೆದುವು. ಒಂದು ದಿನ ಒಬ್ಬ ಹುಡುಗ ಮೂರ್ಖತನದ್ದೊಂದು ಪ್ರಶ್ನೆ ಕೇಳಿದ. ಅವನನ್ನು ಕಂಡು ನಗುಬಂತು. 'ಇವನು ಕಲಿತವನಲ್ಲವೆ ? ಇಂತಹ ಶಿಕ್ಷಣದಿಂದೇನು ಪ್ರಯೋಜನ ? ' ಎಂದು ಶಿಕ್ಷಣದ ವಿಚಾರವಾಗಿ ಎಣಿಕೆ ಹಾಕುತ್ತಿರುವಾಗ ಬಳ್ಳಾರಿಯಲ್ಲಿ ಕಂಡ ದೃಶ್ಯವು ನೆನಪಿಗೆ ಬಂತು. ಆ ಹುಡುಗರಿಗೂ

ಇಲ್ಲಿಯ ಕಾಲೇಜದಲ್ಲಿಯ ಹುಡುಗರಿಗೂ ಭೇದವೇನು ? ಕಲಿಯುತ್ತಿರು ವಂರೆಬುದೆ ಸಮಾಧಾನ. ಇಂಥ ಶಿಕ್ಷಣದಿಂದ ಮುಂದೆ ಏನು ಉಪಯೋಗ ? ನಮ್ಮ ನಾಡಿಗೆ ಬೇಕಾದ ಶಿಕ್ಷಣವೆಂತಹದು ?

ನಮ್ಮ ನಾಡಿನ ಜನತೆಗೆ ಹೊಟ್ಟೆತುಂಬ ಕೂಳು ಸಿಕ್ಕುವುದೆ ? ಇಲ್ಲ. ಬಡತನವು ಆವರಿಸಿದೆ ? ಅದೇಕೆ ? ನಮ್ಮಲ್ಲಿ ದುಡ್ಡಿಲ್ಲ. ದುಡ್ಡು ಬೆಳೆದು ಕೊಂಡರೆ ಬರುವುದು. ದುಡ್ಡನ್ನು ಹುಟ್ಟಿಸಬೇಕು. ಜಗತ್ತಿನ ಉಳಿದ ದೇಶ ಗಳು ಕೈಗಾರಿಕೆ–ಉದ್ಯೋಗಗಳಲ್ಲಿ ಮುಂದುವರಿದು ನಮ್ಮ ದೇಶದಲ್ಲಿಯ ದುಡ್ಡನ್ನು ಸೆಳೆದುಕೊಂಡು ನಮ್ಮನ್ನು ಬಡವರನ್ನಾಗಿ ಮಾಡಿ, ಬಡತನ–ದಡ್ಡತನದ ಪರಂಪರೆಯನ್ನು ನಮ್ಮ ಕೊರಳಿಗೆ ಕಟ್ಟಿವೆ. ಇಂದು ನಮಗೆ ಬೇಕಾದುದು ಎಂತಹ ವಿದ್ಯೆ? ಬಡತನ ದೂರಮಾಡುವ ವಿದ್ಯೆ. ಭಾರತದ ದರಿದ್ರನಾರಾಯಣನ ಚಿತ್ರವು 'ದರಿದ್ರ ನಾರಾಯಣ'ನನ್ನು ಹುಟ್ಟಿಸಿತು.

ನಾವು ದರಿದ್ರರೆ ? 'ಹಿಂದಕ್ಕೆ ಹಿಂದುಸ್ತಾನದಲ್ಲಿ ಬಂಗಾರದ ಹೊಗೆ ಹಾಯುತ್ತಿತ್ತು' ಎನ್ನುತ್ತಿದ್ದರಲ್ಲ ! ಅಹುದು. ಆ ಮಾತು ಇಂದಿಗೂ ಅನ್ವಯಿಸುತ್ತಿದೆ. ಅಂದಿನ ಜನರು ತಮ್ಮ ನಾಡಿನ ದೃಷ್ಟಿಯಿಂದ ಕಾರ್ಯ ಮಾಡುತ್ತಿದ್ದರು. ಅದಕ್ಕಾಗಿ ಬಂಗಾರ ಅವರ ಕೈಯಲ್ಲಿತ್ತು. ಇಂದು ನಾವು ನಮಗಾಗಿ ಉದ್ಯೋಗ ಮಾಡುವುದಿಲ್ಲ. ಪರಕೀಯರಿಗಾಗಿ, ಅವರ ಅನು ಕೂಲತೆಗಾಗಿ ದುಡಿಯುತ್ತಿದ್ದೇವೆ. ನಮ್ಮ ದುಡ್ಡು ಪರಕೀಯರ ಕೈಯಲ್ಲಿ. ಬಂಗಾರದ ಹೊಗೆ ! ಬಂಗಾರ ಅವರ ಕೈಗೆ, ಹೊಗೆ ನಮ್ಮ ಮೋರೆಗೆ.

ನಾಟಕಕ್ಕೆ ಮುನ್ನುಡಿ ಬರೆವಾಗ ಶ್ರೀ ಗುಂಜಿ ಧೀರೇಂದ್ರರಾಯರು ಹೀಗೆ ಅಂದಿದ್ದಾರೆ. ' ನಮ್ಮ ದೇಶದಲ್ಲಿ ನಮ್ಮ ಉದ್ಯಮಗಳಿಗೆ ಬೇಕಾಗುವ ಎಲ್ಲ ವಸ್ತುಗಳ ವಿಪುಲ ಸಂಚಯವಿದೆ. ಹತ್ತಿ, ನಾರು, ಕಬ್ಬಿಣ, ಕಲ್ಲೆಣ್ಣೆ, ಕಲ್ಲಿದ್ದಲಿ, ಕಟ್ಟಿಗೆ, ಎಣ್ಣೆಯಕಾಳು, ಎಲ್ಲವೂ ಇದೆ. ಕೂಲಿಕಾರರಿಗೆ ಕೊರತೆಯಿಲ್ಲ; ಜಲಪಾತಗಳಿಂದ ವಿದ್ಯುತ್ ಶಕ್ತಿಯನ್ನು ತಯಾರಿಸಲು ಅನುಕೂಲತೆಗಳಿವೆ. ಸಿದ್ಧವಾದ ಸರಕುಗಳಿಗೆ ಪೇಟೆ ಇದೆ. ಇದರಿಂದ ಪ್ರತಿಯೊಬ್ಬನ ' ಮುಂದೇನು ? ' ಎಂಬ ಪ್ರಶ್ನೆಯು ಸಹಜವಾಗಿ ದೂರ ವಾಗುವಂತಿದೆ. ಮಾತು ಹೀಗಿದೆ. ಉಪಯೋಗ ಮಾಡಿಕೊಳ್ಳುವುದು ಜನತೆಯನ್ನು ಕೂಡಿದೆ. ಆದರೆ ಜನತೆ ? '

ಇದು ನಾಟಕದ ಹಿನ್ನೆಲೆ. ಇದೇ ತಳಹದಿಯ ಮೇಲೆ ಅಂದಿನ ನಮ್ಮ ಸಮಾಜದ ಚಿತ್ರವು ಎದ್ದಿದೆ. 'ಮುಂದೇನು?' ಎಂಬುದು ಎಲ್ಲರಿಗೂ ಎದುರಾದ ಪ್ರಶ್ನೆ. ಹಿಂದಿನ ಉದ್ಯೋಗಗಳು ಕರಗಿ–ಕಮರಿ ಹೋಗುತಿವೆ ಯಲ್ಲ! ಎಂದು ಕೊರಗುವ ಸೆಟ್ಟಿ, ಕಮ್ಮಾರ ಕಾಳಪ್ಪ, ಜೋಯಿಸರು; ಶಾಲೆ ಕಾಲೇಜದಲ್ಲಿ ಕಲಿತು, ವಿಚಿತ್ರ ವಿಚಾರಗಳನ್ನು ತಲೆಯಲ್ಲಿ ತುಂಬಿಕೊಂಡು, ಸಮಾಜದಲ್ಲಿ ಅವನ್ನು ಪ್ರಯೋಗಮಾಡಿ ನೋಡಲು ಧೈರ್ಯ ಸಾಲದೆ ಮರುಗುವ ಶ್ರೀಧರ–ಲಲಿತಾ ಅವರು. 'ಮುಂದೇನು?' ಎಂದು ಮಬ್ಬು ಮುಸುಕಿಕೊಂಡು ಕುಳಿತಿರುವವರಿಗೆ ಕೊಂಕಣ್ಣನೆ ಕೈದೀಪ. ಕಾಣದುದಕ್ಕೆ ಕೈಯಿಕ್ಕಿದರೆ ಕಂಡುದೂ ಕಳಚಿ ಹೋಗುವುದು. ಇಂದಿನದೂ ಹಾಳು; ನಾಳಿನ ಬಾಳು ಇಂದಿನ ಮೇಲೆ ನಿಂತಿಲ್ಲವೆ?

ಹಿಂದಿನಿಂದ ಬಂದ ವಿಷಯಗಳ ಮೇಲೆ ಕಟುವಾದ ಟೀಕೆ. ಸಂಸ್ಕೃತದ ನಾಟಕದ ಪದ್ಧತಿಯಾದ 'ನಟಿ ಸೂತ್ರಧಾರ'ರ ದೃಶ್ಯ. 'ಯಾವ ದೇವನನ್ನು ಸ್ತುತಿಸಲಿ?' ಎಂದು ಗಂಭೀರವಾಗಿ ಮೊದಲು ಮಾಡುವರು. 'ದರಿದ್ರ ನಾರಾಯಣನ ಹೊರತು ಬೇರೆ ದೇವರುಗಳಿಲ್ಲ' ಎಂಬ ಮಾತಿಗೆ ಬಂದು ನಾಟಕವು ಪ್ರಾರಂಭವಾಗುವುದು. 'ದರಿದ್ರ ನಾರಾಯಣ'ವು ಹಿಂದಿನ ಸಾಂಪ್ರದಾಯಕ್ಕೆ ಏಟು ಕೊಡುವುದಿಷ್ಟೆ ಅಲ್ಲ; ಆ ಸಾಂಪ್ರದಾಯದ ಮೇಲೆ ಕಾಲಿಟ್ಟು ಅದನ್ನು ಪಾತಾಲಕ್ಕೆ ಒತ್ತಿ ಹೊಸ ಸೃಷ್ಟಿ ನಿರ್ಮಾಣ ಮಾಡುವ ಹಂಬಲವನ್ನು ಸೂಚಿಸುತ್ತಿದೆ. ಈ ನಾಟಕದ ನಂತರ ಬರುವುದೆಲ್ಲ ಹೊಚ್ಚ ಹೊಸದು. ಮುನ್ನೋಟದವರಿಗೆ 'ದರಿದ್ರನಾರಾಯಣ'ವು ಮಾರ್ಗದರ್ಶಿ.

'ದರಿದ್ರನಾರಾಯಣ'ವನ್ನು ಬರೆದು 'ದೀಪೋತ್ಸವ'ದ ದೃಶ್ಯವನ್ನು ತೋರಿಸಿ, ಹೊಸ ಸೃಷ್ಟಿಯ ವಿಚಾರ ಮಾಡುತ್ತಿರುವಾಗ ಪುಣೆಯಿಂದ ಪುಸ್ತಕ ವೊಂದು ಬಂತು. ಅದು ಜಾಗಿರದಾರರು ಬರೆದ 'ಭಾಷಾಶಾಸ್ತ್ರ'ವು.* ಭಾಷಾಶಾಸ್ತ್ರದ ಅಭ್ಯಾಸಿಗಳಿಗೆ ಒಳ್ಳೆ ಅನುವಾಯಿತು. ಅಲ್ಲಿಯವರೆಗೆ ಇಂತಹ ಪುಸ್ತಕಗಳೇ ಇದ್ದಿಲ್ಲ. ಸ್ವತಂತ್ರ ವಿಚಾರಮಾಡಿ ಬರೆದುದರಿಂದ

---

* **'An Introduction to the Comparative Philology of Indo-Aryan Languages' Publishers : Oriental Book Agency Poona.**

ಹಿಂದಿನ ಪುಸ್ತಕಗಳಿಗಿಂತ ಹೆಚ್ಚಿನ ಸ್ಥಾನವನ್ನು ಪಡೆಯುವಂತೆಯಾಯಿತು—ಪಡೆದಿತು. ಪ್ರೊಫೆಸರ ಜಾಗಿರದಾರರ ಹೆಸರು ಎಲ್ಲೆಡೆಯಲ್ಲಿಯೂ ಹಬ್ಬಿತು.

ಜಾಗಿರದಾರರು ಹೊಸ ಹೊಸ ಕ್ಷೇತ್ರಗಳನ್ನು ತಮ್ಮವನ್ನಾಗಿ ಮಾಡಿಕೊಳ್ಳತೊಡಗಿದರು. ಸಾಮಾಜಿಕ ನಾಟಕಗಳನ್ನು ಕೆಲವೊಂದು ಬರೆದ ಮೇಲೆ ಐತಿಹಾಸಿಕ ನಾಟಕದ ಕಡೆಗೆ ಮನವು ಸರಿಯತೊಡಗಿತು. ಕನ್ನಡ ನಾಡಿನ ಕೀರ್ತಿ ವೈಭವವನ್ನು ಇಡಿ ಭಾರತದಲ್ಲಿ ಮೆರೆಯಿಸಿದ 'ಪರಮೇಶ್ವರ ಪುಲಕೇಶಿ'ಯನ್ನು ಆಗ ಬರೆದರು. ಇತಿಹಾಸದ ಸನ್ನಿವೇಶಗಳು ಬರುವುದರಿಂದ ನಾಟಕವು ಐತಿಹಾಸಿಕವಾಗಿ ಕಂಡರೂ 'ನಮ್ಮ ನಾಟಕ ಐತಿಹಾಸಿಕವಲ್ಲ-ಚರಿತ್ರಾತ್ಮಕ; ಇದರಲ್ಲಿ ಪುಲಕೇಶಿಯ ಚರಿತ್ರವನ್ನೆ ಹೆಚ್ಚಾಗಿ ತಿಳಿದುಕೊಳ್ಳಲು ಹವಣಿಸಿದೆ, ಎಂಬುದಕ್ಕಾಗಿ ಹಾಗೆ ಹೇಳಿದ್ದು' ಎಂದು ಜಾಗಿರದಾರರು ಮುನ್ನುಡಿಯಲ್ಲಿ ಹೇಳಿದ್ದಾರೆ.

ಕನ್ನಡಿಗರಿಗೆ—ತಮ್ಮನ್ನು ತಾವೇ ಮರೆತ ಕನ್ನಡಿಗರಿಗೆ — ಎಚ್ಚರು ತಂದು ಕೊಡಲು ಐತಿಹಾಸಿಕ ನಾಟಕಗಳು ಅವಶ್ಯ—ಅಗತ್ಯ. ನಾಟಕವನ್ನು ಓದುವಾಗ-ನೋಡುವಾಗ ಕನ್ನಡಿಗರ ಹಿಂದಿನ ವೈಭವದ ಅರಿವು ಬಂದು ಮೈಯುಬ್ಬುವುದು. ಹೇಡಿತನವು ಹಾರಿಹೋಗುವುದು-ಕ್ಷಣಹೊತ್ತಾದರೂ.

ಪುಲಕೇಶಿಯು-ಉತ್ತರದ ಹರ್ಷವರ್ಧನನನ್ನು ಸೋಲಿಸಿದ ವೃತ್ತಾಂತವನ್ನೆ ಮೂಲವಸ್ತುವನ್ನಾಗಿಟ್ಟುಕೊಂಡು, ಅದರ ಸಾಧನೆಗಾಗಿ, ವಿಕ್ರಮ—(ಪುಲಕೇಶಿ)ನ-ಅವನ ಸುತ್ತು ಮುತ್ತಲಿನ ಜನರ ಚಿತ್ರವನ್ನು ಕೊಟ್ಟಿದ್ದಾರೆ. ಸರ್ವಸಿದ್ಧಿ, ರವಿಕೀರ್ತಿ, ರೋಹಿಣಿದೇವಿ, ಹರ್ಷವರ್ಧನ— ರಾಜ್ಯಶ್ರೀ ಇವರೆಲ್ಲರೂ ಐತಿಹಾಸಿಕ ವ್ಯಕ್ತಿಗಳೆ.

ವಾತಾವರಣವೆಲ್ಲ ಐತಿಹಾಸಿಕ ಸಂಗತಿ-ಸನ್ನಿವೇಶಗಳಿಂದ ತುಂಬಿವೆ. ಓದುವಾಗ-ನೋಡುವಾಗ-ನಾವಿದ್ದ ಸ್ಥಾನ-ಕಾಲವನ್ನು ಮರೆತು ಹಿಂದಿನ ಯುಗದಲ್ಲಿ ನಿಂತಂತೆ ಭಾಸವಾಗುವುದು. ನಾಟಕವು ಚರಿತ್ರಾತ್ಮಕವಿರುವುದರಿಂದ-ಮೊದಲು ಚರಿತ್ರನಾಯಕನ ಬಗೆಗೆ ಆದರ ಬೆಳೆಯಿಸಲೋಸುಗ-ಪ್ರಾರಂಭವು ಅವನ ಬಗ್ಗೆ ಬೇರೆ ಇಬ್ಬರ ಸಂಭಾಷಣೆಯಿಂದ ಸುರುವಾಗುವುದು. ನಾಯಕನ ಬರವಿಗಾಗಿ ಜನತೆಯಲ್ಲಿ ಕುತೂಹಲವನ್ನುಂಟು ಮಾಡುವುದು ಹಿರಿದಾದ ಲಕ್ಷಣ. ಶೇಕ್ಸಪಿಯರನು ತನ್ನ ನಾಯಕರನ್ನು ಮೊದಲು

ಬಯಲಿಗೆ ಎಂದೂ ಹಾಕಲಿಲ್ಲ. ಅವನ ಬರವಿಗಾಗಿ ಯೋಗ್ಯ ವಾತಾವರಣ ವನ್ನು ಕಲ್ಪಿಸಿ, ಜನತೆಗೆ ಅವನ ದರ್ಶನಮಾಡಿಸುವನು. ವ್ಯಕ್ತಿಯು ಮೊದಲೆ ಅಸಾಮಾನ್ಯವಿರುವುದರಿಂದ ಜನತೆಯ ಅಂತಃಕರಣ ಸೆಳೆದುಕೊಳ್ಳುವುದು; ಮೇಲಾಗಿ ಮೊದಲಿನ ವಾತಾವರಣವು ಪೋಷಕವಾಗುವುದು.

ಪಾತ್ರಗಳೆಲ್ಲ ಸ್ಪಷ್ಟವಾಗಿ ಚಿತ್ರಿತವಾಗಿವೆ. ವಿಕ್ರಮನಲ್ಲಿ ತಾರುಣ್ಯದ ದುಡುಕು, ದೊರೆತನದ ದರ್ಪವು ಎದ್ದು ಕಾಣುವುದು. ತನ್ನ ನಾಡು, ತನ್ನ ಮನೆತನದ ವೈಭವಕ್ಕೆ ಮನ್ನಣೆ ತರಬೇಕೆನ್ನುವವನಿಗೆ ನಸುವೆಯಾದರೂ ಅಪಶಬ್ದವಾಡಿದರೆ ಕೆಂಡದಂತಹ ಸಿಟ್ಟು. ರವಿಕೀರ್ತಿ, ವಿಕ್ರಮನ ಜೀವದ ಗೆಳೆಯ—ಕವಿ—ಮುಂದೆ ಮಂತ್ರಿಯಾಗುವನು. ಅವನಲ್ಲಿ ಕಾವ್ಯವು ಉಕ್ಕುವುದ ಲ್ಲದೆ, ಮಂತ್ರಿಯ ಜಾಣತನ ಚಿಮ್ಮುವುದು. ವಿಕ್ರಮನ ವಿದ್ಯಾಗುರುವಾದ ಸರ್ವಸಿದ್ಧಿಯಲ್ಲಿ ಹಿರಿತನದ ಜಾಣ್ಮೆ—ತಾಳ್ಮೆ ಎದ್ದು ಕಾಣುವುದು. ಧರ್ಮ ಪತ್ನಿ ರೋಹಿಣಿದೇವಿ—ಪತ್ನಿಧರ್ಮವನ್ನು ಎತ್ತಿ ತೋರುವಳು. ಉತ್ತರಾಪಥದ ಸಾರ್ವಭೌಮನಾದ ಹರ್ಷವರ್ಧನನ ಚಿತ್ರವು ವೀರವತ್ತಾಗಿದೆ. ರಾಜ್ಯಶ್ರೀಯು ಬುದ್ಧನ ತತ್ವವನ್ನು ಅರಗಿಸಿಕೊಂಡುದು ಕಾಣುವುದು.

ಪಾತ್ರ ಪರಿಚಯ ಮಾಡಿಕೊಡುವುದು ಸೂಚ್ಯವಾಗಿದೆ. ಸಂನಿವೇಶ ಗಳನ್ನು ಹೆಣೆಯುವುದರಲ್ಲಿ ತಮ್ಮ ಕೈಚಳಕವನ್ನು ತೋರಿದ್ದಾರೆ. ಐತಿಹಾಸಿಕ ವಿಷಯಕ್ಕೆ ತಕ್ಕಂತೆ ಭಾಷೆಯು ಪ್ರೌಢವಾಗಿದೆ; ವೀರವಾಗಿದೆ.

ಮತ್ತೆ ಹಿಂದಿನ ಯುಗದಿಂದ ಇಂದಿನ ಯುಗಕ್ಕೆ ಬಂದರು. 'ವೈದ್ಯರಾಜ'ನಿಗೆ ಮುನ್ನುಡಿ ಬರೆವಾಗ 'ಹೊಟ್ಟೆಬಟ್ಟೆಗಿಲ್ಲದೆ ಮಕ್ಕಳನ್ನು ಬೆಳೆಯಿಸುವವನಿಗೆ ಇನ್ನುಮುಂದೆ ಮಕ್ಕಳನ್ನು ಬೆಳೆಯಿಸದಂತಹ ಶಿಕ್ಷೆಯನ್ನು ಯಾರೂ ಕೊಡುವುದಿಲ್ಲವಲ್ಲ!' ಎಂದುಸುರಿ ಮುಂದೆ ಸಾಗಿದ್ದರು. ಅದೇ ನಾಟಕದಲ್ಲಿ ವಿದ್ಯಾಧರನು ಮನೋರಮೆಗೆ ಹೇಳುವನು: 'ಹುಚ್ಚೀ! ಮನೆಯ ಸುಖ, ಮಕ್ಕಳಸುಖ ಎನ್ನುವಿಯಾ? ನಿನ್ನ ಜೀವ ನಿನಗೆ ಬೇಕಾಗಿದ್ದರೆ ಆವೆರಡೂ ಸುಖದ ಆಶೆ ಬಿಡು. ಅದಕ್ಕೆಯೆ ಎಚ್ಚರ ಕೊಡುವೆ. ಇಂತಹ ಮನೆಯಲ್ಲಿ ಮಕ್ಕಳೆಂದರೆ ಮಳೆಗಾಲದಲ್ಲಿ ಮಾವಿನ ಹಣ್ಣಿನಂತೆ?' ಎಂದು ಮುಂದುವರೆದು, 'ಸಂಸಾರಬೇಕು. ಮಕ್ಕಳು ಬೇಡ' ಎಂದು ಅಣಕಿಸಿ ದುದು ಸಾಲದೆ, 'ಸಂಸಾರಿಗ ಕಂಸ'ನನ್ನು ಬರೆದು ಮನೆಯಲ್ಲಿ ಮಕ್ಕಳು

ಎಷ್ಟಿರಬೇಕು, ಎಂಬುದನ್ನು ತೋರಿದ್ದಾರೆ. ಹಿಂದಿನವರು ಕಾಮುಕರೆಂದು–ತಾಳಗೆಟ್ಟವರೆಂದು ಹಳಿಯುವ ಇಂದಿನ ಯುವಕರಿಗೆ ಪಾಠ ತೋರಿಸಿದ್ದಾರೆ. ಸ್ತ್ರೀಯೆಂದರೆ ಮಕ್ಕಳನ್ನು ಹೆರುವ ಯಂತ್ರವಲ್ಲ. ಅವಳೂ ಒಬ್ಬಳು ಜೀವಂತ ಪ್ರಾಣಿ. ಜೀವಿಸಿ ಸುಖದಿಂದ ಬಾಳಬೇಕಾದರೆ ಮಕ್ಕಳು ಮಿತಿಯಾಗ ಬೇಕು. ನಮ್ಮ ದೇಶದ ಹೆಂಗಳೆಯರಿಗೆ ದಾಸ್ಯದ ಬೇಡಿ ಒಂದೆಡೆ; ಮಕ್ಕಳ ಬೇಡಿ ಮತ್ತೊಂದೆಡೆ. ಚಿಕ್ಕನದಲ್ಲಿ ತಾಯಿಯಾಗುವುದು; ಅನೇಕ ಮಕ್ಕಳ ತಾಯಿಯಾಗುವುದು–ಆಗಿ–ಮಕ್ಕಳನ್ನು ಪರದೇಶಿ ಮಾಡುವುದು ರೂಢಿಯಾಗಿದೆ. 'ಅಷ್ಟಪುತ್ರ ಸೌಭಾಗ್ಯವತೀಭವ' ಎಂದು ಹೇಳಿದರು. ಎಂಟು ಮಕ್ಕಳನ್ನು ಪಡೆಯುವಷ್ಟು ದಿನ ಬದುಕುವುದೆಲ್ಲಿ ಎಂಬುದನ್ನು ತಿಳಿಯಲಿಲ್ಲ. ಮಕ್ಕಳನ್ನು ಹೆರುವುದು ಒಂದೇ ಕಾರ್ಯವೆ? ಹೆಂಗಳೆಯರು ತಮ್ಮ ಮೊದಲಿಪ್ಪತ್ತೈದು ವರುಷದಲ್ಲಿ ಸಾಯುವುದು ಹೆರಿಗೆಯಿಂದ. ಎಷ್ಟೊ ಹೆಂಗಸರಿಗೆ ಹುಚ್ಚು ಹಿಡಿವುದು. ಕ್ಷಯ ಹತ್ತುವುದು. ಅನೇಕ ತರದ ಬೇನೆಗಳು ಸೇರಿಕೊಳ್ಳುವುವು—ಹೆರಿಗೆಯಿಂದ.

ಈ ಬಗೆಯ ವಿಚಾರಕ್ಕೆ ಅವರ ತಾಯಿಯ ಅಕಾಲ ಮರಣದ ಕಾರಣವು ಪೋಷಕವಾಗಿರಬಹುದು.

ಅಲ್ಲದೆ, ಮೊದಲೆ ಹೊಟ್ಟೆಗಿಲ್ಲವೆಂದು ಹುಯಿಲೆಬ್ಬಿಸುವಾಗ ದೇಶದ ಹುಟ್ಟುವಳಿಯ ಮೇಲೆ ಇದ್ದ ಜನತೆಯೆ ಭಾರವಾಗಿರುವಾಗ, ಹೆಚ್ಚು ಮಕ್ಕಳ ಭಾರವನ್ನು ಹಾಕುವುದು ಯಾವ ಹೆಮ್ಮೆಯ ಕೆಲಸ? ಎಂಟು–ಹತ್ತು ಮಕ್ಕಳನ್ನು ಹೆತ್ತು ಎಲ್ಲವುಗಳಿಗೆ ಅನ್ನ–ನೀರುಗಳನ್ನು ಒದಗಿಸದೆ ಅವುಗಳ ಜೀವನವನ್ನು ಹಾಳುಮಾಡುವುದಕ್ಕಿಂತ ಮಕ್ಕಳ ಸಂಖ್ಯೆ ಕಡಮೆಮಾಡ ಬೇಕು. ಒಬ್ಬ ಕೃಷ್ಣನು ಉದಯಿಸಿದರೆ ಸಾಕು. ಮೊದಲಿನ ಏಳು ಆಹುತಿ ಮಾಡಬಹುದು ಕಂಸ. ಹುಟ್ಟಿಸಿ—ಆಹುತಿ ಕೊಡುವುದಕ್ಕಿಂತ, ಒಬ್ಬ ಕೃಷ್ಣನ ಉದಯದ ಸಲುವಾಗಿಯೆ ಹೆಚ್ಚು 'ವಿಚಾರಮಾಡಿದರೆ ಮಕ್ಕಳು ಮನೆಗೆ ಸೊಗಸು ತರುವುವು. ತಾಯಿಗೆ ಆನಂದವನ್ನುಂಟುಮಾಡುವುವು; ದೇಶದ ಉನ್ನತಿಯನ್ನು ಮಾಡುವುವು; ತಮ್ಮ ಏಳ್ಗೆಯನ್ನು ಸಾಧಿಸುವುವು. ನಮ್ಮ ಸಂಸಾರದಲ್ಲಿ 'ಕೃಷ್ಣ'ನ ಉದಯವಾಗಬೇಕಾದರೆ ಕಂಸನು ಬೇಕು—'ಸಂಸಾರಿಗ ಕಂಸ'ನು ಬೇಕು?

ನಾಟಕವು ಸೂಚ್ಯವಾದುದರಿಂದ ಅದು ತಿಳಿಯಲಿಲ್ಲವೆಂದು ಗುಲ್ಲು ಎದ್ದಿತ್ತು ಅದರ ಪ್ರಯೋಗವಾದಾಗ. ಬಿಚ್ಚಿಹೇಳಲಾಗದುದನ್ನು ಸೂಚ್ಯವಾಗಿ ಹೇಳುವುದು ರೂಢಿ. ಏಕೆ ಬಚ್ಚಿಡಬೇಕೆಂದರೆ— ಅದು ಸಮಾಜದ ರೀತಿ.

೧೯೩೩ನೆಯ ಇಸ್ವಿಯು ಜಾಗಿರದಾರರ ಹೆಸರನ್ನು ಕನ್ನಡನಾಡಿನಲ್ಲೆಲ್ಲ ಹಬ್ಬಿಸಿತು. ಅದುವರೆಗೆ ಕಲಿತವರಲ್ಲಿ ಅವರ ಹೆಸರು ಬಳಕೆಯಲ್ಲಿತ್ತು. ಆದರೆ ಆ ವರುಷ—ಮೂಲೆಮೂಲೆಗೂ ಹೆಸರು ಪಸರಿಸಿತು. ಅದು ' ಹರಿಜನ್ವಾರ ' ನಾಟಕದಿಂದ.

ಆಗ ಹರಿಜನ ಚಳವಳಿಯು ರಭಸದಲ್ಲಿತ್ತು. ಸಮಾಜದಲ್ಲಿ, ಕೆಲವರು ಮೇಲು, ಕೆಲವರು ಕೀಳು, ಎಂಬುದು ದೇಶದ ಉನ್ನತಿಯ ದೃಷ್ಟಿಯಿಂದ ರಾಜಕೀಯ ದೃಷ್ಟಿಯಿಂದ ಸರಿಯಾದ ವಿಚಾರವಲ್ಲ ಎಂಬದು ತಿಳಿದುಬಂದುದ ರಿಂದ ಅದರ ನಿರ್ಮೂಲನಕ್ಕಾಗಿ ಮಹಾತ್ಮಾ ಗಾಂಧಿ ಅವರು ಟೊಂಕ ಕಟ್ಟಿದರು.

ಸನಾತನಿಗಳ ' ವರ್ಣಾಶ್ರಮ ವಿಭಾಗ 'ದ ಅರ್ಥ ಮಾಡುವಿಕೆಯು ಆನುವಂಶೀಯತೆಯ ತತ್ವದ ಮೇಲೆ ಇದೆ. 'ಬ್ರಾಹ್ಮಣನ ಮಗನು ಬ್ರಾಹ್ಮಣನು, ಹೊಲೆಯರ ಮಗನು ಹೊಲೆಯನು; ಅವರು ಏನಾದರೂ ಬದಲಾಗುವಂತಿಲ್ಲ; ಅವರು ಕರ್ಮಾನುಸಾರ ಭೋಗಿಸಲೇಬೇಕು; ಅವರ ಉದ್ಧಾರ ಮಾಡುವುದು ಬುದ್ಧಿಗೇಡಿತನ ' ಎಂದು. ವಿಚಾರಿಗಳು ' ವರ್ಣಾಶ್ರಮ 'ದ ಅರ್ಥವನ್ನು ಬೇರೆಯಾಗಿಯೆ ಮಾಡುವರು. 'ಗುಣ–ಕರ್ಮದ ಮೇಲೆ, ಶ್ರಮವಿಭಾಗದ ತತ್ವದ ಮೇಲೆ, ಸಮಾಜದ ವಿಭಾಗ ಮಾಡಿದ್ದುದು ಅಂದು–ಇಂದಲ್ಲ. ಬುದ್ಧಿಯ ಕೆಲಸ ಮಾಡುವವನು ಬ್ರಾಹ್ಮಣನೆ ಹೊರತು ಬ್ರಾಹ್ಮಣನ ಮಗನು ಬ್ರಾಹ್ಮಣನಲ್ಲ. ಕೀಳು ಕೆಲಸ ಮಾಡುವವನು ಹೊಲೆಯನೆ ಹೊರತು ಹೊಲೆಯನ ಮಗನು ಹೊಲೆಯನಲ್ಲ. ಬ್ರಾಹ್ಮಣನು–ಹೊಲೆಯನಂತೆ ಕೀಳುಕೆಲಸ–ಅವನಿಗಿಂತಲೂ ಕೀಳು ಕೆಲಸ ಮಾಡುವಾಗ ಜನಿವಾರದ ಜಂಭವೇಕೆ ? ಅವನೂ ಮನುಷ್ಯ-ಇವನೂ ಮನುಷ್ಯ; ಇವರಿಬ್ಬರ ಮೇಲುಕೀಳುಗಳನ್ನು ಇವರ ಗುಣಗಳೆ ನಿರ್ಣಯಿಸುವಾಗ—ಜನ್ಮದ ಜಾಡ್ಯವೇಕೆ ? ' ಎಂದು.

'ಹರಿಜನ್ವಾರ'ವು ಸನಾತನಿಗಳನ್ನು ಬಡಿದೆಬ್ಬಿಸಿತು. ವಿಚಾರ ಮಾಡದೆ ಇದ್ದವರನ್ನು ವಿಚಾರ ಮಾಡಲು ತೊಡಗಿಸಿತು. ವಿಚಾರಮಾಡತೊಡಗಿದಾಗ ಒಳ್ಳೆಯ ದಾರಿಯನ್ನು ಎಡವಬಹುದು. ನಿಂತ ನೀರಾದರೆ ಕೊಳೆಯುವುದು. ಬ್ರಾಹ್ಮಣನಾಗಿ ಹುಟ್ಟಿದರೂ–ಕೊಳೆತ ಮೇಲೆ ಅವನು ಹೊಲೆಯನೆ. ಅವನ ಕೊಳೆಯ ನಿದರ್ಶನವು ಅವನ ಕೊಳೆತ ಜನಿವಾರವೆ? ಅದಕ್ಕೆ ಅದನ್ನು ಹರಿ. ಜನಿವಾರವನ್ನು ಹರಿ. 'ಹರಿ–ಜನ್ವಾರ'. ಜನಿವಾರವನ್ನೆ ಹರಿದ ಮೇಲೆ ಬ್ರಾಹ್ಮಣನ ಸಂಕೇತ ಉಳಿಯಲಿಲ್ಲ. ಗುಣವೆ ಗೊತ್ತು ಮಾಡಿಕೊಡಬೇಕು.

'ಹರಿಜನ್ವಾರ' ವು ಜಾಗಿರದಾರರಿಗೆ ಗೆಲುವು ತಂದಿತು. ಈ ಗೆಲವು ಹಿಂದಿನ ತಮ್ಮ ಗೆಲುವನ್ನು–'ಯಮನ–ಸೋಲ' ನ್ನು ನೆನಪಿಗೆ ತಂದುವು. ಇಳಕಲ್ಲಿನಲ್ಲಿ ಸಾಯಲು ಪ್ರಯತ್ನಿಸಿದಾಗ ಸಾಯದೆ ಬದುಕಿದುದು ಅವರ ಗೆಲುವು–ಕೊಲ್ಲಲಾರದುದಕ್ಕೆ 'ಯಮನ ಸೋಲು' ಬಂತು.

ಗೆದ್ದವಗೆ ಮಾಲೆ ಹಾಕಬೇಕೆಂದು ಹಂಬಲಿಸುವವರು ಬಹಳ. ಜಾಗಿರ ದಾರರ ಮನೆಗೆ 'ಮದುಮಗಳ' ತಂದೆಯಂದಿರು ಬಂದು-ಹೋಗತೊಡಗಿದರು. ನಮ್ಮಲ್ಲಿ, ಕನ್ಯೆಯು ವರನ ಮನಸ್ಸಿಗೆ ಬರುವುದಷ್ಟೆ ಇದೆ–ಕನ್ಯೆಗೆ ವರನ ಬಗ್ಗೆ ವಿಚಾರ ಮಾಡುವ ಅಧಿಕಾರವಿಲ್ಲ. ಮದುವೆಯಾಗುವವನ ಮನದಂತೆ ಕನ್ಯೆಯು ಇರಬೇಕು. ಗಂಡನು ಸನಾತನಿ ಬ್ರಾಹ್ಮಣನು ಆಗುವ ಸಂಭವ ಬಂದರೆ ಕನ್ಯೆಯು ಸನಾತನಿಯ ಸೋಗು ಧರಿಸುವಳು. ಸುಧಾರಕನ ಕೈ ಹಿಡಿಯುವ ಪ್ರಸಂಗವು ಹೆಚ್ಚು ಸಮೀಪವೆನಿಸಿದರೆ, ಆ ರೀತಿಯ ಬದಲಾ ವಣೆಯಾಗುವುದು. ಈ ಕನ್ಯಾ–ವೇಷ–ಭೂಷಣ ಬದಲಾವಣೆ–ಕನ್ಯೆಯರ ತಂದೆಯರ ಮನೋವೃತ್ತಿ–ಮೋಜೆನಿಸಿತು. ಕನ್ಯೆಗೆ ಯೋಗ್ಯ ವರನನ್ನು ಹುಡುಕುವುದೆಂದರೆ 'ಅಶ್ವಮೇಧ' ಮಾಡಿದಂತೆ, ಎಂಬುದು ಹೊಳೆದಾಗ ಬಂತು–'ಅಶ್ವಮೇಧ' ವು.

ಕಳೆದ ವರುಷ ಜಾಗಿರದಾರರ ಭಾಷಾಶಾಸ್ತ್ರವು ಇಂಗ್ಲಿಶದಲ್ಲಿ ಪ್ರಸಿದ್ಧ ವಾಗಿತ್ತು. ಕರ್ನಾಟಕದ ಕುಲಪುರೋಹಿತರಿಗೆ ಅದು ಸಮಾಧಾನವಾಗಲಿಲ್ಲ. ಉತ್ತಮಗ್ರಂಥಗಳು ಕನ್ನಡದಲ್ಲಿ ಬರಬೇಕು, ಎಂಬ ಲವಲವಿಕೆಯಿಂದ ಜಾಗಿರ ದಾರರನ್ನು ಕೇಳಿಕೊಂಡರು, ಅದೆ ವಿಷಯದ ಮೇಲೆ ಕನ್ನಡದಲ್ಲಿ ಬರೆಯಲು.

ಹಿರಿಯರಾದ ಕುಲಪುರೋಹಿತರ ಮಾತು ಮೀರುವುದೆ? ಕನ್ನಡ ಜನತೆಗೆ ಒದಗಿಸಿಕೊಟ್ಟರು ಕನ್ನಡದಲ್ಲಿ 'ಭಾಷಾಶಾಸ್ತ್ರ'ವನ್ನು. 'ಶಾರದೆಯ ಸಂಸಾರ ಎಂದು ಅದಕ್ಕೆ ಹೆಸರು. 'ಶಾರದೆಯ ಸಂಸಾರ'ವು ಶಾರದೆಯ ಸಂಸಾರದ ಮುಂಬರವಿಗೆ ಮುನ್ನುಡಿಯಾಯಿತು. 'ಶಾರದಾದೇವಿ' ಒಲಿಯುವ ಕಾಲ ಬಂತು. ಸಂಸಾರ ಹೂಡುವ ವಿಚಾರವನ್ನು ತಂದಿತು. ಅದು ಸಹಜ ಬೆಳವಣಿಗೆಯಲ್ಲವೆ? ಗೆಲುವಿನಮಾಲೆ ಬಂತು.



## ಏಳನೆಯ ಸ್ಥಿತಿ

# ಸಂಸಾರಿಗ

'ಜಾಗಿರದಾರರು ಇನ್ನೂ ಮದು ಮಾಡಿಕೊಂಡಿಲ್ಲವೇಕೆ? ಕೆಲಸ ಸಿಕ್ಕಿದೆ. ಗಳಿಸತೊಡಗಿದ್ದಾರೆ. ಸಾಲ ಭಾರವೂ ಕಡಿಮೆಯಾಗತೊಡಗಿದೆ.' ಎಂದು ಜನರು ಆಗಾಗ ಮಾತನಾಡ ತ್ತಿದ್ದರು. ಮದುವೆಗೆ ಮುಖ್ಯ ಬೇಕಾದುದು ಮನಸ್ಸು; ದುಡ್ಡಲ್ಲ! ತಾಂ ತೀರಿದ ನಂತರ ಒಬ್ಬಂಟಿಯಾಗಿರುವುದು ಪ್ರಸಂಗ ಬಂತು. ಅದು ರೂಢಿಯಾ ಬಿಟ್ಟಿತು. ಇಂಗ್ಲಂಡದಿಂದ ಬಂದು ನಿರುದ್ಯೋಗಿಯಾಗಿ ಅಲೆಯುವಾ ಒಬ್ಬನೆ! ತಾನು—ತಾನು—ತಾನು! ಸಾಲದ ಭಾರದ ವಿಚಾರ ಮಾಡುತ್ತ ಇದ್ದ ದುಡ್ಡನ್ನು ಉಳಿಸಿ ಅದರ ಭಾರವನ್ನು ಕಡಿಮೆಮಾಡಬೇಕೆಂದು ವಿಚಾ ಬಂದಾಗೆಲ್ಲ ಮದುವೆಯ ವಿಚಾರವು ದೂರ ದೂರ ಹೋಗುತ್ತಿತ್ತು. ದುಡ್ಡಿ ತೊಂದರೆ ಒಂದು ಕಡೆ; ಏಕಾಂಗಿಯಾಗಿರುವುದು ಬೇಕೆನಿಸುವುದು ಮತ್ತೊಂದು ಈ ಎರಡು ಎಳೆದಾಟದಲ್ಲಿ ಮೂರನೆಯ ವಸ್ತು ಬರಲು ಅವಕಾಶವೆ ಇದ್ದಿಲ್ಲ ಅವಕಾಶವೆಲ್ಲಿ?

ಇನ್ನೂ ಒಂದು ಕಾರಣವಿರಬಹುದು. 'ಚಲೊ ಹುಡುಗೆ ಬೇಕಾದ ಅದಕ್ಕಾಗಿಯೂ ಕರ್ನಾಟಕದ ಹೊರಗೆ ಹೋಗಬೇಕಾಗುವುದು' ಎಂದ 'ಅಧಿಕಮಾಸ' ದಲ್ಲಿ ಉಸಿರುವಾಗ ಕರ್ನಾಟಕದಲ್ಲಿ ಮನಸ್ಸಿಗೆ ತಕ್ಕ

ಕನ್ಯೆಯರು ಸಿಕ್ಕುವುದಿಲ್ಲವೆಂದು ಮನವರಿಕೆಯಾಗಿರಬೇಕು. ಕರ್ನಾಟಕದಲ್ಲಿ ಕಲಿತ ಕನ್ಯೆಯರು ಕಡಮೆ. ಅಲ್ಲದೆ, ತಮ್ಮ ನಾಡಿದಲ್ಲಿಯ ಜನರು ತಮ್ಮ ಬಗೆಗೆ ವಿಚಿತ್ರ ಕಲ್ಪನೆಯುಳ್ಳವರಾಗಿದ್ದಾರೆ, ಎಂಬುದು. 'ಜಾಗಿರದಾರರು ಕುಡಿಯುತ್ತಾರೆ. ಅವರಿಗೆ ಕನ್ಯೆ ಕೊಡುವುದೆಂತು ?' ಎಂದು ಪಿಸು ಮಾತ ನಾಡುವ ಜನರೆ ಬಹಳ. ಅಹುದು ! ಕುಡಿಯುವುದು ನಿಜ ! ಪ್ರಯೋಗಾವಸ್ಥೆ ಯಲ್ಲಿದ್ದಾಗ ಕುಡಿಯುವುದು ಅಪರಿಚಿತವಿರಲಿಲ್ಲ. ಪ್ರಯೋಗದ ಆವೇಗಕ್ಕೆ ಸಿಲುಕಿ, ಒಮ್ಮೊಮ್ಮೆ ೧೫–೨೦ ಬಾಟಲಿಗಳ ತನಕ ಕುಡಿದ ಪ್ರಸಂಗಗಳು ಇದ್ದುವು. ಆದರೆ ಅಷ್ಟು ಕುಡಿಯಲು ಬೇಕಾಗುವ ಪ್ರಯೋಗ ಪ್ರವೃತ್ತಿಯ ಮರೆಗೆ ನಿಗ್ರಹಶಕ್ತಿಯಿದ್ದುದನ್ನು ಕಂಡವರು ಕಡಮೆ. ಕೆಲವರಂತೂ ತಮ್ಮ ತರ್ಕದ ಮಬ್ಬಿನಲ್ಲಿ, ಇದ್ದುದನ್ನು ಉದ್ದುದ್ದಮಾಡಿ ಹೇಳಿಕೊಳ್ಳುತ್ತ ಹೋಗು ವುರು. 'ಪರದೇಶಿ'ಗೆ ಸ್ವದೇಶಿಗಳು ಕನ್ಯೆಕೊಡಲು ಸಂಶಯ ಪಡುತ್ತಿದ್ದರು. ಆದರೆ ಜಾಗಿರದಾರರು ಮಾತ್ರ ಈ ಯಾವ ವಿಚಾರಕ್ಕೂ ಸಿಲುಕಿದ್ದಿಲ್ಲ. ಮದುವೆ ಬೇಕಿದ್ದಿಲ್ಲ. ಮದುವೆಗೆ ಮನಸ್ಸಿರಲಿಲ್ಲ.

ಆದರೆ ಕಾಲ ಬದಲಾದಂತೆ ಮನಸ್ಸು ಬದಲಾಗುವುದು. ನಾಟಕ ಕಾರನೆಂದು, ಒಳ್ಳೆಯ ಮಾತುಗಾರನೆಂದು ಸಮಾಜದಲ್ಲಿ ಮನ್ನಣೆ ಪಡೆಯುತ್ತಿ ರುವಾಗ ತನ್ನ ಹೆಮ್ಮೆಯನ್ನು, ಮೇಲ್ಮೆಯನ್ನು ಹೇಳಿಕೊಳ್ಳಲು ಸಂಗಾತಿಯು ಅವಶ್ಯವೆನಿಸತೊಡಗಿತು. ಚಿಕ್ಕವನಿದ್ದಾಗ ತಾಯಿಯ ಸಾನ್ನಿಧ್ಯವು ಮಾಡಿದ ಕಾರ್ಯಕ್ಕೆ ಪುಟವು ಕೊಡುತ್ತಿತ್ತು. ಇಂದು ತಾಯಿಯೆಲ್ಲಿ ? ಎಳೆಯತನದಲ್ಲಿ ತಾಯಿ ಅಗತ್ಯವೆನಿಸಿದಂತೆ, ಹರೆಯದಲ್ಲಿ ಹೆಂಡತಿಯು ಅವಶ್ಯವೆನಿಸುವಳು. ಸದಾಕಾಲ ಬದಿಯಲ್ಲಿರುವ ಸಂಗಾತಿಯೆಂದರೆ ಹೆಂಡತಿ. ಗುಟ್ಟಾಗಿ ಮಾತಾಡಲು ಗೆಳೆತಿಯ ಅಗತ್ಯವೆನಿಸತೊಡಗಿತು. ಆಗ ಬಂತು ಮದುವೆಯ ವಿಚಾರ.

ಇವರ ವಿಚಾರಕ್ಕೆ ಪ್ರಚೋದನ ಕೊಡುವುದಕ್ಕೆ ಅನುಕೂಲ ಪರಿಸ್ಥಿತಿ ಯೊಂದು ಒದಗಿ ಬಂತು. ಇಂಗ್ಲಂಡದಲ್ಲಿದ್ದಾಗ ಪುಣೆಯ ಚಂದ್ರಚೂಡರಿಗೆ ಇವರ ಪರಿಚಯವಾಗಿತ್ತು. ಇವರ ಬಗೆಗೆ ತಿಳಿದವರಾಗಿದ್ದರು. ಅವರು ತಮ್ಮ ಮಗಳನ್ನು ಇವರಿಗೆ ಮದುವೆಮಾಡಿಕೊಡಬೇಕೆಂಬ ಬಯಕೆಯನ್ನು ತೋರಿದರು. ಅವರ ಬಯಕೆಯು ಬಯಲಿಗೆ ಬರುವ ಕಾಲಕ್ಕೆಯೆ ಇವರಲ್ಲಿ ಮದುವೆಯ ವಿಚಾರ ಸುಳಿದುದು ಸಮವಾಯಿತು. ಹೆಚ್ಚು ಅರೆದಾಟವಿಲ್ಲದೆ,

ಮದುವೆಯ ನಿಶ್ಚಯವಾಯಿತು. ವರದಕ್ಷಿಣೆ ತೆಗೆದುಕೊಳ್ಳಲಿಲ್ಲವೆಂದು ಮನೆಯ ಜನರಲ್ಲಿ ಅಸಮಾಧಾನ ಕಂಡು ಬಂತು. ೧೯೩೪ರ ಫೆಬ್ರುವರಿಯಲ್ಲಿ ಜಾಗಿರದಾರರು 'ಶಾರದಾದೇವಿ'ಯ ಕೈಹಿಡಿದು ಸಂಸಾರ ಹೂಡಿದರು.

ಸಂಸಾರ ಹೂಡಿದ ಮೇಲೆ ಹೊಸ ಸೃಷ್ಟಿಯ ನಿರ್ಮಾಣವೆ ಆಯಿತು. ಹೊಣೆಗಾರಿಕೆಯಿಲ್ಲದ ತರುಣನಂತೆ ತಿರುಗುವುದು ನಿಂತಿತು. ಹೊಣೆಗಾರಿಕೆ ಹೆಚ್ಚತೊಡಗಿತು. ಒಂಟಿಯಾಗಿರುವುದು ಮುಗಿಯಿತು. ಬೇರೆಯೊಂದು ಮನೆಯನ್ನು ನೋಡಿ ನಿವಾಸಸ್ಥಳವನ್ನು ಬದಲಿಸಿದರು. ಮನಸ್ಸಿನಲ್ಲಿ ನೆಮ್ಮದಿ.

ಮನದೊಲವಿನಂತೆ ನಡೆದು ಮಡದಿಯನ್ನು ಪಡೆದು ಸುಖವಾಗಿ ಸಾಗಿರುವ ತಮ್ಮ ಜೀವನದ ಚಿತ್ರ ಒಮ್ಮೆ ಸುಳಿವುದು. ನಮ್ಮ ಸಮಾಜದಲ್ಲಿಯ ಒತ್ತಾಯದ ಮದುವೆಗಳ ವಿಚಾರ ಒಮ್ಮೆ ಹಾದು ಹೋಗುವುದು. ಒತ್ತಾಯದಿಂದ–ಮದುವಣಿಗನು ಒಲ್ಲೆನ್ನುವಾಗ–ಮದುವೆ ಮಾಡಿದರೆ ಮುಂದಿನ ಜೀವನದಲ್ಲಿ ಏನು ಸೊಗಸು ತರಬಹುದು ? ಇಂತಹ ಒತ್ತಾಯಕ್ಕೆ ಬಲಿಬಿದ್ದು ಬಾಳು ಬೀಳುಮಾಡಿಕೊಂಡ ತರುಣರು ಎಷ್ಟು ಇರಬಹುದೊ? ಹಿರಿಯರ ಒತ್ತಾಯವನ್ನು ಮೂಲೆಗೊತ್ತಿ ಮದುವೆಯನ್ನು ಮುರಿದುಕೊಂಡು ದೂರಾಗುವ ಧೈರ್ಯವೆಷ್ಟು ತರುಣರಿಗೆ ? ಈ ಚಿತ್ರವನ್ನೆಲ್ಲ ತೋರಿಸಬೇಕೆಂಬ ಲವಲವಿಕೆ ಬರತೊಡಗಿತು. ಈ ಹಳೆಯ ಸೃಷ್ಟಿಯಲ್ಲಿ ಸೊಗಸಿಲ್ಲ; ಮುದವಿಲ್ಲ. ಹಳೆಯದರ ಮದವೇರಿದೆ ಹಿರಿಯರಿಗೆ; ಹರೆಯದ ಹುಮ್ಮಸ್ಸು ಇದ್ದವರು ತಮ್ಮ ಕರ್ತೃತ್ವಶಕ್ತಿಯಿಂದ ಹಿರಿಯರ ಮದವನ್ನು ಇಳಿಸಬೇಕು. ಹೊಸ ಸೃಷ್ಟಿಯ ಚಿತ್ರವನ್ನು ತೋರಿಸಬೇಕು. ಹೊಸದು ಎಂದ ಕೂಡಲೆ ಮೈಮೇಲೆ ಮುಳ್ಳು ಬರಬಹುದು ದಿನಹೋದವರಿಗೆ. ತಮ್ಮ ಶಕ್ತಿ ಕಡಿಮೆಯಾಗುವ ಮೂಲಕ ಅವರಿಗೆ ಮುಂಬರುವುದೆಲ್ಲವು ಮುಳುವೆ. ಹಿಂದಿನದೆಂದರೆ ಹಿಗ್ಗು–ಹಿಂದಿನದು ತಮ್ಮ ಹರೆಯದ ಕಾಲ. ಹಿಂದಿನ ದಿನಗಳಿಗೆ ಮನಸೋತು ಮುಂದೋಡುವವರನ್ನು ಮರೆಮಾಚದೆ ಹಿಂದೊಗೆಯಬೇಕೆನ್ನುವವರಿಗೆ ಹೊಸ ಸೃಷ್ಟಿಯನ್ನೆ ತೋರಿಸಬೇಕೆಂದು–ಸೇಡಿನ ಸೃಷ್ಟಿ–'ವಿಶ್ವಾಮಿತ್ರ ಸೃಷ್ಟಿ'ಯನ್ನು ಒದವಿಸಿದರು.

'ವಿಶ್ವಾಮಿತ್ರ ಸೃಷ್ಟಿ'ಯಲ್ಲಿ ಕಲಿತ ತರುಣನಿಗೆ ಕಾಣುವ ನಮ್ಮ ಸಮಾಜದ ಚಿತ್ರವಿದೆ. ಅದೆಲ್ಲವೂ ಅವನ ದೃಷ್ಟಿಯಿಂದಲೆ ನೋಡಿದುದು.

ಕಾಲೇಜಿನಿಂದ ಪದವಿ ಪಡೆದು ಜೀವನದಲ್ಲಿ ಕಾಲಿಟ್ಟಾಗ ಸಮಾಜದ, ವ್ಯವಹಾರದ, ಜಗತ್ತಿನ ಜ್ಞಾನವೆಷ್ಟಿತ್ತೆಂಬುದನ್ನು ತೋರಿಸುವುದೊಂದು ಗುರಿ. ಪಡೆದ ಶಿಕ್ಷಣಕ್ಕೂ ನಡೆದ ವ್ಯವಹಾರಕ್ಕೂ ಸಂಬಂಧವಿದೆಯೆ ? ಇದ್ದರೆ ಎಂತಹದು ? ಮುಂತಾಗಿ ತರುಣರಿಗೆ–ಕಲಿತ ತರುಣರಿಗೆ ನಮ್ಮ ಸಮಾಜದಲ್ಲಿ ಎದುರುಬರುವ ಸಮಸ್ಯೆಗಳ ಸಂಬಂಧವನ್ನು ತೋರಿಸುವುದು ಮತ್ತೊಂದು. 'ವಿಶ್ವಾಮಿತ್ರ ಸೃಷ್ಟಿ'ಯು ಆ ಸಮಸ್ಯೆಗಳಿಗೆಲ್ಲ ಕನ್ನಡಿ.

ಆ ಕಲಿತ ತರುಣನು ಜಾಗಿರದಾರರೆ ಆಗಿದ್ದರೂ ಸಮಾಜದ ಪ್ರತಿಯೊಬ್ಬನೂ ತನ್ನ ರೂಪವನ್ನು ಅಲ್ಲಿ ಕಾಣಬಹುದು. ಅದೊಂದು–ಅದೂ ಒಂದು ಕಾದಂಬರಿ ಏನೊ ನಿಜ. ಆದರೆ ಅದೆಂತಹ ಕಾದಂಬರಿ! ಕಲ್ಪನಾಶಕ್ತಿಯ ಡೊಂಬತನದ ಸೋಗು ಅಲ್ಲಿ ಇಲ್ಲ. ಪ್ರತಿನಿತ್ಯ ನಡೆಯುವ, ಕಾಣುವ, ಕೇಳುವ—ವಿಷಯಗಳನ್ನು ಹೊಸ ಸೃಷ್ಟಿಯ ದೃಷ್ಟಿಯಿಂದ ನೋಡಿ ಚಿತ್ರಿಸಿದ್ದಾಗಿದೆ. ರೀತಿಯು ಹರಟೆಯ ಮಾದರಿಯದು. ಹರಟೆಹೊಡೆಯುವುದು ಒಂದು ಕಲೆಯೆಂದು ಒಪ್ಪಿಕೊಂಡಾಗ ಈ ಕಾದಂಬರಿಯನ್ನು ಓದಿ ಅದೆಂತಹ ಅಗಾಧಶಕ್ತಿಯಿದೆ ಇದರಲ್ಲಿ ಎನಿಸುವುದು. ಒಂದಲ್ಲ–ಎರಡಲ್ಲ ಮೂರುನೂರಾ ಇಪ್ಪತ್ತುಮೂರು ಪುಟಗಳಲ್ಲಿ ಹರಿದು ಬಂದಿದೆ ಹರಟೆಯ ಹೊನಲು. ತಡೆಯಿಲ್ಲದೆ ಸಾಗುವುದು; ಕ್ಷಣಕ್ಷಣಕ್ಕೆ ವಿಚಾರಮಾಡಲು ತೊಡಗಿಸುವುದು. ಚಿತ್ರ ತೆಗೆಯುವುದರಲ್ಲಿ ಸೂಕ್ಷ್ಮ ಗೆರೆಗಳಿದ್ದರೂ ತಾರುಣ್ಯದ—ಮುಂಧೋರಣದ–ಹೊಸಕಣ್ಣಿನವರಿಗೆ ಎಲ್ಲವೂ ಎದ್ದು ಕಾಣುವುದು. ಮನವು ಎಚ್ಚರಾಗುವುದು. ಓದಿ ನೋಡಿರಿ! ಹೊಸ ಸೃಷ್ಟಿಯ ಕಲ್ಪನೆ ಬರುವುದು–ನೋಡುವುದು ನಿಮಗೆ ಬೇಕಿದ್ದರೆ ಮಾತ್ರ!

ಮನೆಯಲ್ಲಿಯೂ ಹೊಸ ಸೃಷ್ಟಿಯೆ. ಹೊಸ ಜೀವನದ ಆನಂದವು ಜಾಗಿರದಾರರ ಮೊಗದ ಮೇಲೆ ಕಾಣತೊಡಗಿತು. ಹೆಂಡತಿಯಲ್ಲಿ ತಾಯಿಯ ಮಮತೆ ಕಾಣತೊಡಗಿದರು. ಸ್ನೇಹಸೌಹಾರ್ದದಿಂದ ಆರೈಕೆ ಮಾಡುವ ಶಾರದಾದೇವಿಯ ಸಹವಾಸವು ಹೊಸ ಹೊಸ ಸಾಹಸಕ್ಕೆ ಕೈಯಿಕ್ಕಲು ಸಹಾಯ ಮಾಡಿತು. ಒಂಟಿಯಾಗಿದ್ದಾಗ ವಿಚಾರಿಸಿ ಉತ್ಸಾಹವು ಉದುರಿ ಹೋಗುವ ದಿನಗಳು ಕಡಿಮೆಯಾಗತೊಡಗಿದುವು. ಒರಟುತನದ ಬಿರುಸು ಮಾತುಗಳು ಮೆತ್ತಗಾಗತೊಡಗಿದವು. ದಿನದಿನಕ್ಕೆ ಒಬ್ಬರೊಬ್ಬರ ಸಹವಾಸ

ದಿಂದ ಸ್ವಭಾವವು ಹೆಚ್ಚು ಹೆಚ್ಚಾಗಿ ತಿಳಿದುಬಂದು ಎರಡು ಜೀವನಗಳು ಬೆಸುಗೆಯನ್ನು ಹೊಂದುತಲಿದ್ದುವು.

ತಮ್ಮದೇ ಆದ ಚಿಕ್ಕ ವರ್ತುಲವೊಂದನ್ನು ಮಾಡಿಕೊಳ್ಳತೊಡಗಿದರು. ಅದು ಮದುವೆಯ ನಂತರದ ಸಹಜ ಪ್ರವೃತ್ತಿಯೆ. ಇದರ ಮೂಲಕ ಅನೇಕ ತಪ್ಪು ತಿಳಿವಳಿಕೆಗಳು ಸಂಭವಿಸುವುವು. 'ಮದುವೆಯಾದ ಮೇಲೆ ಜಾಗಿರ ದಾರರು ಬದಲಾದರು' ಎಂದು ಅನೇಕರು ಅನ್ನತೊಡಗಿದರು. ಜಾಗಿರ ದಾರರು ಒಬ್ಬರು ಏಕೆ? ಮದುವೆಯಾದ ಪ್ರತಿಯೊಬ್ಬನು ಬದಲು ಆಗಿಯೆ ಆಗುವನು. ಅಲ್ಲಿಯ ವರೆಗೆ ಗೆಳೆತನವು ಗಂಡಸು—ಗಂಡಸರಲ್ಲಿರುತ್ತದೆ. ಮದುವೆಯಾದ ಮೇಲೆ ತೀರ ಸಮೀಪದ ಗೆಳತಿಯೊಬ್ಬಳು ಸಿಕ್ಕುವಳು. ಗಂಡ ಸಿನ ಗೆಳೆತನ ಬುದ್ಧಿಯ ಬೆಳೆವಣಿಗೆಗಾಗಿ. ಹೆಂಗುಸಿನ ಗೆಳೆತನ ಅಂತಃಕರಣ ಕ್ಕಾಗಿ. ಅಂತಃಕರಣವು ಅಂಟಿಕೊಳ್ಳುವುದು. ಅಂತಃಕರಣವು ಆಳುವಾಗ ಬುದ್ಧಿಗೆ ಆಸ್ಪದ ಕಡಿಮೆಯಾಗುವುದು. ಅಂತಃಕರಣಕ್ಕೂ ಬುದ್ಧಿಗೂ ನೂರು ಮೈಲುಗಳ ಅಂತರ. ಬುದ್ಧಿಯು ಅಂತಃಕರಣದ ಬಲೆಯಲ್ಲಿ ಸಿಕ್ಕಾಗ ಬುದ್ಧಿಯ ಸಹವಾಸವನ್ನು ಅದು ದೂರುವುದು. ಮದುವೆಯಾದ ಮೇಲೆ ಗೆಳೆಯರ ಆಸ್ಪದವು—ಸಲುಗೆಯು ಕಡಿಮೆಯಾಗಬೇಕೆನ್ನಿಸುವುದು. ಅಲ್ಲಿಯ ತನಕ ಗೆಳೆತನದಿಂದ ಪಡೆಯುವ ಲಾಭವು ಆನಂತರ ಮನೆಯ ಮಡದಿಯ ಜೊತೆಗೆ ದೊರೆವಾಗ ಹೊರಗಿನ ಕೈ ಯಾಕೆ ಬೇಕು?

ಮದುವೆಯು ಸ್ವಾರ್ಥದ ತವರು. ಗಂಡನು ಹೆಂಡತಿಯ ಸೊತ್ತಾಗು ವನು. ಹೆಂಡತಿಯೂ ಹಾಗಾಗಬೇಕೆಂದು ಬಯಸುವಳು. ಹೆಂಡತಿಯು ಗಂಡನ ಸೊತ್ತಾಗುವಳು. ಅದೆ ಬಯಕೆ ಬೇರೂರುವುದು. ಗಂಡಹೆಂಡಿರು ಒಬ್ಬರಿಗೊಬ್ಬರು ಸೊತ್ತಾದ ಮೇಲೆ ಗೆಳೆಯರ ಮೊದಲಿನ ಸ್ಥಾನವು ಅವರ ವರ್ತುಲ ಬಾಹ್ಯವಾಗುವುದು. ಮದುವೆಯಾದ ಮೇಲೆ ಗೆಳೆತನವು ಅವಶ್ಯಕ-ಅಗತ್ಯದ ವಿಷಯವಾಗದೆ ಆನುಷಂಗಿಕವಾಗುವುದು. ಇದೆಲ್ಲ ಸ್ವಾಭಾವಿಕ ಮನಃಪ್ರವೃತ್ತಿ. ಕೆಲವೆಡೆಯಲ್ಲಿ ಹೆಚ್ಚಾಗಬಹುದು; ಕೆಲವೆಡೆಯಲ್ಲಿ ಕಡಿಮೆ ಕಾಣಬಹುದು; ಆದರೆ, ಆ ಪ್ರವೃತ್ತಿಯು ತನ್ನ ಕಾರ್ಯವನ್ನು ಮಾಡುವುದು.

ಸಂಸಾರದ ನೊಗದಿಂದಲೂ ಸೊಗಸು ಪಡೆಯುವ ಜಾತಿ ಜಾಗಿರದಾರ ರದು. ಕಷ್ಟಗಳು—ದುಃಖವು ಮನುಷ್ಯನಿಗೆ ಬಂದೆ ಬರುವುವು. ಸುಖವು

ಆನಂದವು ಬರಬೇಕಾದರೆ ಕಷ್ಟಗಳನ್ನು ಮರೆಯಬೇಕು. ಮರೆಯಲು ಪ್ರಯತ್ನಮಾಡಬೇಕಾಗುವುದು. ಜೀವನವು ಕಲಹವೊಂದು ಈ ಪ್ರಪಂಚದಲ್ಲಿ ಈ ಕಲಹವು ಅನಂತವಾಗಿದೆ. ಪ್ರತಿಯೊಬ್ಬರೂ ತಾವು ಸುಖದಿಂದಿರಬೇಕೆಂದು ಮೇಲ್ವಾಯ್ದು ಮುಗಿಬಿದ್ದು ಪ್ರಯತ್ನಿಸುವರು. ಹಾಗೆ ಪ್ರಯತ್ನ ಮಾಡುವಾಗ ಎರಡನೆಯವರ ಸುಖ-ದುಃಖಗಳ ಬಗೆಗೆ ವಿಚಾರಿಸುವುದು ಕಡಿಮೆ. ನನ್ನದು-ನನಗೆ ಬೇಕು. ಉಳಿದವರು ಉಳಿಯಲಿ; ಹಾಳಾಗಲಿ.

ನಮ್ಮ ದೇಶದಲ್ಲಿ ಇನ್ನೂ ಒಟ್ಟು ಕುಟುಂಬಗಳು ಇವೆ. ಆ ಪದ್ಧತಿಯಲ್ಲಿ ಲಾಭಹಾನಿಗಳು ಒಂದನ್ನೊಂದು ಅಂಟಿವೆ. ಆದರೆ, ಮಾನವ ಸ್ವಭಾವಕ್ಕೆ ಹಾನಿಯ ಚಿತ್ರವು ಎದ್ದು ಕಾಣುವುದರಿಂದ ಅದರ ಕಡೆಗೆಯೆ ಹೆಚ್ಚು ಲಕ್ಷ್ಯವು ಹೋಗುವುದು.

ಒಟ್ಟು ಕುಟುಂಬದಲ್ಲಿ ಎಲ್ಲರೂ ದುಡಿಯುತ್ತಿರುವುದಿಲ್ಲ. ಕೆಲವರೆ ದುಡಿಯುವವರು; ಉಳಿದವರು ದುಡಿಮದರ ಫಲ ಉಣ್ಣುವವರು. ದುಡಿಯದೆ ಇದ್ದವನ ಬಗೆಗೆ ಕನಿಕರ ಬರದೆ ತಿರಸ್ಕಾರ ಬಂದರೆ ಬಂತು, ಒಟ್ಟು. ಕುಟುಂಬದ ಅಂತವು. ಹಿರಿಯರ ಆಸ್ತಿಯ ಪಾಲುಮಾಡಿಕೊಳ್ಳುವ ಯೋಗ ಬರುವುದು. 'ನಮ್ಮದು ನಮಗೆ-ನಿಮ್ಮದು ನಿಮಗೆ' ಎಂದು, ಸಾಮಾನ್ಯವಾಗಿ, ಹೆಚ್ಚು ಗಳಿಸುವವನೆ ಅನ್ನುವ— ತನ್ನದು ತನಗೆ ಉಳಿಯಲೆಂದು. ಪಿತ್ರಾರ್ಜಿತ ಆಸ್ತಿಯ ಪಾಲು ಮಾಡಿಕೊಳ್ಳಲು ಕಡಿದಾಡುವದು, ಬಡಿದಾಡುವುದು ಈ ಪ್ರಪಂಚದಲ್ಲಿ ಹೊಸದಲ್ಲ, ನಡೆದು ಬಂದುದು. ಅದನ್ನು ಯೋಗ್ಯವಾಗಿ ಚಿತ್ರಿಸಿದ್ದಾರೆ ಜಾಗಿರದಾರರು, ತಮ್ಮ 'ಪ್ರಪಂಚ ಪಾಣೀಪತ್ತು'ನಲ್ಲಿ. ಪ್ರಪಂಚವೆಂದರೆ ಪಾಣೀಪತ್ತು ಎಂದು ಮಂಡಿಸಿದ್ದಾರೆ.

ಪಾಲು-ಪಾಲು ಎಂದು ಬಡಿದಾಡುವುದು ಹಿರಿಯರ ಆಸ್ತಿಗಾಗಿ. ಅದು ಹಿರಿಯರದೆ? ಅಲ್ಲ. ಅವರ ಹಿರಿಯರದು. ಅವರಿಗೆಲ್ಲಿಂದ ಬಂದುದು? ಅವರ ಹಿರಿಯರಿಂದ. ಒಂದು ಕಾಲಕ್ಕೆ ಎಲ್ಲ ಆಸ್ತಿಯು ಇಡಿ ಸಮಾಜದ ಆಸ್ತಿಯಾಗಿತ್ತು. ಇಂದು, ವ್ಯಕ್ತಿಗಳು ತಮ್ಮ ಸ್ವಾರ್ಥ ಹೇತುವನ್ನು ಸಾಧಿಸಲೋಸುಗ ತಮ್ಮದನ್ನಾಗಿ ಮಾಡಿಕೊಂಡು ಮಕ್ಕಳಲ್ಲಿ ಹಂಚುವ ರೂಢಿಹಾಕಿದ್ದಾರೆ. ಒಂದು ಕಾಲಕ್ಕೆ ಇಡಿಯಾಗಿದ್ದುದು ಇಂದು ಪುಡಿಪುಡಿಯಾಗಿದೆ. ಅದರ ಮೋಹಕ್ಕೆ ಸಿಲುಕಿದ ಮಾನವನು ಕೂಡ ಪುಡಿಪುಡಿಯಾಗಿದ್ದಾನೆ.

ಆದರಿಂದ ಯಾರಿಗೇನು ಸುಖವೆ? ಅದುವೆ ತಿಳಿದಿಲ್ಲ ಮಾನವನಿಗೆ. ಸುತ್ತಲಿನ ಸಮಾಜವು ಬೇಯುತ್ತಿರುವಾಗ ಸಮಾಜದ ಘಟಕವಾದ ತಾನು ತನ್ನ ಸ್ವಾರ್ಥದಿಂದ ಹೇಗೆ ಸುಖಿಯಾಗಬಯಸುವನೊ? ಎಂದು ಸಮಾಜಸತ್ತಾ-ವಾದದ ತತ್ವಗಳನ್ನು, ನಮ್ಮ ಇಂದಿನ ಸಮಾಜದ ಪದ್ಧತಿಗೆ ಸೇರಿಸಿ, ತೋರಿಸಿದ್ದಾರೆ. ಮಾನವರಲ್ಲಿಯ ಸಮತೆಯನ್ನು ಸಾರಿದಾರೆ, ಸಾಮಾಜಿಕ ವಿಭಜನೆಯು ಕೇವಲ ಆಡಳಿತಕ್ಕೋಸುಗ ಎಂದು ಉಸುರಿದ್ದಾರೆ.

'ಪ್ರಪಂಚ ಪಾಣೀಪತ್' ನಲ್ಲಿ ಪ್ರತಿಯೊಬ್ಬರು ಭಾಗವಹಿಸುವುದರಿಂದ ಅದು ಎಲ್ಲರಿಗೂ ಮನಹಿಡಿಯುವುದು. ಅದರಲ್ಲಿ ಬರುವ ಸನ್ನಿವೇಶಗಳು ಸಮಾಜ ಸಹಜವಾಗಿವೆ. ಪಾಣೀಪತ್ತಿನ ಪ್ರಪಂಚಕ್ಕನುಗುಣವಾಗಿವೆ.

ಪ್ರಪಂಚದ ಪಾಣೀಪತ್ತಿನಲ್ಲಿಯೂ ಪ್ರಶಾಂತ ವಾತಾವರಣವನ್ನು ಕಲ್ಪಿಸುವುದು ಜಾಗಿರದಾರರ ಸ್ವಭಾವ. ಮದುವೆಯಾದ ಮೇಲೆ ಮನೆತನದ ತೊಂದರೆಗಳು ಎದ್ದಿದ್ದರೂ ಮನದಲ್ಲಿ ಮಾತ್ರ ಶಾಂತಿ ನೆಲೆಗೊಂಡಿತ್ತು. ಸಾಹಿತ್ಯಕ್ಷೇತ್ರದಲ್ಲಿ ಮನ್ನಣೆಬರಲುತೊಡಗಿತು. ಸಾಹಿತಿ ಎಂದ ಮೇಲೆ ಪರಿಷತ್ತಿನಿಂದ ದೂರ ಉಳಿವುದು ಹೇಗೆ? ಪರಿಷತ್ತಿನಲ್ಲಿ ಸೇರಿದರು.

೧೯೩೪ರ ಸಾಹಿತ್ಯಸಮ್ಮೇಲನವು ರಾಯಚೂರಿನಲ್ಲಿ ಸೇರಿತ್ತು. ಅಲ್ಲಿಗೆ ಜಾಗಿರದಾರರು ತಮ್ಮ ಮಡದಿಯೊಂದಿಗೆ ಹೋಗಿದ್ದರು. ಸಮ್ಮೇಲನ ಮುಗಿಸಿಕೊಂಡು ತುಂಗಭದ್ರೆಯಲ್ಲಿ ಕೆಲಕಾಲ ತಂಗಿ, ಧಾರವಾಡಕ್ಕೆ ಬಂದರು. ಉತ್ಸಾಹ ಉಕ್ಕುವುದೆಂದು ಹೆಚ್ಚು ಕಾರ್ಯಮಾಡಲು ತೊಡಗಿದರು. ತಮ್ಮ ಮುಂದಿನ ಜೀವನದ ಬಗೆಗೆ ಹಂಚಿಕೆಗಳನ್ನು ಸಿದ್ಧಮಾಡತೊಡಗಿದ್ದರು. ಮನಸ್ಸಿನ ವಿಚಾರವು ಮೇರೆ ಮೀರಿದರೂ ದೇಹವು 'ತಡೆ'ಯೆಂದು ನುಡಿದಿತು; ಹಾಸುಗೆ ಹಿಡಿಯಿತು. ೧೫-೨೦ ದಿನ ಜ್ವರ ಬಂದು ಹೈರಾಣಾದರು. ಬೇನೆಯಿಂದ ಬಳಲಿದುದು ಹಿಂದಿನ ತಮ್ಮ ಬೇನೆಯ ನೆನಪನ್ನು ತಂದಿತು. ಅಂದು-ಇಂದಿನ ವ್ಯತ್ಯಾಸವು ತಿಳಿಯಿತು. 'ಅಳವು ಮೀರಿ ದುಡಿಯಲು ಬೇಡ' ಎಂದು ಎಚ್ಚರಿಕೆ ಕೊಟ್ಟಿತು ದೇಹ. ದೇಹಕ್ಕೆ ಆಲಸ್ಯ ಬಂದರೆ ಮನಸ್ಸು ಆಲಸಿಯಾಗುವುದು. 'ಆಲಸ್ಯ'ವು ಶರೀರ ಪೋಷಣೆಗೆ 'ಮಹೌಷಧಿ' ಎಂದು ಕನ್ನಡಿಗರಿಗೆ ಬೇರೆ ಹೇಳಬೇಕೆ?

ವಿಶ್ರಾಂತಿಪಡೆದು ಹುರಿಯಾಗುವಷ್ಟರಲ್ಲಿ ಜೂನ ತಿಂಗಳು ಬಂದಿತ್ತು. ಕಾಲೇಜು ಸುರುವಾಗಿತ್ತು. ಆ ವರುಷ ಅದೇನೊ ಕಾಲೇಜದ ಬಡ ವಿದ್ಯಾರ್ಥಿಗಳು ಸಹಾಯ ಕೇಳಲು ಮುಕುರಿದರು. ೧೯೨೯ರಲ್ಲಿ ಬನಾರಸಕ್ಕೆ ಹೋದಾಗ ಅಲ್ಲಿಯ ದೇವರ ಗುಡಿಯ ಎದುರು ಭಿಕ್ಷೆ ಬೇಡುತ್ತ ಕುಳಿತ ಜನರ ಚಿತ್ರ ಸುಳಿದು ಹೋಯಿತು. 'ಈ ಬೇಡುವುದಕ್ಕೇನು ಮಾಡಬೇಕು? ಬಿಕ್ಕೆ ಬೇಡುವುದೆ ಭಾರತೀಯನ ಧರ್ಮವಾಗಿದೆಯೆ? ಹೊಟ್ಟೆಗಿಲ್ಲವೆಂದು ಹಿಟ್ಟು ಬೇಡುವುದು; ಬುದ್ಧಿಯಿಲ್ಲವೆಂದು ಪರಕೀಯರಿಂದ ಬುದ್ಧಿಯ ಭಿಕ್ಷೆ ಬೇಡುವುದು; ಸ್ವಾತಂತ್ರ್ಯವಿಲ್ಲವೆಂದು ಸ್ವಾತಂತ್ರ್ಯದ ಭಿಕ್ಷೆ ಬೇಡುವುದು. ನಮಗೆ ಬೇಕಾದುದು ಏನೂ ಇಲ್ಲವೆ ನಮ್ಮಲ್ಲಿ? ನಮಗೆ ಕಾಣುವುದಿಲ್ಲವೆ? ನಾವು ಕಣ್ಣಿದ್ದು ಕುರುಡರೆ? ಅಥವಾ ಕುರುಡರ ಸೋಗು ಧರಿಸಿರುವೆವೆ? ಸೋಗೇಕೆ ಧರಿಸಬೇಕು? ಸೋಗಿನಿಂದಲೆ ಸೊಗಸು ದೊರೆವಾಗ ನಿಜರೂಪ ತಳೆದು ತೊಳಲಾಡುವುದು ಯಾರಿಗೆ ಬೇಕಾಗಿದೆ? ಭಾರತೀಯರು ನಿಜವಾಗಿ ಬಡವರೆ?'

'ಬಡವರೆಂದು ತಿಳಿದುಕೊಂಡು ಬಡತನದ ಸೋಗು ಹಾಕಿಕೊಂಡು ದುಡಿಯುವುದು ಬೇಡವಾಗಿ ದುಡ್ಡಿನ ಮೇಲೆ ಕಣ್ಣಿಟ್ಟುಕೊಂಡು ಕೂತರೆ ಆಗುವುದೇನು? 'ತೆಗೆಯಿರಿ ಕಣ್ಣು! ಕಾಣುವುದು' ಎಂದು ಯಾರಾದರೂ ಹೇಳಿದರೆ, ಕಣ್ಣುಮುಚ್ಚಿಕೊಂಡು ದೇವರ ಹಾಗೆ ಕುಳಿತರೆ, ನೋಡಿ ದುಃಖ ಬಡುವ ಯೋಗ ತಪ್ಪುವುದು, ಎಂದುತ್ತರಕೊಡುವರು. ದೇವರ ಹಾಗೆ ಕೂಡುವರಂತೆ! ಅವನೊಬ್ಬ ಕಲ್ಲು–ಇವರೂ–ಕಲ್ಲಾಗತೊಡಗಿದ್ದಾರೆ. ಸಂಗತಿ ಸಂಗದೋಷ; ದುಡಿಯಲು ಒಲ್ಲರು; ದುಡ್ಡು ಬೇಕನ್ನುರವಲ್ಲ! ಈ ಜಗತ್ತಿನಲ್ಲಿ ದುಡಿಯುವನಿಗೆ–ದುಡ್ಡು ಸಿಗುವುದು—ಸಿಕ್ಕದುಡ್ಡಿನ ಉಪಯೋಗವಾಗುವುದು' ಎಂದು ತಲೆಯಲ್ಲಿ ವಿಚಾರದ ಸುಳಿಯು ರಭಸದಿಂದ ತಿರುಗುವಾಗ 'ನರಕದಲ್ಲಿ ನರಸಿಂಹ'ನ ಅವತಾರವಾಯಿತು.

ಅದೆ ವರುಷ ಡಿಸೆಂಬರದಲ್ಲಿ ಮುಂಬಯಿಯಲ್ಲಿ ಸಾಹಿತ್ಯಸಮ್ಮೇಲನವು ನಡೆಯಿತು. ಆ ಕಾಲಕ್ಕೆ 'ನರಕದಲ್ಲಿ ನರಸಿಂಹ'ವನ್ನು ರಂಗಭೂಮಿಯ ಮೇಲೆ ಧಾರವಾಡದ ಕನ್ನಡ ನಾಟ್ಯವಿಲಾಸಿಗಳು ತಂದರು. ಆ ನಾಟಕದಲ್ಲಿಯ ಹೊಸತಂತ್ರದ ಮೂಲಕ ಜನತೆಯ ಮನವನ್ನು ಅದು ಅಷ್ಟು ಹಿಡಿಯ

ಲಾರದೆ ಹೋಯಿತು. ನಾಟಕದಲ್ಲಿಯು ಕನಸಿನ ದೃಶ್ಯವು, ಮಾರ್ಮಿಕವಾಗಿ ದ್ದರೂ ಜನತೆಗೆ ತಾಗದೆ ಹೋಯಿತು. ಆದರೆ ಅದರೊಳಗಿನ ವಿಚಾರಗಳು ಜನತೆಯನ್ನು ಚುಚ್ಚಿದುವು. 'ಇಂದಿನ ಯುವಕರ ಸಾಮೂಹಿಕ ಶಿಖಂಡಿತ್ವ, ಹಳೆಬರ ಸಂಪ್ರದಾಯ ಶರಣತ್ವದಿಂದ ಬೆಳೆಯುತ್ತಿರುವ ಸಾಮಾಜಿಕ ಶಿಖಂಡಿತ್ವ, ಅಜ್ಞಾನ-ಮೋಷ-ದಾರಿದ್ರ್ಯಗಳ ದೊಡ್ಡಾಟ-ಇಂತಹ ಸಂನಿವೇಶ-ವೃತ್ತಿಗಳ ಹಿನ್ನೆಳಲಿನಲ್ಲಿ ಒಬ್ಬ 'ನರ-ಸಿಂಹ' ನನ್ನು ಚಿತ್ರಿಸಿದೆ. ಇಂದು ಎಲ್ಲವೂ ಬೇರೆಯಾಗಲೇಬೇಕೆಂಬ ಹಟದಿಂದ ಹಿಂದಣ ದೇವರು ಸ್ವರ್ಗದಲ್ಲಿ ಸುಖ ಲೋಲುಪರಾಗಿದ್ದರೆ ಇಂದಿನ 'ನರಸಿಂಹ' ರು ನರಕದಲ್ಲಿ ತಿರುಗಾಡಿ ಜನರ ಕಷ್ಟನಷ್ಟಗಳಲ್ಲಿ ಭಾಗಿಯಾಗುವರು' ಎಂಬ ವಿಚಾರವನ್ನು ಮಂಡಿಸಿದ್ದಾರೆ.

ಈ ಅವಧಿಯಲ್ಲಿ ಅನೇಕ ಏಕಾಂಕಗಳು-ದೃಶ್ಯಗಳು ಬಂದುವು. 'ನಿರುತ್ತರ ಕುಮಾರ' 'ನನ್ನದಲ್ಲ' ದಂತಹ ದೊಡ್ಡವೂ ಕಂಪನಿ ನಾಟಕ ಗಳಿಗೆ ಕುಠಾರವಾದ 'ಸಂಪುಷ್ಟ ರಾಮಾಯಣ' ವೂ 'ಅಹಲ್ಯೋದ್ಧಾರ', 'ಕಾಮದಹನ', 'ತ್ರಿಶೂಲ' ದಂತಹ ವಿಡಂಬನಾತ್ಮಕ ದೃಶ್ಯಗಳೂ 'ಸರ್ಕಸ್ಸಿನ ಸರಸ್ವತಿ' ಯಂತಹ ಹುಡುಗಾಟಿಕೆಗಳೂ ಉದಯವಾದುವು.

ಹುಡುಗಾಟಿಕೆಯ ವಾತಾವರಣವು ಮನದಲ್ಲಿ ಮೂಡಿದಾಗ, ನಾಟಕ ವೊಂದು ಬಂತು. 'ಗಂಡೊ – ಹೆಣ್ಣೊ' ಎಂಬುದೆ ಅದು. ವಿಧವೆಯು ಗಂಡೊ ಹೆಣ್ಣೊ ಎಂಬ ವಿಚಾರದ ಹುಡುಗಾಟಿಕೆಯು ಅದರಲ್ಲಿದೆ. ಹುಡುಗಾಟಿಕೆ ಕಂಡರೂ ಅದರಲ್ಲಿ ತೊಡಕಿನ ಮಾತೊಂದು ಇದೆ. ನಮ್ಮ ಸಮಾಜದಲ್ಲಿ ಅವರಿಗೆ ಗಂಡಸಿನಂತೆ ಸ್ವತಂತ್ರ ಸ್ಥಾನವಿಲ್ಲ. ಹೆಂಗಸಿನಂತೆ ಪರತಂತ್ರತೆ ಇಲ್ಲ. ಹೆಂಗಸಿನ ಲಕ್ಷಣಗಳು ಅವಳಲ್ಲಿವೆ. ಗಂಡಸಿನ ಲಕ್ಷಣ ಗಳೂ ಇವೆ. ಹೆಂಗಸಿನ ರೂಪವೂ ಗಂಡಸಿನ ಅಧಿಕಾರವೂ ಅವಳಿಗಿದೆ. ಅದುವೆ ಸಮಸ್ಯೆ. ಹೆಂಗಸೆಂದರೆ– ಹೆಂಗಸು ಮಾಡಲಾರದ ಕಾರ್ಯವನ್ನು ಮಾಡುವಳು. ಗಂಡಸೆಂದರೆ—ರೂಪ-ವೇಷದಿಂದ ಹೆಂಗಸು. ಅದಕ್ಕೆ 'ಗಂಡೊ ಹೆಣ್ಣೊ' ಎಂದು ಪ್ರಶ್ನೆ ಮಾಡಿದ್ದಾರೆ. ಅದು ಪ್ರಶ್ನೆಯೆ. ಸಮಾಜ ದವರು ವಿಚಾರಿಸಬೇಕು. ಗಂಡೂ ಅಲ್ಲದೆ, ಹೆಣ್ಣೂ ಆಗದೆ, ಮೂರನೆಯ ಅವಸ್ಥೆಯನ್ನು ತಂದುಕೊಟ್ಟು-ಎರಡೂ ಅವಸ್ಥೆಗಳ ಹಾನಿಯನ್ನು ತುಂಬಿ ಸಮಾಜಕ್ಕೆ ಕಲಂಕರೂಪವಾದ ಅವಸ್ಥೆಯನ್ನು ವಿಧವೆಯ ಕೊರಳಿಗೆ ಕಟ್ಟಿದೆ.

ನಾಟಕವು ನಗುವಿನಿಂದ ತುಂಬಿದೆ. ಆದರೆ ಅದೆಂತಹ ನಗುವು? ನಮ್ಮ ಸಮಾಜದ ಹೇಸಿತನವನ್ನೆ ಬಯಲಿಗೆಳೆದು ನಗುವುದು. ನಗುವಾಗ ತೀಕ್ಷ್ಣವಾದ ನೋವು. ಆ ನೋವು ಮರೆಯಲು ನಗುವು. ವಿಧವೆಯರು ಸಮಾಜದಲ್ಲಿ ಕಾಣುವಾಗ, ನೋವು ಮರೆಯಾಗುವುದೆ? ಕ್ಷಣಕ್ಷಣಕ್ಕೆ ಚುಚ್ಚುವ ನೋಟವಿದು.

ಸಂನಿವೇಶ-ಹಾಸ್ಯದ ಮಾದರಿಯನ್ನು ಈ ನಾಟಕದಲ್ಲಿ ಕಾಣಬಹುದು. ವೆಂಕಟರಾಯರು ಸಮಾಜ ಸುಧಾರಕರೊಬ್ಬರು. ಅವರಿಗೆ ಇಬ್ಬರು ಹೆಣ್ಣು ಮಕ್ಕಳು. ಕೃಷ್ಣಕ್ಕ-ವಿಧವೆ. ಕಾವೇರಕ್ಕ-ಮದುವೆಗಾಗಿ ಬೆಳೆದು ನಿಂತವಳು. ಕಾವೇರಿಯು ಮದುವೆಮಾಡಿಕೊಂಡು ಗಂಡನ ಮನೆಗೆ ಹೋಗುವವಳು, ಎಂದು ವೆಂಕಟರಾಯರು ಕೃಷ್ಣಕ್ಕನಿಗೆ ಮಮತೆಯಿಂದ ಹೇಳುವರು: 'ನೀನೆ ನನಗೆ ಗಂಡಸು ಮಗನಂತೆ' ಎಂದು. ಮನೆಯಲ್ಲಿ ಪೂಜೆಮಾಡಿಕೊಂಡು ಇರುತ್ತಿರುವ ಆಚಾರಿ-ಕೃಷ್ಣಾಚಾರಿ. ರಾಯರು ಸಲುಗೆಯಿಂದ ಆಚಾರಿಯನ್ನು 'ಕೃಷ್ಣೂ' ಎಂದು ಕೂಗುವರು. 'ತನ್ನನ್ನು ಕರೆದರೆಂದು ಕೃಷ್ಣಕ್ಕ' ನು ಮಡಿಯೊಳಗಿಂದಲೆ ಬರುವಳು. 'ಕೃಷ್ಣೂ ಅಂದರೆ ನೀಯೇನು?' ಎಂದಾಗ, 'ಮತ್ತ-ನನಗ ನೀನೆ ಗಂಡಸಮಗ ಇದ್ದಾಂಗ' ಎಂದು ಹೇಳಿದ್ದೆಲ್ಲ ಎಂದು ಉತ್ತರ. ರಮಾಕಾಂತ— ಸ್ವಚ್ಛಂದವೃತ್ತಿಯ ತರುಣ-ಮದುವೆಗಾಗಿ ತಾನೇ ಅಲೆಯುತ್ತಿರುವ. ವೆಂಕಟರಾಯರ ಮನೆಯಲ್ಲಿ 'ಮದುಮಗಳು' ಇದ್ದಾಳೆಂದು ಅವಳನ್ನು ನೋಡಲು ಮನೆಗೆ ಹೋಗುವ. ಮೊಗಸಾಲೆಯಲ್ಲಿ ಕೃಷ್ಣಕ್ಕ ಬತ್ತಿ ಮಾಡುತ್ತ ಕುಳಿತಿದ್ದು ಕಾಣುವುದು. ವೆಂಕಟರಾಯರು ಸುಧಾರಕರೆಂದು ಕೇಳಿ, ಅಲ್ಲಿ ಕುಳಿತವಳೆ ಮದುವೆಗಾಗಿ ಎಂದು ತಿಳಿದು ಮಾತು ನಡೆಸುವನು. ಮನದಿಂದ ಒಪ್ಪುವನು.

ಹೀಗೆ ಹಾಸ್ಯರಸಕ್ಕೆ ಪೋಷಕವಾಗುವಂತೆ ಸಂನಿವೇಶಗಳನ್ನು ಹೆಣೆದಿದ್ದಾರೆ. ಮಾತುಗಳು ಎರಡರ್ಥವಾಗುವಂತೆ; ಆಡುವ ಪಾತ್ರಗಳು ಬೇರೆಬೇರೆಯಾಗಿಯೆ ತಿಳಿದುಕೊಳ್ಳುವವು. ಆ ಅರ್ಥವ್ಯತ್ಯಾಸದಿಂದ ನೋಟಕರಿಗೆ ನಗು. ನಗುವೆ ಆ ನಾಟಕದ ಜೀವಾಳ. ಹುಡುಗಾಟವೆಂದಮೇಲೆ ನಗೆಗೆ ಕೊರತೆಯೇನು? ಅದರಲ್ಲಿಯ ವಿಚಾರಕ್ಕಿಂತ ಆಚಾರದ ಕಡೆಗೆ-ನಟನೆಯ ಕಡೆಗೆ ಮನ ಹರಿಯುವುದು. ನಕ್ಕು ನಲಿದಾಡಿದರೂ ಕೊನೆಗೆ ಪ್ರಶ್ನಾರ್ಥಕವೆ!

ಗಂಡೋ-ಹೆಣ್ಣೋ ? ಯಾರು ಹೇಳಬೇಕು ? ' ಭಲೆ ! ಭಾಪು ! ಬ್ರಾಹ್ಮಣ ಸಮ್ರಾಜವೆ ! ಗಂಡೂ ಅಲ್ಲದ, ಹೆಣ್ಣೂ ಅಲ್ಲದ ಮೂರನೆಯದೊಂದು ಪ್ರಾಣಿಯನ್ನು ನಿರ್ಮಿಸಿದ ನಿಮ್ಮ ಸೃಷ್ಟಿಕೌಶಲ್ಯಕ್ಕೆ ಧನ್ಯವಾದಗಳು ' ಎನ್ನುವಂತೆ ಯಾಗುವುದು.

ಹೊತ್ತು ಕಳೆಯುವ ಹಂಚಿಕೆಯೆಂದು, ಶಾಲೆ ಕಾಲೇಜುಗಳ ವಾರ್ಷಿಕೋತ್ಸವದ ಸಮಯ-ಪ್ರಸಂಗಕ್ಕೆ ಅನುಗುಣವಾಗುವಂತೆ, ಪ್ರಾಸಂಗಿಕ ಹಿನ್ನೆಲೆಯನ್ನಿಟ್ಟುಕೊಂಡು, ' ಯಯಾತಿ ', ' ದೇವಯಾನಿ ', ' ಭಾಮಿನಿಯ ಭಾಗ್ಯೋದಯ', ' ನಾರಿಯೆ ನಾಟ್ಯದೇವತೆ ' ಮುಂತಾಗಿ, ಕೆಲವು ಚುಟುಕು-ದೃಶ್ಯಗಳನ್ನು ಬರೆದರು.

ಏಕಾಂಕಗಳು ಬಹು ಜನರ ಮನಸೆಳೆದುವು. ಹಿಡಿತದಲ್ಲಿ—ವೆಚ್ಚದ ಹೆದರಿಕೆಯಿಲ್ಲದೆ ಉತ್ಸವ ಪ್ರಸಂಗಗಳಲ್ಲಿ ಮನರಂಜನೆಗೆ ಅನುಕೂಲವೆಂದು ಜನರು ಏಕಾಂಕಗಳನ್ನು ಬಯಸತೊಡಗಿದರು. ಅದಕ್ಕಾಗಿ ' ಪೂರ್ವರಂಗ ' ವೆಂಬ ಏಕಾಂಕ ಸಂಗ್ರಹವನ್ನು ಪ್ರಸಿದ್ಧಿಸಿದರು. ಅದೊಂದು ಸಾಹಸವೆ !

೧೯೩೬ನೆಯ ವರುಷವು ಹೊಸ ಜೀವನದ ಹಿನ್ನೆಲೆಯಾಯಿತು. ಶಾರದಾದೇವಿ ಚೊಚ್ಚಲು ಬಸುರಿ. ಗಂಡ-ಹೆಂಡಿರು ಇಬ್ಬರೂ ಮುಂಬರುವ ಹೊಸ ಜೀವನದ ಕಣಸುಗಳನ್ನು ಕಾಣತೊಡಗಿದರು. ಜಾಗಿರದಾರರಿಗೆ ಹಿರಿತನವ ಹೆಮ್ಮೆ ಬರತೊಡಗಿತು. ಶಾರದಾದೇವಿಯ ಆರೈಕೆಯಲ್ಲಿ ಹೆಚ್ಚುಕಾಲ ಕಳೆಯತೊಡಗಿದರು. ಓದುವುದು ಬರೆಯುವದು ಬೇಸರವಾಗತೊಡಗಿತು. ಹೆಂಗಸರ ಬಯಕೆಗಳ ಆಘಾತವು ಗಂಡಸರ ಮೇಲೆ ಆಗುವುವಂತೆ ! ಅದು ನಿಜವೆಂಬಂತೆ ತೋರುತ್ತದೆ. ಶಾರದಾದೇವಿಯನ್ನು ಆಲಸ್ಯವು ಆವರಿಸಿತು. ಆಲಸ್ಯದ ಪ್ರತಿ-ನೆರಳು ಜಾಗಿರದಾರರ ಮೇಲೆ ಬೀಳತೊಡಗಿತು.

ತಂದೆಯಾಗುವುದು, ವಾಸ್ತವ ಜೀವನದ ಸಂಬಂಧವನ್ನು ಸೂಚಿಸಿತು. ಅಲ್ಲಿಯವರೆಗೆ, ರಂಗಭೂಮಿಯು ಜೀವನವಾಗಿತ್ತು. ಇನ್ನು ಮುಂದೆ ಜೀವನವೆ ರಂಗ-ಭೂಮಿಯ ಸ್ಥಾನವನ್ನು ಪಡೆಯುವಂತೆಯಾಯಿತು. ನಾಟಕ ಬರೆಯುವದು ಸಾಕೆನಿಸತೊಡಗಿತು. ಮನದಲ್ಲಿಯ ವಿಚಾರಗಳನ್ನು ಜನದ ಎದುರು ಮಂಡಿಸಲು ' ನಾಟಕ ' ವೆ ಮುಖ್ಯ ಮಾಧ್ಯಮವೆಂದು ಅಂದು ಬಗೆದಿದ್ದರು. ಅಂದಿನ ಜೀವನಕ್ಕೆ ಅದು ಸರಿ ಎನಿಸಿತ್ತು. ಇಂದು ಜೀವನವು

ಬೇರೆ ರೂಪ ತಳೆಯತೊಡಗಿದೆ. ಅಂದು ಒಂಟಿಯಾಗಿದ್ದಾಗ, ಉತ್ಸಾಹವು ಒಂದೇ ಕಡೆಗೆ ಹರಿಯುತ್ತಿದ್ದಾಗ, ರಂಗಭೂಮಿಯ ಜೀವನವೆ ಹೆಚ್ಚು ಸೊಗಸು ಎಂದು. ಸಮಾಜ ಜೀವನದ ಸಂಪ್ರದಾಯಗಳ ಕಟ್ಟುಗಳನ್ನು ಬದಿಗಿಟ್ಟು ಹೊಸ ಜೀವನದ ವಾತಾವರಣದಲ್ಲಿ ಸುಳಿಯಲು ಅನುವಾಗುವುದು ಎಂದು. ತಾತ್ಪೂರ್ತಿಕವಾದುದು—ಮುಂದೆ ನಿರಂತರವಾಗುವುದು ಎಂದು.

ಈ ಇಳಿ ಮನಸ್ಸಿನ ಅವಸ್ಥೆಯಲ್ಲಿಯೆ, 'ಸಂಧ್ಯಾಕಾಲ' ಬಂದಿತು. ಹೊಸ ಸೃಷ್ಟಿಯಲ್ಲಿ ಕಾಲಿಟ್ಟ ತರುಣರ ಸ್ಥಿತಿ ಏನಾಗಿದೆ? ಹೊಸ ಸೃಷ್ಟಿಯು ಸೊಬಗು ಮನವನ್ನು ಹಿಡಿದಿದೆ. ಆದರೆ ಮನದ ಒಲವಿನಂತೆ ನಡೆಯಲು ಅದೇ ಮನಸ್ಸಿಗೆ ಧೈರ್ಯವಿಲ್ಲ. ಅದೇಕೆ? ಬುದ್ಧಿಯ ಹೋರಾಟ ಬುದ್ಧಿಯೊಂದಿಗೆ ಆಗುತ್ತಿದ್ದರೆ ಮೈ ತಿಂಡಿ ತೀರುತ್ತಿತ್ತು; ಮನಸ್ಸಿಗೆ ಸಮಾಧಾನ ಬರುತ್ತಿತ್ತು. ಆದರೆ ತಿಕ್ಕಾಟವಿದೆ ಬುದ್ಧಿ–ಅಂತಃಕರಣಗಳ ನಡುವೆ. ಹರಿತ ಬುದ್ಧಿಯು ಅಂತಃಕರಣವನ್ನು ಇರಿಯಲರಿಯದು. ತಂದೆ–ಹಳೆಯ ಸಂಪ ದಾಯದವರು. ಮಕ್ಕಳು–ಹೊಸಯುಗದವರು. ಮಕ್ಕಳಿಗೆ ಹೊಸಯುಗದ ಸುಧಾರಣೆಗಳು ಮನಹಿಡಿದಿವೆ. ಅವುಗಳನ್ನು ಆಚಾರದಲ್ಲಿ ತಂದರೆ ಹಳೆಬರ–ತಂದೆಯರ ಮನನೊಯ್ಯುವುದು. ಹಿರಿಯರ ಮನ ನೋಯ್ಯುವುದೆಂದು ಎಷ್ಟು ದಿನ ಸುಮ್ಮನೆ ಕೂಡುವುದು? ಎಂದು ವಿಚಾರಿಸಿದರೆ, ಹುಡುಗರಿಗೆ ಸ್ವತಂತ್ರ ಜೀವನದ ಮಾರ್ಗವಿಲ್ಲ; ನಿರುದ್ಯೋಗವು ಬಲಿಹಾಕಿದೆ. ತಂದೆಯ–ಹಿರಿಯರ ಮೇಲೆ ಅವಲಂಬಿಸಿರುವರು ಹುಡುಗರು. ದೇಹದ ಭಾರ ಹಿರಿಯರ ಮೇಲೆ; ಮನಸ್ಸಿನ ಒಲವು ಹೊಸಯುಗದ ಕಡೆಗೆ. ಹಳೆಬರ ಕೈದಿ. ಹೊಸಯುಗದ ವಿಚಾರಿ. ಒಂದು ಕಾಲು ಹಿಂದೆ– ಒಂದು ಕಾಲು ಮುಂದೆ. ಜೀವನವು ಸಂಧಿ ಕಾಲದಲ್ಲಿದೆ. ಈ ಅವಸ್ಥೆಯನ್ನು ದಾಟಲೇಬೇಕು. ಇದೇ ವಿಚಾರ ಬಂದಿದೆ 'ಸಂಧ್ಯಾಕಾಲ'ದಲ್ಲಿ. 'ಸಂಧ್ಯಾಕಾಲ'ವು ತರುಣರ ಜೀವನದ ಸಂಧ್ಯಾಕಾಲವು.

ಬ್ರಾಹ್ಮಣ್ಯದ ಸಂಕೇತಗಳಾದ ಅಕ್ಷತಿ, ಚಂಡಿಕೆ, ಜನಿವಾರಗಳು ಕೇವಲ ಮುಳುವಾಗಿವೆ ಹುಡುಗರಿಗೆ. ಅವುಗಳನ್ನು ಬಿಟ್ಟು ಬಿಡುವ ಮನಸ್ಸಿದ್ದರೂ ಅವುಗಳಲ್ಲಿ ವಿಶ್ವಾಸ ಹಾರಿಹೋಗಿದ್ದರೂ ಹಿರಿಯರ ಮೋರೆಯ ಎದುರು ಅವುಗಳನ್ನು ಧರಿಸುವರು. ಇದಕ್ಕೆ ವಿಚಾರ ಭೇದವೆ ಕಾರಣ. ಬ್ರಾಹ್ಮಣ್ಯದ ಕರ್ಮಗಳಾದ 'ಸಂಧ್ಯಾವಂದನ ಜಪ–ತಪ–ಅನುಷ್ಠಾನ'ಗಳನ್ನು ಮಾಡದೆ

ಇದ್ದಾಗ ಕೇವಲ ಬ್ರಾಹ್ಮಣ್ಯದ ಸಂಕೇತಗಳನ್ನು ಏಕೆ ಧರಿಸಬೇಕು ? ಎಂಬುದು ತರುಣರ ಮತ. ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ಮೆ ! ಎಂದು ಹೇಳಿಕೊಳ್ಳುವ, ಹಳಬರ ಮಾತು ಬೇರೆ. 'ಎಷ್ಟಾಗುವುದೊ ಅಷ್ಟು ಮಾಡಬೇಕು. ಅಕ್ಷತಿ ಹಚ್ಚಿಕೊಳ್ಳದೆ ಇದ್ದರೂ ಅಡ್ಡಿಯಿಲ್ಲ; ಅಕ್ಷತಿ ಹಚ್ಚಿಕೊಂಡವರನ್ನು ನೋಡಿ ಬಂದು ಉಂಡರೂ ಎಷ್ಟೊ ಪುಣ್ಯ ಬರುವುದು.' ಎನ್ನುವರವರು. ಪುಣ್ಯಕ್ಕಾಗಿ ಗುದ್ದಾಡುವುದು.

ಪುಣ್ಯಕ್ಕಾಗಿ ಏಕೆ ಇಷ್ಟು ಗುದ್ದಾಟ-ಪ್ರಯತ್ನ, ಎಂದು ಕೇಳಬಹುದು. ಪಾಪವನ್ನು ತೊಳೆಯಲು ಪುಣ್ಯ. ಪಾಪ ಮಾಡುವುದು ಮಾನವ ಸಹಜ. ಅದರ ನಿವಾರಣೆಗಾಗಿ ಪುಣ್ಯದ ಕವಚ ಪಡೆಯುವುದು. ಆ ಕವಚದ ಮರೆಗೆ ನಿಂತು ಏನು ಪಾಪ ಮಾಡಿದರೂ ಜನರಿಗೆ ಕಾಣುವುದು ಪುಣ್ಯವೆ. 'ಮನಸಿನ ಕಾರ್ಯ ಮನಸಿನಂತಾಯಿತು' ಎಂದು ಲಟಕಿ ಹೊಡೆದರಾಯಿತು.

'ಸಂಧ್ಯಾಕಾಲ'ದಲ್ಲಿ ಇದೆಲ್ಲವೂ ಕಾಣುವುದು. 'ಸಂಧ್ಯಾವಂದನೆ' ಮಾಡಬೇಕೆಂದು ಮುಂಜಾವಿನಿಂದ ಸಂಜೆಯ ವರೆಗೆ ಪ್ರಯತ್ನ ಮಾಡುತ್ತಿರುವನೆಂದು ತೋರಿಸುವ-ಮುದುಕ. ಸಂಧ್ಯಾವಂದನ-ಬ್ರಾಹ್ಮಣ್ಯದ ಕರ್ಮ. ಆದರೆ ಕಣ್ಣು ಮುಂದೆ ನಡೆಯುವ ವ್ಯವಹಾರವನ್ನು ನೋಡಿ-ನೋಡಿ ಸುಮ್ಮನೆ ಕೂಡುವುದು ಮನಸ್ಸಿಗೆ ಎಲ್ಲಿ ಆಗುವುದು ?

ಮನಸ್ಸು ಪ್ರತಿನಿತ್ಯದ ಲೌಕಿಕ ವ್ಯವಹಾರಕ್ಕೆ ಹರಿಯುವುದು. ಸಂಧ್ಯಾವಂದನೆ ಮಾಡದೆ ಗತ್ಯಂತರವಿಲ್ಲ. ಸಂಧ್ಯಾವಂದನೆಗೆಂದು ಕೂಡಬೇಕೆನ್ನುವಾಗ, ಬೀಸುವ ಹಾಡು ಕೆರಳಿಸುವುದು. ಅದನ್ನು ತಡೆದು, ಮಂತ್ರವನ್ನು ಮುಂದರಿಸಬೇಕೆಂದು ಹವಣಿಸುವಾಗ 'ಸ್ಟೋವ್ಹಿ'ನ ಸಪ್ಪಳ. ಅದರಿಂದ ಮನಸ್ಸನ್ನು ಹಿಡಿದು ಎಳೆತಂದು ಸಂಧ್ಯಾವಂದನೆಗೆ ಹಚ್ಚಲು ಎಳೆದಾಡುವಾಗ ಸಾಲಗಾರ ಧರೆಪ್ಪನ ಕೂಗು. 'ಮೈಲಿಗ್ಯಾತು. ಮುಂದೆ ಸಂಧ್ಯಾವಂದನೆ ಮಾಡೋದು ಹ್ಯಾಂಗ! ' ಆದರೂ ಅನುಸಂಧಾನ: 'ಮೈಲಿಗ್ಯಾಗಿದ್ದರೂ ಕೇಳಿಸದಂತೆ ಇರಬೇಕು. ಒಮ್ಮೆ ಕೇಳಿಸಿದುದು ಮೈಲಿಗಿ ಅಲ್ಲ ! ' ಎಂದು. ಆದರೆ ಮನಸ್ಸು ಸಂಧ್ಯಾವಂದನೆಯ ಕಡೆಗೆ ಹರಿಯುವ ಬದಲು ಮತ್ತೊಮ್ಮೆ ಧರೆಪ್ಪ ಎಲ್ಲಿ ಒದರುವನೊ, ಎನ್ನುವ ಕಡಿಗೆಯೆ. 'ಅಂತೂ ಈ ಕಾಟದೊಳಗೆ ಸಂಧ್ಯಾವಂದನೆ ಮುಗಿಯೋ ಹಾಂಗಿಲ್ಲ' ಎಂದು ಹೊರಬರುವನು.

ಆ ಪಾರಮಾರ್ಥದಿಂದ ಲೌಕಿಕರಂಗಕ್ಕೆ ಬರುವನು. ಕೈಯೆತ್ತಿ ಸಹಾಯ ಮಾಡುವನೊ ಎಂಬ ಸೋಗು. ಮಾರವಾಡಿಯ ಮುತ್ತಜ್ಜನಂತೆ, ಒಂದಕ್ಕೆ ಮೂರು ಗುಣಿಸಿ, ಅಸಲಿನ ಮೂರುಪಟ್ಟು ಬಡ್ಡಿ ಗುಣಿಸುವ ವ್ಯವಹಾರ. 'ದುಡ್ಡಿದ್ದವರು ರಾಯರು, ಯಾತ್ರೆ ತೀರ್ಥ ಮಾಡಬೇಕು' ಎಂದು ಅನ್ನುವವರ ಬಾಯಿ ಬಂದು ಮಾಡಲು ಹೊಸತಂತ್ರ: 'ಯಾತ್ರೆ–ತೀರ್ಥ ಅಂತ ಅಲೆದಾಡಿ ದುಡ್ಡು ಹಾಳುಮಾಡುವುದಕ್ಕಿಂತ, ಇದ್ದೂರಲ್ಲಿಯೆ ಧರೆಪ್ಪನಂತಹ ಬಡವರಿಗೆ ಸಹಾಯ ಮಾಡುವುದು ಏನು ಕೆಡಕು?' ಎಂದು ಮುಂದು ಮಾಡುವುದು.

ಸಂಜೆಯಾಗುವುದೇ ತಡ, ರಾತ್ರಿಯ ವಿಚಾರವೆ. ಮನೆಯ ಹೆಂಡತಿಗೆ ಮುದುಕ; ಹೊರಗಲ್ಲ. ಹೊಸ ಹುರುಪಿನ ಅಳಿಯನಂತೆ ವೇಷಧರಿಸಿ ಹೊರಗೆ ಹೋಗುವ; ಸಲ್ಲದ ಕೆಲಸಕ್ಕೆ ಸಾಗಿದುದಕ್ಕೆ ಕಾಲುಮುರಿದುಕೊಂಡು ಬರುವ.

ಮುದುಕನಿಗೆ ಮಗನೊಬ್ಬ—ಪುಟ್ಟು: ಕಲಿತವ; ಹೊಸಯುಗದ ತರುಣ; ಹಳೆಯ ಸಂಪ್ರದಾಯ ಬೇಕಿಲ್ಲ. ಜನಿವಾರ ಹಾಕದೆ ಹೊಟ್ಟೆಗೆ ಊಟ ಸಿಗುವುದಿಲ್ಲೆಂದು ಹೊಟ್ಟೆಯ—ಕಿಚ್ಚಿಗಾಗಿ, ಸೋಗು ಧರಿಸಿರುವ. ತಾರುಣ್ಯದ ಆವೇಗಕ್ಕೆ ಸಿಲುಕಿ ಪ್ರೇಮಪತ್ರಗಳನ್ನು ಬರೆದರೂ ಅವುಗಳನ್ನು ಕಾರ್ಯರೂಪಕ್ಕೆ ತರಲು.... ತಂದೆಗೆ ಕೂಡ ಗೊತ್ತು ಆಗುವಂತಿಲ್ಲ.

ಗೆಳೆಯನೊಬ್ಬ–ಆಚಾರಿ–ವೆಂಕಪ್ಪ: ಅವನಿಗೆ ತಲೆಯಮೇಲೆ ಚಂಡಿಕೆ ಇಲ್ಲ; ಕುತ್ತಿಗೆಗೆ ಜನಿವಾರವಿಲ್ಲ. ಈ ಲೋಪ–ದೋಷಗಳನ್ನು ಮುಚ್ಚಿಕೊಳ್ಳಲು ಹವಣಿಸುವನು. ಆಗ ಅವನ ಜನಿವಾರ ಹುಡುಕುವಿಕೆಯ ಹವಣಿಕೆ–ಹವ್ಯಾಸ–ಹಂಚಿಕೆಗಳನ್ನು ನೋಡಿದರೆ, ಕೇವಲ ಊಟಕ್ಕಾಗಿ ಈ ಉಪಾಯಗಳನ್ನೆಲ್ಲ ಮಾಡುತ್ತಿರುವನಲ್ಲ! ಎಂದು ಅನಿಸುವುದು. ಊಟ ಸಿಕ್ಕರೆ, ಜನಿವಾರವೂ ಬೇಡ–ಚಂಡಿಕೆಯೂ ಬೇಡ.

ಪೋಸ್ಟಮನ್–ದಾಸಯ್ಯನ ಸಂನಿವೇಶಗಳು ಸ್ವಾರಸ್ಯ ಪೂರ್ಣವಾಗಿವೆ. ಆದರಿಂದ ಹಿಡಿತದಲ್ಲಿ ಬಿಗುವು ಹೆಚ್ಚು; ನಾಟಕದಲ್ಲಿ ನಗುವು ಹೆಚ್ಚು.

೧೯೩೬ನೆಯ ವರುಷ: ಕನ್ನಡನಾಡಿಗೆ ವೈಭವದ ವರುಷ. ವಿಜಯನಗರ ಸಾಮ್ರಾಜ್ಯದ ಆರುನೂರನೆಯ ವರುಷದ ಸ್ಮಾರಕೋತ್ಸವವು ಜರುಗುವುದಿತ್ತು. ಒಳ್ಳೆ ವೈಭವದಿಂದ ಉತ್ಸವ ಮಾಡಿ ಕನ್ನಡಿಗರಿಗೆ ಅವರ ಹಿಂದಿನ

ವೈಭವದ ಅರಿವನ್ನು ತಂದುಕೊಡಬೇಕೆಂದು ಎಳಸಿದರು. ಎಲ್ಲಕ್ಕೂ ಮೂಲ ದುಡ್ಡು. ಅನೇಕ ಮಹನೀಯರು ಧನಸಂಗ್ರಹದ ಕಾರ್ಯವನ್ನು ಕೈಕೊಂಡರು.

ಧಾರವಾಡದ ಕನ್ನಡ ನಾಟ್ಯವಿಲಾಸಿಗಳೊಂದಿಗೆ ಜಾಗಿರದಾರರು ದುಡ್ಡು ಕೂಡಿಸುವುದಕ್ಕೆ ಹೊರಟರು. ರಾಣೆಬೆನ್ನೂರು, ಬ್ಯಾಡಿಗಿ, ಹಾವೇರಿ, ಈ ಊರುಗಳಲ್ಲಿ 'ಹರಿಜನ್ವಾರ' 'ಪ್ರಪಂಚ ಪಾಣೀಪತ್ತು' 'ನರಕದಲ್ಲಿ ನರಸಿಂಹ' ಈ ಮೂರು ನಾಟಕಗಳನ್ನು ಮಾಡಿದ್ದಾಯಿತು. ಜನರ ಮನರಂಜನೆ ಯೊಂದಿಗೆ ಸ್ಮಾರಕೋತ್ಸವಕ್ಕೆ ದುಡ್ಡು ಕೂಡಿಸುವುದಾಯಿತು.

ಹಂಪಿಯಲ್ಲಿ ವಸತಿ ಏರ್ಪಾಡು ಮಾಡುವ ಸಮಿತಿಯಲ್ಲೊಬ್ಬರಾಗಿ ಜಾಗಿರದಾರರು ಅವಿಶ್ರಾಂತ ದುಡಿದರು. ನೋಡಿದರೆ ಬಡಕ ದೇಹ! ಎಲ್ಲಿಂದ ಬರುತ್ತಿತ್ತೊ ಉತ್ಸಾಹ! ದುಡಿತಕ್ಕೂ ಒಂದು ಮಿತಿಯಿದೆ; ಹಿಡಿತ ಮೀರಿದರೆ ತೊಡಕು ಬರುವುದು. ಅತ್ತಿತ್ತ ಅಲೆದಾಡುವಾಗ ಕಾಲ್ತೊಡಕಿ ಬಿದ್ದರೊಮ್ಮೆ. ತಲೆಗೆ ಬಲವಾದ ಪೆಟ್ಟು ತಾಗಿತು. ಆ ನೆವದಿಂದ ನಸುವೆ ವಿಶ್ರಾಂತಿ ದೊರೆಯಿತು. ಕಾರ್ಯಮಾಡುವವನಿಗೆ ಕಾಲ್ತೊಡಕಿನ ಹೆದರಿಕೆಯಲ್ಲಿ?

ಉತ್ಸವ ಮುಗಿಸಿಕೊಂಡು ಬಂದರು. ಅಂದಿನ ವೈಭವದ ಉತ್ಸವದ ಸವಿನೆನಪು ಸುಳಿಯುತ್ತಿರುವಾಗ್ಗೆಯೆ, ಮತ್ತೊಂದು ಉತ್ಸವದ ಸಮಯ ಬಂತು. ತಂದೆಯಾಗುವ ಸಮಯ. ೧೯೩೭ರ ಫೆಬ್ರುವರಿ ೫ನೆಯ ದಿನ ಬೆಳಗು ಶಾರದಾದೇವಿ ಹೆಣ್ಣು ಮಗುವನ್ನು ಹೆತ್ತರು. ಜಾಗಿರದಾರರ ಮೊಗವು ಅರಳಿತು.

ಸಾಂಪ್ರದಾಯವಂತರಾಗಿದ್ದರೆ 'ಚೊಚ್ಚಲು ಹೆಣ್ಣು ಮಗು' ವೆಂದು ಮೂಗುಮುರಿಯುತ್ತಿದ್ದರು. ಸಾಂಪ್ರದಾಯಕ್ಕೆದುರಾಗಿ ನಿಂತ ಜಾಗಿರದಾರರಿಗೆ ಆ ವಿಚಾರವಿಲ್ಲ. ಹೆಂಣೆಂದು ಕಡೆಗಣಿಸುವ ಕಾಲ ಇದಲ್ಲ. ಹೆಂಣು–ಗಂಡು ಗಳಲ್ಲಿ ಕೀಳು–ಮೇಲು ಎಂಬ ಭಾವನೆಗೆ ಅವಕಾಶವಿಲ್ಲ; ಒಂದೆ ನಾಣ್ಯದ ಇಕ್ಕೆಲಗಳಂತೆ ಹೆಂಣುಗಂಡುಗಳಲ್ಲಿಯ ಸಮಭಾವನೆ ಅವರದು. 'ಮಗು' ಎಂದ ಮೇಲೆ ಅದು ಮಮತೆಯದು. ಮಕ್ಕಳಲ್ಲಿ ಕೀಳು ಮೇಲು ಎಂಬ ವಿಚಾರ ಬರಬಹುದೆ?

'ಸಾಮಾನ್ಯ ಸಂಸಾರದ ದೃಷ್ಟಿಯಿಂದ ಚೊಚ್ಚಲು ಗಂಡು ಮಗುವಿಗಿಂತ ಹೆಣ್ಣು ಮಗುವೆ ಹೆಚ್ಚು ಅನುಕೂಲ' ಎನ್ನುವ ಜನರೂ ಇದ್ದಾರೆ.

ಜಾಗಿರದಾರರ ಹೊಸ ಜೀವನದ ಉಷಃಕಾಲದಲ್ಲಿ ಮಗುವು ಉದಯವಾದುದರಿಂದ ಆ ಮಗುವಿಗೆ 'ಉಷಾ' ಎಂದು ಹೆಸರಿಟ್ಟರು.

ಜೀವನವು ಮತ್ತೊಂದಡಿ ಮುಂದೆ ಸಾಗಿತು. ಹೊಸ ಬಾಳು. ಹೊಸ ಹವ್ಯಾಸ. ಹಳೆಯ ಸಾಂಪ್ರದಾಯಗಳ ಕೊಳಚೆಯನ್ನು ಹೊಸ ಕೈಯಿಂದ ಹಸನ ಮಾಡಿದ, ತುರ್ಕಸ್ತಾನದಲ್ಲಿ ಹೊಸ ಬೆಳಕು ಹರಡಿದ 'ಕಮಾಲ ಪಾಶಾ'ನ ಜೀವನ ಚರಿತೆಯನ್ನು ಬರೆದರು. ಧಾರವಾಡದಲ್ಲಿ ಆದೇ ಮಿಂಚುತಲಿದ್ದ ಮಿಂಚಿನ ಬಳ್ಳಿಯಲ್ಲಿ ಎರಡನೆಯ ಕುಡಿಯೆಂದು ಪ್ರಕಟವಾಯಿತು. ಕನ್ನಡ ಸಾಹಿತ್ಯಕ್ಕೆ ಹೊಸಕಳೆ. ಅಂದಿನ ತುರ್ಕಸ್ತಾನದ ಸ್ಥಿತಿಯೂ ಇಂದಿನ ಕನ್ನಡನಾಡಿನ ಸ್ಥಿತಿಯೂ ಒಂದೆ ಆಗಿರುವುದರಿಂದ ಅವರಿಗೆ ಕಂಡ ದಾರಿಯು ನಮಗೂ ಕಾಣಬಹುದು ಹೊಸ ಬೆಳಕಿನಲ್ಲಿ. ಅವರು ತಮ್ಮ ಏಳ್ಗೆಯನ್ನು ಪ್ರಯತ್ನದಿಂದ ಸಾಧಿಸಿದರು. ಆದರೆ ನಾವು........?

'ಕಮಾಲಪಾಶಾ'ನ ಜೀವನಚರಿತೆಯನ್ನು 'ವಿಲಾಸಿ' (**Amateur**) ಯೆಂದು ಬರೆದರೂ ನುರಿತ ಬರಹಗಾರನ ಕೈಚಳಕ ಅಲ್ಲಿದೆ. 'ಇದು ಇದ್ದುದು ಚರಿತೆ. ಆದರೆ ಓದಲು ತೊಡಗಿದಾಗ ಕಾದಂಬರಿಯೊ ಎಂದು ಮೊದಲು ಅನಿಸಿ, ರಾಜಕಾರಣವನ್ನು ಚರ್ಚಿಸುವ ನಿಬಂಧವಿರಬೇಕೆಂದು ಸೂಚಿಸಿ, ಕೊನೆಗೆ ಅದು ಮುಗಿವುದು, ಒಬ್ಬ ತತ್ವನಿಷ್ಠಯೋಗಿಯ ಜೀವನ ಕತೆಯೆಂದು. ಹೇಳುವುದು 'ಕಮಾಲ'ನ ಚರಿತೆಯಾದರೂ ಚಿತ್ರಿಸುವುದು ತುರ್ಕಸ್ತಾನದ ಸ್ಥಿತಿಯಾದರೂ ನಮ್ಮ ನಾಡಿನ ರಾಜಕೀಯ–ಸಾಮಾಜಿಕ ಪರಿಸ್ಥಿತಿಗೆ ಎಷ್ಟು ಸಮೀಪವಿದೆಯಲ್ಲ! ಇದ್ದುದನ್ನು ಇದ್ದಂತೆಯೆ ಹೇಳುವುದಾದರೆ ಜಾಗಿರದಾರರೆ ಏಕೆ ಬೇಕು? ಅವರ ಮಾತು–ರೀತಿ ವಿಶಿಷ್ಟವಾಗಿ ಅವರವೆ. ರಾಜಕಾರಣದಂತಹ ತೊಡಕಿನ ವಿಷಯವನ್ನು ಅದೆಷ್ಟು ಸರಸವಾಗಿ–ಸರಲವಾಗಿ–ಹೇಳಿದ್ದಾರಲ್ಲ! ಎಂದೆನ್ನುವಾಗ ಶ್ರೀ. ಲಾಸ್ಕಿ ಅವರ ಮಾತೆ ನೆನಪಾಗುವುದು; 'ನಿಮಗೆ ಸಾಹಿತ್ಯದಕಿಂತ ರಾಜಕಾರಣವೆ ತಕ್ಕುದು' ಎಂಬುದು.

ದುಡಿವುದು ಸರಕಾರಿ ನವಕರನೆಂದು; ರಾಜಕಾರಣದ ಮನತಿಂಡಿಯು ಸಮಾಧಾನ ಹೊಂದುವ ಬಗೆ ಹೇಗೆ? ಈ ಪ್ರಶ್ನೆಯನ್ನು ಬಿಡಿಸಿತು 'ಜಯಂತಿ'. ಆ ವರುಷ ಧಾರವಾಡಕ್ಕೊಂದು ಹೊಸ ಮಾಸಿಕಪತ್ರ.

ಮುಂಬಯಿಯು ಬಲುಮಂದಿಗೆ ಪ್ರಯೋಗ ಭೂಮಿಯಾಗಿದ್ದಂತೆ, ಧಾರವಾಡವು ಕಾರ್ಯಭೂಮಿಯಾಗಿದೆ. ಧಾರವಾಡದ ನೆಲದ ಗುಣವೊ ಏನೊ ಅನ್ನಿಸುವುದು. ಹೊಸ ಕಾರ್ಯದ ಹುಟ್ಟು :ಧಾರವಾಡದಲ್ಲಿಯೆ. ಬೆಳೆಯುವ ಮೊದಲ ವರುಷಗಳೂ ಧಾರವಾಡದಲ್ಲಿಯೆ. ಆದರೆ ಅನೇಕ ಜನ ಜಾಣರು ಒಂದೆಡೆ ಸೇರಿದರೆ ಸೇರಿಕೊಂಡು ಸಾಗುವುದು ಕಠಿಣವಾಗುವುದು: ಆಗ ಉದಯವಾಗುವುದು ಗುಂಪು. ಒಂಟಿಯಾಗಿದ್ದಾಗ ಬ್ರಹ್ಮಚಾರಿಯ ಹುರುಪು ಇರುವುದು. ಗುಂಪುಕಟ್ಟಿಕೊಂಡಾಗ ಸಂಸಾರಿಗನ ಸ್ವಾರ್ಥ ಬರುವುದು. ಸ್ವಾರ್ಥವು ಗುಂಪನ್ನು ಮೂಲೆಗುಂಪು ಮಾಡುವುದು. ಇದೂ ಧಾರವಾಡದ ಮತ್ತೊಂದು ಪರಂಪರೆ. ಆದರೆ ಸಂಪ್ರದಾಯದ ಸೊಗಡಿನಿಂದ ದೂರವಾಗಿರಲು 'ಜಯಂತಿ' ಎಚ್ಚರಿಕೆಯನ್ನು ಪಡೆದೆ ಪ್ರಾರಂಭವಾಯಿತು. ಆದರ ಗತಿಯನ್ನು ನಿರುಕಿಸಬೇಕು.

ಜಾಗಿರದಾರರ ಹೊಸ ಹವ್ಯಾಸಕ್ಕೆ 'ಜಯಂತಿ'ಯು ಒಳ್ಳೆಯ ಕಾರ್ಯಭೂಮಿಯಾಯಿತು. ಆ ಮೊದಲು ಅಲ್ಲಲ್ಲಿ ಅನೇಕ ಲೇಖನಗಳನ್ನು ವಾರ, ಪಾಕ್ಷಿಕ, ಮಾಸಿಕ, ನಿಯತ ಕಾಲಿಕ ಪತ್ರಿಕೆಗಳಿಗೆ ಬರೆಯುತ್ತಿದ್ದರೂ ಲಾಕ್ಷಣಿಕ (feature) ಬರಹಗಳು ಮೀಸಲಾದುದು 'ಜಯಂತಿ'ಯಲ್ಲಿಯೆ. ಜನತೆಯನ್ನು ವಿಚಾರಮಾಡಲು ಹಚ್ಚಿ, ಹೊಸ ಜೀವನದ ಬಗೆಗೆ ಹಂಚಿಕೆಗಳನ್ನು ಮಂಡಿಸಿ, ಪ್ರಸಾರ ಮಾಡಲು ಒಳ್ಳೆ ಅನುವಾಯಿತು. ಹೊಸ ಯುಗದ ಜೀವನಕ್ಕಾಗಿ ಹಂಬಲಿಸುವ ಜನತೆಗೆ ನಿಜವಾಗಿಯೂ ಬೆಂಬಲ ಸಿಕ್ಕಿತು.

ನಾಟಕ ಬರೆವುದು ಬೇಸರ. ಲೇಖನ ಬರೆಯುವ ಅವಸರ. ಬರೆಯುವುದು ಬೇಸರವಾದಾಗ ಮಾತನಾಡುವುದು. ನಿಮಿತ್ತಗಳಿಗೇನು ಕಡಿಮೆ? ಸಂಘ-ಸಂಸ್ಥೆಗಳ ವಾರ್ಷಿಕೋತ್ಸವ; ನಾಡಹಬ್ಬ; ಚರ್ಚೆ–ವಿಚಾರಸಂಕಿರಣ. ಮೊದಲಿನ ಹೆದರಿಕೆ ಇಲ್ಲ. ಆದರೂ ರಂಗಕ್ಕೆ ಬಂದು ನಿಂತ ಕೂಡಲೆ ಮಾತುಗಳೆ ಬಾರವು. ಮೊದಲು ಬಂದು ಸುಮ್ಮನೆ ನಿಲ್ಲುವುದು ಚಟವಾಗಿದ್ದರೂ ಕೇಳುವರಿಗೆ ಮಂತ್ರಹಾಕಿದಂತೆಯಾಗುವುದು. ಅವರ ಉತ್ಕಂಠತೆಯು ಏರುವಾಗ ನಗುಮಾತೊಂದು—ಪ್ರಸಂಗ ಸೂಚ್ಯ–ನಗುಮಾತೊಂದು ಒಗೆದು, ಜನತೆಯನ್ನು ಅಳವಿನಲ್ಲಿ ತೆಗೆದುಕೊಂಡು ಬಿಡುವುದು. ಮುಂದೆ–ಸ್ಥಾನ

ಮಹಾತ್ಮೆಯಿಂದಲೂ ನಗೆಮಾತಿನಿಂದಲೂ ತರ್ಕದ ತೂಕದಿಂದಲೂ ಶಬ್ದಗಳ ಸಡಗರದಿಂದಲೂ ತಮ್ಮ ಮತವನ್ನು ಮಂಡಿಸಿ ಆಡಿದ್ದೆ ಸತ್ಯವೆಂದು ತೋರುವಂತೆ ಮಾಡುವರು.

ಅವರ ನಗುಮಾತು ಕೇಳಿ ಜನತೆ ನಗುವುದಾದರೂ ಅವರಿಗೆ ನಗೆ ಬಾರದು. ಸ್ವತಃ ನಗುವುದು ಕಡಮೆ. ಅವರ ಜೀವನದಲ್ಲಿಯ ಸಂನಿವೇಶಗಳು ನಗು ತರುವಂತಹವು ಇಲ್ಲ. ಆಗಾಗ ಎದ್ದು ಬರುವುವು, ಕೆಲ ಪ್ರಸಂಗಗಳು. ಆದರೆ ಆ ನಗುವಿಗೂ ಹೊಗೆಸುತ್ತು. ತಮ್ಮ ಬಗೆಗೆ ಸುತ್ತಿದ ಹೊಗೆಯನ್ನು ಹಾರಿಸುವುದಕ್ಕೆಯೆ ನಗುವಿನ ಸಾಧನೆ. ನಕ್ಕು ಬಿಡುವುದು ತಮ್ಮ ತೊಂದರೆಗಳನ್ನು ಕಂಡು; ನಕ್ಕಾಗ ತೊಂದರೆಯ ತೊಡಕು ದೂರಾಗುವುದು. ನಗುವಿನ ಕಾರಣ ಆನಂದವಲ್ಲ; ದುಃಖದ ಮರೆಯುವಿಕೆ. ಶ್ರೀರಂಗರು ನಗೆಗಾರರೆಂದು ಜನತೆ ತಿಳಿದಿದೆ; ಆದರೆ ಆ ನಗುವಿನ ಮರೆಗೆ ಮರೆಯಾಗಿದ್ದ ಅವರ ಬಗೆಯ ಬಗ್ಗೆ ಏನು ತಿಳಿದಿದೆ ಜನತೆ? ಆ ನಗುವು ಎಲ್ಲವನ್ನು ಮರೆಯಿಸಿಬಿಟ್ಟಿದೆ.

ಅವರಿಗೇನಾಗಿದೆ ದುಃಖವಾಗಲು? ಎಂದು ಕೇಳುವವರಿದ್ದಾರೆ. ದೂರದಿಂದ ನೋಡುವವರಿಗೆ ಗೊತ್ತಾಗುವುದು ಕಡಿಮೆ. ಸಾಲದ ಶೂಲ ಕಣ್ಣೆದುರು; ಮನೆತನದ ತೊಂದರೆಗಳು ಮನದೆದುರು; ಆಸೆ-ಆಕಾಂಕ್ಷೆಗಳೆಲ್ಲ ಬಯಲಾದುದು. ಮಾರ್ಮಿಕ ಮಾತುಗಾರನೆಂದು, ಸಾಮಾಜಿಕ ನಾಟಕಕಾರನೆಂದು, 'ಭಾಷಾಶಾಸ್ತ್ರ'ದ ಪಂಡಿತನೆಂದು ಮನ್ನಣೆ ಪಡೆದರೂ ಅದೆಲ್ಲ ಮಾತಿನ ಮನ್ನಣೆ. ದುಡ್ಡು ದೂರೆ ಉಳಿಯಿತು. ದುಡ್ಡು ಬಾರದ ಹೊರತು ಸಾಲ ಕರಗುವ ಹಾಗಿಲ್ಲ. ಕಾಲೇಜದ ಸ್ಥಾನದಲ್ಲಿ ಪ್ರಗತಿಯಾಗದುದಕ್ಕೆ ದುಡ್ಡಿನಲ್ಲಿ ಪ್ರಗತಿಯಿಲ್ಲ.

ಸರಕಾರದ ಕಣ್ಣು ನ್ಯಾಯದೇವತೆಯ ಕಣ್ಣಿನಂತೆ ಕುರುಡು- ಅಥವಾ ಒಂದೆ ಕಣ್ಣು. ಜಾಣ-ದಡ್ಡರನ್ನು ಸಮನಾಗಿ ನೋಡುವ ಕಣ್ಣು. ಸ್ಥಾನಕ್ಕೆ ತಕ್ಕ ಮಾನ-ದುಡ್ಡು. ಜಾಣತನದ ಗಣನೆಯಿಲ್ಲ. ಜಾಣತನವು ಕಾಣದ ವಸ್ತುವು—ಸರಕಾರದ ಅಳತೆಗೋಲಿಗೆ ನಿಲುಕದು. ಇದ್ದ ಸ್ಥಾನದಲ್ಲಿ ಬದಲು ಬರಲೆ ಇಲ್ಲ.

ಬದಲು ಬಯಸುವವರಿಗೆ ನಿಂತಲ್ಲಿ ನಿಲ್ಲುವುದು ಸಾವಿನ ಸಮ. ತಮ್ಮ ಜಾಣತನದ ಅರಿವು ಬಂದಾಗೆಲ್ಲ ಸರಕಾರದ ರೀತಿಯ ಬಗೆಗೆ ರೊಚ್ಚು. ಆದರೇನು ? ಪದ್ಧತಿಯಂತೆ—ಕ್ರಮದಂತೆ ನಡೆಯುವುದು ಸರಕಾರವು, ಎಂದು ತಿಳಿದುಬಂದಾಗ ಅಸಾಹಾಯ್ಯತೆಯು ಬರುವುದು. ಒಮ್ಮೊಮ್ಮೆ ವಿಚಿತ್ರ ವಿಚಾರಗಳು ಸುಳಿದು ಸುಳಿದು ಹೋಗುವುವು: 'ನನ್ನ ಜಾಣತನಕ್ಕೆ ತಕ್ಕ ದುಡ್ಡಿನ ಮರ್ಯಾದೆ ಈಗ ಸಿಕ್ಕುವುದೆ ? ಇಲ್ಲ. ಕಡಿಮೆ ದುಡ್ಡು ಸಿಗುವಾಗ ಹೆಚ್ಚೇಕೆ ದುಡಿಯಬೇಕು. ದುಡ್ಡಿಗೆ ತಕ್ಕಂತೆ ದುಡಿತ. ಹೆಡ್ಡರೂ ಕೂಡ ಹೆಚ್ಚಿನ ಹಣಗಳಿಸುತ್ತಿರುವಾಗ ನಾನೇಕೆ ಹುಚ್ಚನಂತೆ ಹೆಚ್ಚು ಹೆಚ್ಚಾಗಿ ದುಡಿಯಬೇಕು ? ಹಂಚು-ಹವಳ ಒಂದೆಯೆ ? ಹಂಚು ಎಂದಾದರೂ ಮಿಂಚೀತೆ ? ಹವಳದ ಬೆಲೆ ಹಂಚಿಗೆ ಬಂದೀತೆ ? ಹಂಚಿಗೆ ಮೆರುಗು ಕೊಟ್ಟರೂ ಅದು ಹಂಚೆ. ಹವಳದ ಹೊಳಪು ಅದಕೆಲ್ಲಿ? ಹವಳದ ಉಪಯೋಗ ಇಲ್ಲಿ ಆಗದೆ ಹೋದರೆ ಬೇರೆಡೆಯಲ್ಲಿ ಹೊಳಪು ತೋರುವೆ ?' ಎಂದು

ತಮ್ಮ ಜಾಣತನಕ್ಕೆ ತಕ್ಕಂತೆ ಪ್ರತಿಫಲ ಸಿಕ್ಕಲಿಲ್ಲವೆಂದು ಮಾಡುವ ಕೆಲಸದಲ್ಲಿ ಅನಾಸ್ಥೆ ಬರತೊಡಗಿತು. ಈ ಅನಾಸ್ಥೆಯ ಬೇನೆಯ ಬಳಲಿಕೆ ಹುಡುಗರಿಗೆ ಒಮ್ಮೊಮ್ಮೆ ತಾಗುತ್ತಿತ್ತು. ಅವರ ಮನದ ಬೇಗೆಯ ಅರಿವು ಹುಡುಗರಿಗೇನು ಗೊತ್ತು ?

ಇದೇ ಸಮಯಕ್ಕೆ ಸರಕಾರದ ಆಡಳಿತದಲ್ಲಿ ಬದಲಾವಣೆಯಾಯಿತು. ೧೯೩೭ರ ಚುನಾವಣೆಯಲ್ಲಿ ಕಾಂಗ್ರೆಸ್ಸು ಹುರಿಯಾಳುಗಳು ಬಹುಮತದಿಂದ ಆರಿಸಿ ಬಂದರು. ಭಾರತದ ಏಳು ಪ್ರಾಂತಗಳಲ್ಲಿ ರಾಜ್ಯಕಾರಭಾರದಲ್ಲಿ ಭಾಗ ಪಡೆದರು. ಜನತೆಯ ದೂರುಗಳನ್ನು ಸಮಾಲೋಚನೆ ಮಾಡುವೆವೆಂದೂ ಅನಿವಾರ್ಯವಾಗಿ ಸಂಭವಿಸಿದ ಲೋಪ ದೋಷಗಳನ್ನು ಸರಿಪಡಿಸುವೆವೆಂದೂ ಪಣತೊಟ್ಟ ಕಾಂಗ್ರೆಸ್ ಸರಕಾರದವರು ಜಾಗಿರದಾರರ ಸ್ಥಾನದ ಬಗೆಗೆ ವಿಚಾರಿಸುವ ಆಸ್ಥೆಯನ್ನು ತೋರಿದರು. ಆದರೆ ಜಾಗತಿಕ ವಾತಾವರಣವು ಜೀವನದ ಧುರಿಯನ್ನೇ ಬದಲು ಮಾಡಿದುದರಿಂದ ಕಾಂಗ್ರೆಸು ಅಧಿಕಾರ ಪದವನ್ನು ಬಿಟ್ಟಿತು. ಜಾಗಿರದಾರರ ಬಗೆಯ ವಿಚಾರಣೆಯು ಅಲ್ಲಿಯೆ ನಿಂತಿತು.

ಹಿಡಿದ ಕಾರ್ಯವು-ಹವಣಿಸಿದ ಹಂಚಿಕೆಗಳು ಹೆಣ್ಣಾಗತೊಡಗಿದುದರ ಸೂಚನೆಯೆಂದೊ ಜಾಗಿರದಾರರಿಗೆ ಎರಡನೆಯ ಹೆಣ್ಣುಮಗುವಾಯಿತು,

೧೯೩೮ರ ಆಗಸ್ಟ ೧೯ಕ್ಕೆ. ತೊಂದರೆಗಳ ನಡುವೆಯೆ ಮತ್ತೊಂದು ಮಗು ವಾದುದೂ ಮಗುವಿನ ಆರೋಗ್ಯಸ್ಥಿತಿಯೂ ತೊಂದರೆ ತರುವಂತಹದಾಗಿದ್ದುದ ರಿಂದಲೂ ಆ ಮಗುವಿಗೆ ಎರಡು ತಿಂಗಳ ತನಕ ಹೆಸರನ್ನೆ ಇಟ್ಟಿರಲಿಲ್ಲ. ಯಾರಾದರೂ ಕೇಳಿದರೆ, 'ಅದು ನಮ್ಮದಾಗುತ್ತದೊ ಇಲ್ಲವೊ ಏನು ಗೊತ್ತು? ಸುಮ್ಮನೆ ಹೆಸರು ಇಟ್ಟು ಹಳಹಳಿಸುವುದೇಕೆ?' ಎಂದು ಬಿಚ್ಚಿ ಹೇಳುತ್ತಿದ್ದರು. ಮಾತು ಕೇಳಿ ಬೆಚ್ಚಿಬಿದ್ದವರನೇಕರು. ದಿನಕಳೆದಂತೆ, ನಗುಮೊಗದಿಂದ ಮಗುವು ಆಡತೊಡಗಿತು. ದಂಪತಿಗಳ ಮನಕ್ಕೆ ಶಾಂತಿಯನ್ನು ತಂದಿತು. ಅದಕ್ಕೆಂದು ಆ ಮಗುವಿಗೆ 'ಶಶಿಕಲಾ' ಎಂದು ಹೆಸರು ಬಂತು.

ಅಂದಿನಿಂದ ಮುಂದು ಜಾಗಿರದಾರರ ಜೀವನದಲ್ಲಿ ಶಾಂತಿಯು ನೆಲೆ ಗೊಳ್ಳತೊಡಗಿತ್ತು. ದಾರಿ ನಿಶ್ಚಯವಾಗಿತ್ತು. ಗಂಡು ಬಯಸಿದಾಗ ಹೆಣ್ಣಾ ದರೆ ಹಳವಂಡವಾಗುವುದು. ಆಸೆಯ ಅಲೆಯ ಮೇಲೆ ಅಲೆದಾಡುವಾಗ ಅದು ಕುಸಿದು ಬಿಟ್ಟರೆ, ನಿರಾಸೆಯ ಮಡಲು ಬರುವುದು; ಮನವು ನೊಂದು ಕೊಳ್ಳುವುದು. ಆದರೆ ಮನಸ್ಸಿನ ಸ್ಥಿತಿಯಲ್ಲಿಯೆ ಬದಲಾವಣೆ ಬರತೊಡ ಗಿತು. 'ಆಗಲಾರದ ವಿಷಯಕ್ಕೆ ಆಸೆ ಮಾಡಿಕೊಂಡು ಕೂಡುವುದಕ್ಕಿಂತ ಮಾಡಬೇಕಾದ ಕೆಲಸಕ್ಕಾಗಿ ಮನಸ್ಸು ಮಾಡುವುದು ಲೇಸು' ಎಂದು ಎನ್ನಿಸ ತೊಡಗಿತು. ಮುಂದಿನ ದಾರಿ ನಿಚ್ಚಳವಾಯಿತು. ಮನದ ಉಮ್ಮಳವಡಗಿ ನೆಮ್ಮದಿಯು ನೆಲೆಯೂರತೊಡಗಿತು.



ಎಂಟನೆಯ ಸ್ಥಿತಿ

# ಶ್ರೀರಂಗ

'ಶ್ರೀರಂಗರು ಯಾರು?' ಗೊತ್ತಿಲ್ಲದವರು ಕಡಮೆ. 'ಹರಿಜನ್ವಾರ' ನಾಟಕದ ಹುಯಿಲೆದ್ದಾಗ ಕನ್ನಡ ನಾಡಿನ ಮೂಲೆಮೂಲೆಗೆ ಮುಟ್ಟಿತು ಆ ಹೆಸರು. ಶ್ರೀರಂಗರು ನಾಟಕಕಾರರು. ಶ್ರೀರಂಗರು....ಒಬ್ಬ ವ್ಯಕ್ತಿಯಲ್ಲ; ಒಂದು ಶಕ್ತಿ. ಶ್ರೀರಂಗಶಕ್ತಿಗೆ ಅವಕಾಶ ಕೊಟ್ಟುದು ಆರ್. ವಿ. ಜಾಗಿರದಾರರೆಂಬ ವ್ಯಕ್ತಿಯು. ಜಾಗಿರದಾರರು ಬೇರೆ; ಶ್ರೀರಂಗರು ಬೇರೆ. 'ಶ್ರೀರಂಗ'ವು ಒಂದು ಅವಸ್ಥೆ, ಜೀವನದಲ್ಲಿಯ ಒಂದು ಸ್ಥಿತಿ; ಈ ಜೀವನದ ಸ್ಥಿತಿಯೊಂದಿಗೆ ಸೇರಿಕೊಂಡಿವೆ ಬೇರೆ ಸ್ಥಿತಿಗಳು. ಎಲ್ಲ ಸ್ಥಿತಿಗತಿಗಳು ಜಾಗಿರದಾರರಲ್ಲಿ ಹುದುಗಿಕೊಂಡಿವೆ. ಜಾಗಿರದಾರರು ಪಾಲಕರು; 'ಶ್ರೀರಂಗ'ವು ಮಗುವೊಂದು. ಅದನ್ನು ಬೆಳೆಸಿದವರು ಜಾಗಿರದಾರರಾಗಿದ್ದರೂ ಬೆಳೆದ ಮೇಲೆ 'ಶ್ರೀರಂಗ'ದ ಮೇಲೆ ಜಾಗಿರದಾರರ ಅಳವು ಇಲ್ಲ. ಜಾಗಿರದಾರರು 'ಶ್ರೀರಂಗ' ಶಕ್ತಿಗೆ ಕ್ಷೇತ್ರ ಒದಗಿಸಿಕೊಟ್ಟರು. ಬೆಳೆದ ಶಕ್ತಿಯು ವ್ಯಕ್ತಿಯ ಪರಿಮಿತಿಯನ್ನು ದಾಟಿ, ಜನಜೀವನಗಳಲ್ಲಿ ಮನೆ ಮಾಡಿಕೊಂಡು ಬಿಡುವುದು. 'ಶ್ರೀರಂಗ' ಶಕ್ತಿಯನ್ನು ಹೊರಹೊಮ್ಮಿಸಲು ಜಾಗಿರದಾರರು ಸಮರ್ಥರಾಗಿದ್ದರೂ ಅದನ್ನು ತಿರುಗಿ ಹಿಡಿದು ತಂದು ಹೊಟ್ಟೆಯಲ್ಲಿ ತುಂಬಿಕೊಂಡೆವೆಂದರೆ ಬಾರದು. ಒಳಗಿರುವ ತನಕ ಅದು

ಜಾಗಿರದಾರರ ಸೊತ್ತು. ಹೊರಬಿದ್ದಮೇಲೆ ಅದು ಸಮಾಜದ ಸೊತ್ತಾಗುವುದು. ಸಮಾಜದವರು ಜಾಗಿರದಾರರ ಕಡೆಗೆ ನೋಡುವ ಕುತೂಹಲವುಳ್ಳವರಿರಲಿಕ್ಕಿಲ್ಲ; ಜಾಗಿರದಾರರು ಒಬ್ಬ ವ್ಯಕ್ತಿ: ಆಸೆ–ಆಕಾಂಕ್ಷೆ, ದ್ವೇಷ–ಅಸೂಯೆ, ಸುಖ–ದುಃಖ, ಮಾನ–ದುರ್ಮಾನಗಳಿಂದ ಕೂಡಿದ ಮಾನವನೊಬ್ಬ. ಅಸಾಧಾರಣವಿರಬಹುದು; ಆದರೂ ಮಾನವ. ಮಾನವೀಯತೆಯ ಕಟ್ಟುಗಳು ಅಲ್ಲಿ ಕಾಣುವುವು.

'ಶ್ರೀರಂಗ'ರು ಹಾಗಲ್ಲ. ವ್ಯಕ್ತಿಯಲ್ಲವೆಂದ ಮೇಲೆ ಮಾನವನ ದೌರ್ಬಲ್ಯಗಳು ಕಾಣವು. ಕಾಲಮಿತಿಯಿಲ್ಲ. ಶಕ್ತಿಯ ಸೌರಭ ಹರಡುತ್ತಲೆ ಇರುವುದು.

ಕಾಲಮಿತಿಯಿಲ್ಲ! ೧೯೩೦ ರ ಮೊದಲು ಶ್ರೀರಂಗರೆಲ್ಲಿ? ಅಹುದು. ಆಗಿನ್ನೂ ಹೊರಬಂದಿರಲಿಲ್ಲ. ಉದಯವಾದುದು 'ವಿರಾಟಪುರುಷ ಮುಕ್ಕಣ್ಣನಲ್ಲಿ. ಮೂರನೆಯ ಕಣ್ಣಿಗೆ ಸಾಕ್ಷಾತ್ಕಾರವಾಯಿತು. ಆ ಮೊದಲು ಶ್ರೀರಂಗಶಕ್ತಿಯ ಕಾರ್ಯ ಸುರುವಾಗಿದ್ದರೂ ಮಾಡುವವನಿಗೆ ಅದರ ಅರಿವು ಇರಲಿಲ್ಲ. 'ಮುಕ್ಕಣ್ಣ'ನಲ್ಲಿ ಅರಿವು ಬಂತು. 'ಮುಕ್ಕಣ್ಣ'ನಿಂದಲೆ ಶ್ರೀರಂಗರ ಅರಿವು ಜನತೆಗೆ ಬಂತು.

'ಶ್ರೀರಂಗ'ವು ಜಾಗಿರದಾರರ ನಾಟ್ಯಶಕ್ತಿಯ ಮೂರ್ತಿ. 'ಮುಕ್ಕಣ್ಣ ವಿರಾಟಪುರುಷ'ವನ್ನು ಬರೆದಾಗ ಈ ಹೊಸ ಶಕ್ತಿಯ ಪರಿಚಯವಾಗಿ ವ್ಯಕ್ತಿಸ್ಥಾನವನ್ನು ಪಡೆಯುವಂತೆಯಾಯಿತು. 'ನಾಟಕ ಬರೆಯುವಾಗ ಜಾಗಿರದಾರ ಅಲ್ಲ ನಾನು' ಎಂದು ಭಾಸವಾಗತೊಡಗಿತು. ಮುಂದೆ ಧಾರವಾಡಕ್ಕೆ ಪ್ರೊಫೆಸರರಾಗಿ ಬಂದಾಗ ಅದು ಹೆಚ್ಚು ಹೆಚ್ಚು ಅನ್ನಿಸತೊಡಗಿತು. ಪ್ರೊಫೆಸರ ಜಾಗಿರದಾರರಿಗೆ ಶ್ರೀರಂಗರಿಗೆ ಏನು ಸಂಬಂಧ? ನಿಜವಾಗಿ ನೋಡಿದರೆ ಏನೂ ಸಂಬಂಧವಿಲ್ಲ. ಪ್ರೊಫೆಸರರ ಕ್ಷೇತ್ರ ಕಾಲೇಜದ ಆವಾರಕ್ಕೆ ಮಿತಿಯಾಯಿತು. ಅಧಿಕಾರವೂ ಅಲ್ಲಿಯೆ. ಆದರೆ ಶ್ರೀರಂಗರ ಕ್ಷೇತ್ರ ಇಡಿ ಸಮಾಜ; ಶ್ರೀರಂಗರ ಅಧಿಕಾರ ಇಡಿ ಸಮಾಜದ ಮೇಲೆ. ಸಮಾಜದ ವರ್ತುಲದಿಂದ ಬೇರೆಯಾಗಿ ನಿಂತು ಮೇಲ್ನೋಟಕನ ಸ್ಥಾನ ಪಡೆದಿದ್ದಾರೆ ಶ್ರೀರಂಗರು. ಸಮಾಜದ ರೀತಿ–ನೀತಿಗಳು ಶ್ರೀರಂಗರನ್ನು ಕಟ್ಟಲಾರವು. ಶ್ರೀರಂಗರ ಶಕ್ತಿಯು ನಿರಂಕುಶವಾದುದು. ಶ್ರೀರಂಗರ

ಹೊಡೆತಕ್ಕೆ-ಹಿಡಿತಕ್ಕೆ ಅನೇಕ ಸಲ ಜಾಗಿರದಾರರೂ ಪ್ರೊಫೆಸರ ಜಾಗಿರ ದಾರರೂ ಸಿಕ್ಕ ಸಂಭವಗಳೂ ಉಂಟು.

ಮಿತಿಯಿಲ್ಲದ ಶಕ್ತಿಯನ್ನು ಹಿಡಿದು ಪರೀಕ್ಷೆಮಾಡುವುದು ಹೇಗೆ? ಈ ಶಕ್ತಿಯು ಒಳಗೆಯೆ ಇದ್ದರೆ ಅದರ ಅರಿವು ಬರುತ್ತಿದ್ದಿಲ್ಲ. ನಾಟಕ ರೂಪ ದಿಂದ ಹೊರಬಂದುದರಿಂದ ಹಿಡಿತದಲ್ಲಿ ಸಿಕ್ಕಿದೆ. 'ಸಿಕ್ಕಿದೆಯೊ ಎಲೆ ಜೀವ, ನಿನ್ನ ಕುಕ್ಕಿಕೊಲ್ಲದೆ ಬಿಡರು' ಎಂದು ಕುಕ್ಕಬೇಕೆನ್ನಿಸುವುದು. ಮರುಕ್ಷಣವೆ, ಅದೊಂದು ಜೀವ, ಅದಕ್ಕೆ ಅಘಾತಗಳಾಗಲಾರವು ಎಂದು ಅರಿವು ಬರುವುದು. ಕುಕ್ಕುವ ಕಾರ್ಯ ಮಾಡಿದರೂ ಮಾಡಿದ ಸಮಾಧಾನ ಬಂದರೂ ಅದು ಕುಕ್ಕಿಸಿಕೊಳ್ಳದೆ ಕಣ್ಣು ಕುಕ್ಕಿಸುವ ಬೆಳಕು ತೋರುವುದು. ಕುಕ್ಕುವ ಬೆಳಕನ್ನು ಕೆಕ್ಕರಿಸಿ ನೋಡುವ ಸಾಮರ್ಥ್ಯ ಇಂದು ಬಂದಿದೆ ಮಾನವನಿಗೆ. ಹೊಸಯುಗದ ವೈಚಿತ್ರ್ಯಗಳನ್ನು ನೋಡಲು—ತಿಳಿಯಲು ಕನ್ನಡಕಗಳು ಬಂದಿವೆ. ಅವು ವಿಮರ್ಶೆಯ ಕನ್ನಡಕಗಳು.

ನಾಟಕಗಳು ಕನ್ನಡಕ್ಕೆ ಹೊಸವು. ನಾಟಕಗಳಷ್ಟೆ ಅಲ್ಲ! ಹಾಗೆ ನೋಡಿದರೆ ಕನ್ನಡಕ್ಕೆ ಎಲ್ಲವೂ ಹೊಸದು. ಅದರಲ್ಲಿಯೂ ಹೊಚ್ಚಹೊಸದು ನಾಟಕ. 'ಕನ್ನಡ ಸಾಹಿತ್ಯದಲ್ಲಿ ಪ್ರಾಚೀನ ಕಾಲದಿಂದ ಈ ಇಪ್ಪತ್ತನೆಯ ಶತಮಾನಕ್ಕೆ ತುಸು ಮುಂಚಿನ ತನಕ ನಾಟಕಗಳೇ ಇದ್ದಿಲ್ಲವೆಂದು ಕನ್ನಡ ಪಂಡಿತರು ಹೇಳುತ್ತಾರೆ' 'ನಾಟಕಗಳು ಕೂಡ ಇದ್ದಿಲ್ಲವೆ?' ಎಂದು ಕೊಂಕು ಮಾತು ಯಾರಾದರೂ ನುಡಿಯಬಹುದು. 'ಅದೊಂದರಿಂದ ಕನ್ನಡದ ಕೊರತೆ ಯೇನು ಕಡಿಮೆಯಾಗಬೇಕಾಗಿದೆ' ಎಂದು ಉದಾಸೀನತೆಯನ್ನು ತಳೆದವರೂ ಇದ್ದಾರೆ. ನಾಟಕಗಳು ಇಲ್ಲದಿದ್ದುದು ಸಾಹಿತ್ಯಕ್ಕೆ ಕೊರತೆ—ಕುಂದು ಎಂಬ ಮಾತೂ ಅಲ್ಲಲ್ಲಿ ಕೇಳಿಬರುವುವು. 'ಸಾಹಿತ್ಯದ ಅಂಗಗಳಲ್ಲಿ ನಾಟಕವು ಒಂದು. ಯಾವುದಾದರೊಂದು ಸಾಹಿತ್ಯದಲ್ಲಿ ಇಂತಹದೊಂದು ಅಂಗವು ಇದ್ದಿಲ್ಲವೆಂದರೆ ಅದು ಸಾಹಿತ್ಯಕ್ಕೆ ಕುಂದು—ಇಲ್ಲವೆ ಕೊರತೆ ಎನಿಸಬೇಕಾಗಿಲ್ಲ. ಆಯಾ ಕಾಲದ ಜೀವನಕ್ಕನುಸರಿಸಿ, ಆಯಾ ಕಾಲದ ಸಾಹಿತ್ಯದ ಶೈಲಿ—ರೀತಿ ಗಳಲ್ಲಿ ಹೊಸ-ಹಳೆ ಮಾದರಿಗಳು ಕಂಡು ಬರುವುವು. ಸಂಸ್ಕೃತ ಸಾಹಿತ್ಯದಲ್ಲಿ ಕ್ರಿಸ್ತಶಕಕ್ಕೆ ಮುಂಚಿತವಾಗಿಯೆ ಶ್ರೇಷ್ಠ ತರಗತಿಯ ನಾಟಕಗಳು ಕಂಡು ಬರುವುವು. ಇಂದು ಅತ್ಯಂತ ವಿಶಾಲ ಮತ್ತು ಪ್ರಗತಿಪರ ಎನಿಸುವ ಆಂಗ್ಲ

ಸಾಹಿತ್ಯದಲ್ಲಿ ಕ್ರಿಸ್ತಶಕದ ೧೩–೧೪ನೆಯ ಶತಮಾನಗಳ ವರೆಗೆ ನಾಟಕಗಳ ಸುಳಿವೆ ಇದ್ದಿಲ್ಲ.' ಕನ್ನಡದಲ್ಲಿ ಮೊನ್ನೆ ಮೊನ್ನಿನ ತನಕ ನಾಟಕಗಳು ಇದ್ದಿಲ್ಲ ವೆಂಬುದು ಕುಂದೆ?

ಇದ್ದಿಲ್ಲವೆಂದರೆ ಇಷ್ಟೇ ಇಲ್ಲ ಎಂಬರ್ಥವೊ? ಅಲ್ಲ. ಬರೆದ ನಾಟಕಗಳು ಇದ್ದಿಲ್ಲ. ನಾಟಕ ಬರೆಯುವ ರೂಢಿ ಇದ್ದಿಲ್ಲ. ನಾಟಕವಾಡುವುದು ಕನ್ನಡಿ ಗರ ಮನೆಮಾತಿನಂತೆ ಇತ್ತು. 'ಪ್ರಯೋಗ ಪ್ರಧಾನಂ ಹಿಂ ನಾಟ್ಯಂ' ಎಂದು ಕಾಳಿದಾಸನು ಹೇಳುವಂತೆ ನಾಟಕದ ನಿಜವಾದ ಅಸ್ತಿತ್ವವು ರಂಗಭೂಮಿ ಯಲ್ಲಿಯೆ ಕಾಣಬೇಕಾದುದು? ಅಲ್ಲದೆ ಈ ಬರೆಯುವ ಚಟ ಮೊನ್ನೆ ಮೊನ್ನಿ ನದು.' ಬರೆಯುವ ಕಲೆ ಬಾರದ ಮೊದಲು ಉಳಿದ ಕಲೆಗಳು ಇದ್ದಿಲ್ಲವೆಂದು ಹೇಳುವುದು ಸಾಹಸದ ಮಾತೆ. ಕಲೆಗಳು ಮಾನವನೊಂದಿಗೆಯೆ ಬಂದುವು. ಹೀಗಿದ್ದರೂ ಬರೆದು ಇಡಬೇಕೆಂದು ಬಂದುದು ನಾಗರಿಕತೆಯು ಬೆಳೆದಾಗಲೆ. ಹಿಂದಿನದು ಇಲ್ಲವೆಂದರೆ ನಮ್ಮ ಪಾಲಿಗೆ ಇಲ್ಲ, ಅಷ್ಟೆ. ಆಗ ಇತ್ತು, ಎಂದು ಗಟ್ಟಿಯಾದ ಊಹೆಯನ್ನು ಮಾಡಬಹುದು.

ಅಯಿದು–ಆರನೆಯ ಶತಕದಿಂದಲೆ ಕನ್ನಡ ಮಾತು ಕೇಳಿ ಬರುವ ವಾದರೂ ಇತ್ತೀಚಿನ ವರೆಗೆ ನಾಟಕಗಳು ಬಾರದುದಕ್ಕೇನು ಕಾರಣ? ಎಂಬ ವಿಚಾರ ಸುಳಿವುದು ಸ್ವಾಭಾವಿಕ. ಕಾರಣಗಳು ಹುಡುಕುವವರ ಮೇಲೆ ಅವ ಲಂಬಿಸಿವೆ. ಎಷ್ಟು ರೀತಿಯಿಂದ ಹುಡುಕುವರೊ ಅಷ್ಟು ಕಾರಣಗಳು ಕಾಣ ಬಹುದು. ಆದರೆ ಸಾಮಾನ್ಯವಾಗಿ ಕಂಡುಬಂದವುಗಳನ್ನು ಕೊಡುವುದುಚಿತ ವೆಂದು ಅನಿಸುವುದು. 'ಕನ್ನಡದ ವಾಙ್ಮಯದ ಪ್ರಸಾರಕ್ಕೆ ಜೈನಧರ್ಮೀ ಯರು ವಿಶೇಷ ಕಾರಣರಾದರೆನ್ನಬಹುದು. ಜೈನರು–ವೈದಿಕ ಸಾಂಪ್ರದಾ ಯದ ವಿರೋಧಿಗಳು. ವೈದಿಕ ರೂಢಿಯಲ್ಲಿಯ ಯಜ್ಞಯಾಗಾದಿಗಳ ವಿಧಾನಪ್ರವಾಹದಲ್ಲಿ ನಾಟ್ಯವು ಜನ್ಮವೆತ್ತಿತು ಎಂದು ವಿಶಾರದರ ತರ್ಕ.' ಆದಕ್ಕೆ ಅದು ಬೇಕಿಲ್ಲ ಎಂದಿರಬಹುದು. ಎಂಬುದೊಂದು ಕಾರಣವಿರ ಬಹುದು.

ಎರಡನೆಯದೊಂದು. ಹಿಂದಿನ ಕಾಲದಲ್ಲಿ 'ಸಂಸ್ಕೃತ ಭಾಷೆಗೆ ಒಂದು ಉಚ್ಚ ಸ್ಥಾನವಿದ್ದುದರಿಂದ ಸಮಾಜದ ಸುಶಿಕ್ಷಿತರು ಸಂಸ್ಕೃತ ನಾಟಕಗಳಿಂದಲೆ ತೃಪ್ತಿಯನ್ನು ಪಡೆದಿರಬಹುದು.

ಅಲ್ಲದೆ, 'ಬರೆದ ನಾಟಕಗಳು ಇರಲಿಕ್ಕಿಲ್ಲ; ಈಗಲೂ ನಮ್ಮ ಹಳ್ಳಿಗರು ಆಡುವ ನಾಟಕಗಳನ್ನು ನಾವು ಬರೆಹದಲ್ಲಿ ಕಾಣುವುದಿಲ್ಲ. ನಾಟಕವು ಆಡಿ ತೋರಿಸಬೇಕಾದುದರಿಂದ ಬರೆಯುವ ಅಗತ್ಯವೆನಿಸಿರಲಿಕ್ಕಿಲ್ಲ; ಇಲ್ಲವೆ ನಾಟಕಗಳನ್ನಾಡುವವರಿಗೆ ಲೇಖನ ವಿದ್ಯೆಯೆ ಗೊತ್ತಿರಲಿಕ್ಕಿಲ್ಲ.

ಇಲ್ಲವೆಂದು ಹುಡುಕಿ ನೋಡುವಾಗ 'ಇದೆ' ಎನ್ನುವುದಕ್ಕಾಗಿಯೆ ಒಂದು ನಾಟಕವು ಸಿಕ್ಕಿತು. ಅದು 'ಮಿತ್ರವಿಂದಾ ಗೋವಿಂದ' ಎಂಬ ನಾಟಕವು. 'ಈ ನಾಟಕವು ಸ್ವತಂತ್ರ ಕೃತಿಯಲ್ಲ. ಸಂಸ್ಕೃತದಲ್ಲಿ ಶ್ರೀ ಹರ್ಷ ದೇವನು ಬರೆದ ರತ್ನಾವಳೀ ನಾಟಕದ ರೂಪಾಂತರವು. ಈ ನಾಟಕವನ್ನು ಬಿಟ್ಟರೆ ೧೯ನೆಯ ಶತಮಾನದ ಕೊನೆಯವರೆಗೆ ಕನ್ನಡದಲ್ಲಿ ನಾಟಕಗಳ ಸುಳಿವೆ ಇಲ್ಲ.

'ಇದ್ದೊಬ್ಬ ಮಗ ಸಿದ್ಧ ಆದ'ನೆಂಬಂತೆ, ಶ್ರಮಪಟ್ಟು ಹುಡುಕಿ ಹೊರಗೆ ಎಳೆತಂದ ನಾಟಕವೂ ರೂಪಾಂತರವೆ ಆಯಿತು. ಪರಂಪರಾಪ್ರಿಯರಾದ ನಮ್ಮವರು ರೂಪಾಂತರವನ್ನೆ ಪ್ರಾರಂಭಿಸಿದರು. ಮೊದಲು ಮೊದಲು ಸಂಸ್ಕೃತ ನಾಟಕಗಳ ರೂಪಾಂತರ—ಭಾಷಾಂತರ. ಆ ಮೇಲೆ ಇಂಗ್ಲಿಶ ನಾಟಕಗಳ ಭಾಷಾಂತರ. ಅನುಕರಣ ಚಟವು ಬಾಲ್ಯಾವಸ್ಥೆಯ ವೈಶಿಷ್ಟ್ಯವು. ಪರಭಾಷೆಯ ಕಾದಂಬರಿಗಳನ್ನು ಭಾಷಾಂತರಿಸಿ—ರೂಪಾಂತರಿಸಿ ಗಳಗ ನಾಥರು, ಬಿ. ವೆಂಕಟಾಚಾರ್ಯರು ಕನ್ನಡಿಗರಲ್ಲಿ ಓದುವ ಚಟ ಹೆಚ್ಚಿಸಿದರು. ಅದೆ ಸ್ಥಾನ, ನಾಟ್ಯರಂಗದಲ್ಲಿ ಭಾಷಾಂತರಕಾರರಾದ, ಕರಿಬಸವ ಶಾಸ್ತ್ರಿ, ತೂರಮರಿ, ಮುಳಬಾಗಲ, ಅವರು ಪಡೆದರು.

'ನಾಟಕಕ್ಕೂ ಸಮಕಾಲೀನ ಜೀವನಕ್ಕೂ ನಿಕಟ ಸಂಬಂಧವಿದೆ'ಎಂದು ಕೊಂಡವರಲ್ಲಿ ಕೆರೂರು ವಾಸುದೇವಾಚಾರ್ಯರು ಮೊದಲಿಗರೆಂದು ಹೇಳ ಬಹುದು. ಇವರ ನಾಟಕಗಳು ಇಂಗ್ಲಿಶ ನಾಟಕಗಳ ಆಧಾರದಿಂದಲೆ ರಚಿತವಾಗಿದ್ದರೂ ಅವನ್ನು ಭಾಷಾಂತರವೆನ್ನುವಂತಿಲ್ಲ. ಮೂಲಕ್ಕೆ ಧಕ್ಕೆ ತಗಲದಂತೆ, ನಮ್ಮ ಸುತ್ತಲಿನ ಪರಿಸ್ಥಿತಿಗೆ ಹೊಂದುವಂತೆ ಮಾರ್ಪಡಿಸಿ ಕೊಂಡಿದ್ದಾರೆ. ಇಂಗ್ಲಿಶಿನ ನಾಟಕಗಳನ್ನು ಓದದವನಿಗೆ ಅವರ ನಾಟಕಗಳು ರೂಪಾಂತರಗಳೆಂದು ಅನಿಸುವುದಿಲ್ಲ.

ಮೊದಲು ಮೊದಲು ಭಾಷಾಂತರಗಳು, ಆ ಮೇಲೆ ರೂಪಾಂತರಗಳು–ಸ್ವತಂತ್ರ ವಾತಾವರಣದೊಂದಿಗೆ. ಮುಂದಿನ ಮೆಟ್ಟಲು ಸ್ವತಂತ್ರ ನಾಟಕಗಳು–ಸಾಮಾಜಿಕ ನಾಟಕಗಳು. ಬೆಳವಣಿಗೆ ಸಹಜವಾಗಿದೆ. ಸಮಾಜ ಸಹಜ ನಾಟಕಗಳನ್ನು ಬರೆದು ರೂಢಿಯಲ್ಲಿ ತಂದ ಮಾನ, ಶ್ರೀ ಹುಯಿಲಗೋಳ ನಾರಾಯಣರಾಯರದು; ಶ್ರೀ ಟಿ. ಪಿ. ಕೈಲಾಸಂ ಅವರದು. ನಾರಾಯಣರಾಯರ ' ಸ್ತ್ರೀಧರ್ಮ ರಹಸ್ಯ ', ಕೈಲಾಸಂರ ' ಟೊಳ್ಳುಗಟ್ಟಿ ' ' ಹೋಂ ರೂಲು ' ಇವು ಸಮಾಜದ ಕನ್ನಡಿಗಳು.

ಆ ನಂತರ ನಾಟಕಗಳ ಹೊನಲು ಹರಿಯತೊಡಗಿತು. ಅನೇಕ ಪೌರಾಣಿಕ, ಅರ್ಧ ಪೌರಾಣಿಕ, ಸಾಮಾಜಿಕ ನಾಟಕಗಳು ಬರಲುತೊಡಗಿದುವು. ನಾಟಕಕಾರರ ಮಾಲಿಕೆಯಲ್ಲಿ ಶ್ರೀನಿವಾಸ, ಸಿ. ಕೆ., ಅ. ನ. ಕೃ., ಕಾರಂತ, ಬೇಂದ್ರೆ, ಶ್ರೀರಂಗ ಇವರೆಲ್ಲರೂ ಸೇರಿದರೂ ಶ್ರೀರಂಗರ ಸ್ಥಾನ ವಿಶಿಷ್ಟವಾಗಿದೆ.

ಶ್ರೀರಂಗರ ನಾಟಕಗಳು ಪ್ರಗತಿಪರ ವಿಚಾರ ಸಮಸ್ಯೆಗಳನ್ನೊಳಗೊಂಡ ಕ್ರಾಂತಿಕಾರಕ ನಾಟಕಗಳು; ಸಮಾಜದ ಸಮಸ್ಯೆಗಳನ್ನು ಬಿಡಿಸುವ ಹವ್ಯಾಸದ ನಾಟಕಗಳು. ಸಮಾಜವೆ ಅವರ ಕ್ಷೇತ್ರ. ಸಾಮಾಜಿಕರೆ ಪಾತ್ರಗಳು. ಸಾಮಾಜಿಕರಿಗೆ ಬರುವ ಸಮಸ್ಯೆಗಳೆ ನಾಟಕಗಳಲ್ಲಿಯ ತೊಡಕು. ಹೊಸ ಯುಗದ ನಿರ್ಮಾಣದ–ಮುನ್ನೋಟದ ದೃಷ್ಟಿ ಶ್ರೀರಂಗರದು.

ಸಮಾಜದಲ್ಲಿಯ ತೊಡಕುಗಳು ನಾಟಕದ ವಸ್ತು. ಇಡಿ ಸಮಾಜವು ನಾಟಕದ ಹಿನ್ನೆಲೆ. ವಿಶಿಷ್ಟ ತೊಡಕುಗಳು ಎದ್ದು ಕಾಣುವಂತೆ ಸಮಾಜದ ಚಿತ್ರ. ತೊಡಕುಗಳಿಗೆ ಅವಕಾಶ ಕೊಟ್ಟುದಕ್ಕೆ ಸಮಾಜವೆ ವಸ್ತುವೆಂದು ಕಂಡರೂ ಒಂದೊಂದು ನಾಟಕದಲ್ಲಿ ಒಂದು–ಎರಡು ತೊಡಕುಗಳನ್ನು ಎತ್ತಿ ತೋರಿಸಿದ್ದರಿಂದ ಸಮಾಜದ ಆ ಅವಸ್ಥೆಯ ಬಗೆಗೆ ಮನವು ಹರಿಯುವುದು. 'ಉದರವೈರಾಗ್ಯ'ದಲ್ಲಿ ಬಂದುದು ಪರದೇಶ ಪ್ರಯಾಣ ಮಾಡಿ ಬಂದ ಯುವಕರ ಪರಿಸ್ಥಿತಿ ಏನು ಸಮಾಜದಲ್ಲಿ, ಎಂಬುದು. ಆ ನಾಟಕದಲ್ಲಿ ಬರುವ ಉಳಿದ ವಿಚಾರಗಳು ಈ ಪ್ರಶ್ನೆಗೆ ಪೋಷಕವಾಗಿಯೆ ಬರುತ್ತವೆ. ಅದರಂತೆ ' ಪ್ರಪಂಚ ಪಾಣೀಪತ್ತಿ ' ನಲ್ಲಿ ಒಟ್ಟು ಕುಟುಂಬದ ಅನವಸ್ಥೆ; ಪಾಲುಮಾಡಿಕೊಳ್ಳುವ ರೀತಿ; ಪಾಲು–ಮಾಡಿಕೊಳ್ಳುವುದರಿಂದ ಎಲ್ಲರಿಗೂ–ದೇಶಕ್ಕೂ ಬರುವ

ದುಸ್ಥಿತಿ. ಈ ವಿಷಯಗಳು ಕೆರಳಿಸುವುವು. 'ಹೊಲೆಯ ಹೊರಗಿಹನೆ ಊರೊಳಗಿಲ್ಲವೆ?' ಎಂದು ಪ್ರಶ್ನೆಕೇಳಿ ಊರೊಳಗಿನ ಹೊಲೆಯರನ್ನು ಬೈಲಿಗೆಳೆಯುವುದು ಕಾಣುವುದು 'ಹರಿಜನ್ವಾರ' ದಲ್ಲಿ. ಬಡತನ-ನಿರುದ್ಯೋಗಗಳು ದೇಶವನ್ನು ಆವರಿಸಿ, ಮುಂದೇನು? ಎಂಬ ಪ್ರಶ್ನಾರ್ಥಕದ ಎದುರು ಆಲಸ್ಯದಿಂದ ಕುಳಿತು ಜೀವನವನ್ನೆ ಹಾಳುಮಾಡಿಕೊಳ್ಳುತ್ತಿರುವರಲ್ಲ—ಹೆಚ್ಚಿನ ಬವಣೆಯನ್ನು ತರುತ್ತಿರುವರಲ್ಲ; ಇದಕ್ಕೆ ಉಪಾಯವೇನು' ಎಂಬ ಭಾಗವನ್ನು ಒತ್ತಿ ಒತ್ತಿ ಹೇಳಿ-ತೋರಿಸಿದುದು 'ದರಿದ್ರನಾರಾಯಣ' ದಲ್ಲಿ. 'ಸಂಧ್ಯಾಕಾಲ' ವು ಬ್ರಾಹ್ಮಣ್ಯದ ಕರ್ಮಗಳ ಚಿಂತಾಜನಕ ಸ್ಥಿತಿಯ ಅರಿವನ್ನು ತಂದುಕೊಡುವುದು. ಹೊಸ ತೊಗಲು ಬರತೊಡಗಿದೆ ಸಮಾಜಕ್ಕೆ. ಅದು ಕಾರಣ ಹಳೆಯದು ಸ್ಥಾನಭ್ರಷ್ಟವಾಗಲೇಬೇಕಲ್ಲ.

ನಾಟಕಗಳು ಬೇರೆಯಾಗಿದ್ದರೂ ಸಮಾಜ ಒಂದೆ. ಅವುಗಳಲ್ಲಿ ತೊಡಕುಗಳ ಪ್ರಕಾರ ನಾಟಕಗಳುದಯಿಸಿವೆ. ಒಂದೆ ಸಮಾಜದ ತೊಡಕುಗಳನ್ನು ನೋಡುವುದರಿಂದ ನಾಟಕಗಳಲ್ಲಿ ಬರುವ ಪಾತ್ರಗಳು ಸಮಾಜದ ಪ್ರತಿನಿಧಿಗಳು. ಒಂದೆ ಸಮಾಜ-ಅದೆ ಜನತೆ-ಒಂದೆ ಬಗೆಯ ಪಾತ್ರಗಳು. ಆಗಾಗ ಅವರ ಮುಂದೆ ಎದ್ದೇಳುವ ಸಮಸ್ಯೆಗಳು. ಆದಕ್ಕಾಗಿ ಪ್ರತಿಯೊಂದು ನಾಟಕದಲ್ಲಿ ಅದೇ ಮಾದರಿಯ ಪಾತ್ರಗಳು. ಒಬ್ಬ ತರುಣ-ಮುನ್ನೋಟದವ. ತಾನು ಮುಂದೆ ಮುಂದೆ ಸಾಗುವುದಲ್ಲದೆ ಉಳಿದವರನ್ನು ಮುಂದಿನ ಮಾರ್ಗದಲ್ಲಿ ಕರೆದೊಯ್ಯುವವ-ನಾಯಕ. ಮುಂದೋಡುವವರನ್ನು ಹಿಂದೆ ಜಗ್ಗಲು ಹಿಂದಿನ ವೇದಶಾಸ್ತ್ರಗಳ ವಿಚಿತ್ರ ಆಧಾರಗಳಿಂದ ಕಾಲ್ತೊಡಕು ಹಾಕುವ ಆಚಾರ್ಯ—ಮುಂದೋಡುವವನಿಗೆ ವಿರೋಧಕ; ಒಳ್ಳೆತನದ ಸೋಗಿನಿಂದಲೆ ತಮ್ಮದನ್ನು ಸಾಧಿಸಬೇಕೆನ್ನುವ-ಆದರೂ ವಿರೋಧಿ-ಪ್ರತಿನಾಯಕ. ಈ ಎರಡು ದಿಕ್ಕಿನ ಸೆಳೆದಾಟದಲ್ಲಿ ನಡುಮಧ್ಯೆ ನೋಡುವ ರಾಯರು. ಆಚಾರ್ಯರ ಮಾತು ಅಲ್ಲಗಳೆಯುವ ಬುದ್ಧಿಯಿಲ್ಲ. ತರುಣರ ಬುದ್ಧಿವಾದವು ಮನವರಿಕೆಯಾದರೂ ಒಪ್ಪಿಕೊಂಡು ಆಚಾರದಲ್ಲಿ ತರಲು ಮನೋಧೈರ್ಯವಿಲ್ಲ. ಆಚಾರ್ಯರಂತೆ ಹಿನ್ನೋಟವೆ ಅಲ್ಲ. ತರುಣರಂತೆ ಮುನ್ನೋಟವೆ ಅಲ್ಲ. ಇಬ್ಬರಿಗೂ ಬೇಕಾಗಿ-ತಮಗೆ ತಾವೆ ಬೇಡವಾಗುವ ಪರಿಸ್ಥಿತಿಯಲ್ಲಿದ್ದ ರಾಯರು. ಸಮಾಜದಲ್ಲಿ ಸಮನ್ವಯ ಮಾಡುವ ಪ್ರಯತ್ನದವರು,

ರಾಯರು. ಆಚಾರ್ಯರು ಬಂದ ಮೇಲೆ 'ಬಾಯರು' ಒಬ್ಬರು ಬೇಕೇಬೇಕು. ಇಲ್ಲದಿರೆ ಆಚಾರ್ಯರ ಆಟ ಸಾಗುವುದೆಂತು ? ರಾಯರು ಅರ್ಧಮನಸ್ಸಿನವರು; ತರುಣರು ಮುನ್ನೋಟದವರು. ತಮ್ಮ ಹಿಂದಿನ ಸಂಪ್ರದಾಯವನ್ನು ಕಾಯಿದುಕೊಂಡು ಹೋಗಲು ಅನುಕೂಲ ವಸ್ತುವೆಂದರೆ ಕಲಿಯದೆ ಇದ್ದ, ಕುರುಡು ನಂಬುಗೆಯ ನಮ್ಮ ಸಮಾಜದ ಹೆಣ್ಣುಮಗಳು. ಒಳಿತು–ಕೆಡಕುಗಳ ವಿಚಾರವಿಲ್ಲದೆ ಹಿರಿಯರು ಹಾಕಿಕೊಟ್ಟ ದಾರಿಯನ್ನು ಮರೆಮಾಚದೆ ತುಳಿಯಬೇಕೆಂದು ಮಾಡಿರುವ ಹೆಣ್ಣುಮಗಳು. ಇಂತಹರು ಇನ್ನೂ ಬದುಕಿರುವುದರಿಂದ ಸಂಪ್ರದಾಯಗಳ ಮೇಲೆ ಹೊಟ್ಟೆಯನ್ನು ಹೊರಕೊಳ್ಳುವ ಪ್ರಯತ್ನ ಆಚಾರ್ಯರದು. ದೇಶದ ದೃಷ್ಟಿಯಿಂದ ಉದ್ಯೋಗ ಮಾಡಲಾರದೆ ಉಂಡು ಸುಖದಿಂದಿರುವ ಶಿಖಾಮಣಿ.

ಹೆಣ್ಣು ಪಾತ್ರಗಳು ಯಾವಾಗಲೂ ಹಿನ್ನೆಲೆಯಲ್ಲಿಯೆ; ಸಮಾಜದಲ್ಲಿಯ ಅವರ ಸ್ಥಾನವನ್ನು ಸೂಚಿಸುತ್ತವೆ.

ಹೆಣ್ಣುಮಗಳಂತೆ ಬುದ್ಧಿಯಿಲ್ಲದವನಾದರೂ ಸಮಾಜದ ಸೂತ್ರವನ್ನು ಹಿಡಿದವರು ಸುಖದಿಂದಿರಲಿ; ಅವರಿಂದ ಇಡಿ ಸಮಾಜಕ್ಕೆ ಸುಖವಾದರೆ ಅದರ ಪಾಲು ನಮಗೂ ದೊರಕೀತು, ಎಂಬ ಆಸೆ—ಅಂತಃಕರಣದಿಂದ ದುಡಿಯುವ ಒಕ್ಕಲಿಗ–ಆಳು.

ಇಂತಹ ಸಮಾಜಕ್ಕೆ ಬುದ್ಧಿ ಕಲಿಸಲು ಬುದ್ಧಿಗೇಡಿತನದಿಂದ ಗುದ್ದಾಡುವ ಶಾಲಾಶಿಕ್ಷಕರು ಆಗಾಗ ಇಣಿಕಿ ಹೋಗುವರು.

ಈ ಎಲ್ಲ ಪಾತ್ರಗಳು ಸಾಮಾನ್ಯವಾಗಿ ಪ್ರತಿನಾಟಕಗಳಲ್ಲಿ ಬರುವವರೆ. ಪ್ರಸಂಗ— ಸ್ಥಾನಕ್ಕೆ ತಕ್ಕಂತೆ, ವಾತಾವರಣದ ಪೋಷಣೆಗೆ ಬೇರೆ ಪಾತ್ರಗಳು ಬರುವುದಲ್ಲದೆ ಇದ್ದವುಗಳಲ್ಲಿಯೂ ಬದಲು ಕಾಣಬಹುದು. ಏನು ಬದಲು ಕಂಡರೂ ನಾಟಕದಲ್ಲಿ ಬರುವವರು ಆ ವಿಶಿಷ್ಟ ತೊಡಕಿನಲ್ಲಿ ಸಿಕ್ಕವರು—ಅವರೆಲ್ಲರು ಸಮಾಜದಲ್ಲಿದ್ದವರು—ಸಮಾಜದ ತೊಡಕಿನಿಂದ ಅನುಭವಿಸುವ ಪ್ರತಿನಿಧಿಗಳು.

ಪಾತ್ರ ನಿರ್ಮಾಣಮಾಡಿ ಪೋಷಿಸುವಾಗ ನಾಟಕಕಾರನಿಗೆ ಎರಡು ಸ್ಥಾನಗಳನ್ನು ಅಕ್ರಮಿಸಬೇಕಾಗುತ್ತದೆ. ತಾನೆ ಪ್ರತಿಯೊಂದು ಪಾತ್ರ ಆಗಿ

ಅವರ ಸ್ಥಾನದಲ್ಲಿ ನಿಂತು, ಅವರ ಪರಿಸ್ಥಿತಿಯನ್ನು ಅರಿತು, ಅವರ ಬಗೆಯನ್ನು ತಿಳಿದು, ಅವರ ಸಹಜ ಪ್ರವೃತ್ತಿಯಂತೆ ಮಾತನಾಡಿಸಬೇಕಾಗುವುದು. ಎರಡನೆಯದು, ಹಕ್ಕಿಯಂತೆ ಸಮಾಜದ ಮೇಲೆ ನಿಂತು ಇಡಿ ಸಮಾಜದ ವ್ಯಾಪಾರಗಳನ್ನು ಇಡಿಯಾಗಿಯೆ ನೋಡಬೇಕಾಗುವುದು. ಇದಲ್ಲದೆ, ಮೂರನೆಯ ಕರ್ತವ್ಯವೊಂದು ಬಂದು ನಿಲ್ಲುವುದು. ಎಲ್ಲವನ್ನೂ—ಒಳಗೆ ನಿಂತು ಬಿಡಿಬಿಡಿಯಾಗಿ—ಹೊರಗೆ ನಿಂತು ಇಡಿಯಾಗಿ ನೋಡಿದ ಮೇಲೆ ಯೋಗಿಯಂತೆ ಮುಂದಿನ ಮಾರ್ಗವನ್ನು ಸೂಚಿಸುವುದು. ಹಿಂದು ನಡೆದು ಬಂದ ರೀತಿಯನ್ನು ಅನುಲಕ್ಷಿಸಿ, ಇಂದಿನ ಸ್ಥಿತಿಯನ್ನು ಪರಿಶೀಲಿಸಿ, ಮುಂದಿನ ಗತಿಯನ್ನು ತೋರಿಸಬೇಕಾಗುವುದು.

ಮೂರನೆಯ ಕರ್ತವ್ಯ ತುಸು ತೊಡಕಿನದು. ದಾರಿತೋರಬೇಕಾದರೆ ಆ ದಾರಿಯನ್ನು ಕಂಡಿರಬೇಕಾಗುವುದು. ಹೊಸದಾರಿಯಾದುದರಿಂದ ಅಲ್ಲಿ ಎದುರು ಬರುವ ಎಡರು-ತೊಡರುಗಳ ಅರಿವು ಇರಬೇಕಾಗುವುದು. ಅವುಗಳ ನಿವಾರಣೋಪಾಯಗಳ ತಿಳಿವಳಿಕೆ ಬೇಕು. ಆಗ ಮಾತ್ರ ಹೊಸ ಸೃಷ್ಟಿಯನ್ನು ಹುಟ್ಟಿಸಲು ಹೊಸದಾರಿಯನ್ನು ಸೂಚಿಸಬಹುದು. ಇಲ್ಲವಾದರೆ ಜನತೆಗೆ ಹೆದರಿಕೆ. ಇಂದು ಇದ್ದುದು ಕೇಡೆಂದು ಮುಂದಿನ ದಾರಿ ತೋರದೆ ಬಿಟ್ಟರೆ ಅವರು ಮುಂದುಗಾಣದವರಾಗುವರು. ಇಂದಿನದು ಗೊತ್ತಿದ್ದ ಕೇಡು; ಮುಂದಿನದು ಎಂತಹದು ಬರಬಹುದೊ ಎಂದು ಬೆದರಿಕೆ; ಇದ್ದಲ್ಲಿಯೆ ಇದ್ದು ಬಿಡುವುದು ಒಳ್ಳೆಯದು ಎಂದು ನೆಮ್ಮದಿಯಾಗಿರುವರು.

ಮುಂದಿನ ದಾರಿ ಕಾಣಬೇಕಾದರೆ ಸುಮ್ಮನೆ ಕುಳಿತರೆ ಸಿಗುವುದಿಲ್ಲ; ಹುಡುಕಬೇಕು. ಮುಂದಿನ ದಾರಿ ಹುಡುಕುವ ಹವ್ಯಾಸವು ಬರಬೇಕಾದರೆ ಇಂದಿನದು ಕೆಡಕು ಎಂಬುದು ಮನವರಿಕೆಯಾಗಬೇಕಾಗುವುದು. ಅಲ್ಲದೆ ಮಾನವ ಸಮಾಜದ ಗತಿ, ಮುಂದೆ ಮುಂದೆ ಎಂದು ತಿಳಿಯಬೇಕಾಗುವುದು. ನಾಟಕಕಾರನು ಒಮ್ಮೊಮ್ಮೆ ಎರಡು ಕಾರ್ಯಗಳನ್ನು ಮಾಡುವನು. ಹಿಂದಿನಿಂದ ಇಂದಿನವರೆಗೆ ಬಂದ ರೀತಿಯನ್ನೂ ಇಂದಿನ ದುಃಸ್ಥಿತಿಯನ್ನೂ ಮನವರಿಕೆ ಮಾಡಿಕೊಟ್ಟು ಕೈಬಿಡುವನು. ಇದ್ದ ಸ್ಥಿತಿಯು ಕೆಡಕು ತರುವಂತಹದು ಎಂದು ತಿಳಿದ ಮೇಲೆ ಬೇರೆ ದಾರಿಯನ್ನು ತಾನಾಗಿಯೆ ಹುಡುಕುವ ಹವ್ಯಾಸಕ್ಕೆ ಬೀಳುವುದು ಸಹಜ. ಇದು ಮಾನವನ ಮನಸ್ಸಿನ ಸ್ವಭಾವ; ಇದ್ದುದರ ಕೇಡು

ತಿಳಿಯದೆ ಒಳಿತನ್ನು ಹುಡುಕಲು ಉತ್ಸಾಹ–ವಿಚಾರ ಬಾರದು ಎಂದು ನಾಟಕ ಕಾರನು, ಸಮಾಜವನ್ನು ವಿಶ್ಲೇಷಣ ಮಾಡಿ, ಇಡಿಯಾಗಿಯೂ— ಬಿಡಿ ಬಿಡಿ ಯಾಗಿಯೂ ತೋರುವನು. ಸಾಧ್ಯವಾದರೆ ಮುಂದಿನ ದಾರಿ ತೋರುವನು.

ಶ್ರೀರಂಗರ ನಾಟ್ಯಸೃಷ್ಟಿಯಲ್ಲಿ ತುಂಬಿಕೊಂಡು ಎದ್ದು ಕಾಣುವುದು 'ಆಚಾರ್ಯ'ರ ಪಾತ್ರ. ಸ್ವತಃ ಜಾಗಿರದಾರರು ಆಚಾರ್ಯರ ಮನೆತನದಲ್ಲಿ ಹುಟ್ಟಿ ಬೆಳೆದುದರಿಂದ ಅವರ ಒಳಹಿಡಿತಗಳು-ಮನದ ವಿಚಾರಗಳು ಸ್ಫುಟವಾಗಿ ಅವರಿಗೆ ತಿಳಿದಿವೆ. ಯಾವ ನಾಟಕದಲ್ಲಿಯೂ ಆಚಾರ್ಯನು ಕಾಣುವನು; ಮನದಲ್ಲಿ ಮೂಡುವನು. ಆಚಾರ್ಯರಲ್ಲಿರಬೇಕಾದ ಗುಣಗಳು ಸಹಜ ವಾಗಿಯೆ ಬಂದಿವೆ. ಇದ್ದ ಸಮಾಜದ ಪ್ರತಿನಿಧಿ – ಆಚಾರ್ಯರು.

ಕಲಿತ ತರುಣನು – ಜಾಗಿರದಾರರೇ ಆಗಿರುವುದರಿಂದ ತಮ್ಮ ವಿಚಾರ ಗಳನ್ನು ತರುಣರ ಬಾಯಿಂದ ಆಡಿಸಿರುವರು ತರುಣರ ಪ್ರತಿನಿಧಿಯೆಂದು. 'ಉದರ ವೈರಾಗ್ಯ'ದಲ್ಲಿಯ 'ಮಾಧವ' ವಿರಾಟಪುರುಷದಲ್ಲಿಯ 'ಕವಿ-ಚಂದ್ರಕಾಂತ', 'ಅಧಿಕಮಾಸ'ದ 'ರಮೇಶ', 'ವೈದ್ಯರಾಜ'ದ 'ವಿದ್ಯಾಧರ', 'ದರಿದ್ರನಾರಾಯಣ'ದ 'ಕೊಂಕಣ್ಣ', 'ಸಂಸಾರಿಗ ಕಂಸ'ದ 'ರಾಮಣ್ಣ', 'ಹರಿ ಜನ್ವಾರ'ದ 'ವಸಂತ', 'ಪ್ರಪಂಚ ಪಾಣೀಪತ್ತಿ'ನಲ್ಲಿ 'ಶ್ರೀಪತಿ', 'ನರಕದಲ್ಲಿ ನರಸಿಂಹ'ದ 'ನರಸಿಂಹ', ಸಂಧ್ಯಾಕಾಲದಲ್ಲಿಯ 'ಪುಟ್ಟು—ವೆಂಕಪ್ಪ', ಈ ಪಾತ್ರಗಳಲ್ಲಿ ಜಾಗಿರದಾರರ ಚಿತ್ರವನ್ನೂ ವಿಚಿತ್ರ ವಿಚಾರಗಳನ್ನೂ ಕಾಣ ಬಹುದು.

ಆ ಪಾತ್ರಗಳು ಆಡುವ ಮಾತು, ಮಾಡುವ ಕೃತಿ ಎಲ್ಲವನ್ನು ಜಾಗಿರ ದಾರರು ಮಾಡಿರಬೇಕೆಂದಲ್ಲ. ಅಲ್ಲಿರುವುದು ವಿಚಾರಗಳಿಗೆ ಮಾತ್ರ ಅವಕಾಶ; ಆಚಾರಕ್ಕೆ ಅಲ್ಲಿ ಎಡೆಯಿಲ್ಲ; ಸಮಯವಿಲ್ಲ. ಈ ಎಲ್ಲ ನಾಟಕಗಳಲ್ಲಿ ತರುಣನ ಪಾತ್ರದ ವಿಚಾರಗಳು ಜಾಗಿರದಾರರ ಮನಸ್ಸಿನ–ವಿಚಾರದ ಬೆಳ ವಣಿಗೆಯನ್ನು ಸೂಚಿಸುವುವು.

ಪಾತ್ರ ಪೋಷಣೆಯ ದೃಷ್ಟಿಯಿಂದ ನೋಡಿದಾಗ ತರುಣನ ಪಾತ್ರವು 'ದರಿದ್ರನಾರಾಯಣ' ದ ಕೊಂಕಣ್ಣನು, 'ನರಕದಲ್ಲಿಯ ನರಸಿಂಹ' ನು ವಿಶೇಷವಾಗಿ 'ಪ್ರಪಂಚ ಪಾಣೀಪತ್ತಿ' ನ ಸಮತಾವಾದದ ಶ್ರೀಪತಿಯು ಚೆನ್ನಾಗಿ ಚಿತ್ರಿತರಾಗಿದ್ದಾರೆ. 'ಕೊಂಕಣ್ಣ'–'ನರಸಿಂಹ' ರ ದೃಷ್ಟಿಯು

ಸ್ಥಾನಿಕ–ಪ್ರಾಸಂಗಿಕವಾದುವು. 'ಶ್ರೀಪತಿ'ಯು ಹಾಗಲ್ಲ. ಶ್ರೀಪತಿಯು ಪೂರ್ಣ ತುಂಬಿಕೊಂಡಿದ್ದಾನೆ. ಪ್ರತಿಯೊಬ್ಬರ ಮನದಲ್ಲಿ ಮೂಡುವಂತಹನಿದ್ದಾನೆ. 'ರಮೇಶ' 'ಚಂದ್ರಕಾಂತ' 'ರಾಮಣ್ಣ' 'ವಿದ್ಯಾಧರ'ರು ಅವಸ್ಥಾ ವಿಶೇಷ ದಿಂದ ಆವರಿಸಲ್ಪಟ್ಟಿದ್ದಾರೆ. ಹರಿಜನ್ವಾರದ 'ವಸಂತ'ನು ಪೂರ್ಣಪುಷ್ಟಿಯ ಆವಾರದಲ್ಲಿದ್ದಾನೆ.

ಶ್ರೀರಂಗ ಸೃಷ್ಟಿಯಲ್ಲಿ ಎದ್ದುಕಾಣುವವನು ಆಚಾರ್ಯನು. ಹರಿ ಜನ್ವಾರದ ' ತಾತ್ಯಾಚಾರಿ ' ನರಕದಲ್ಲಿ ನರಸಿಂಹದ 'ಮದ್ದಾಚಾರಿ' ಇಬ್ಬರು ತಮ್ಮ ಪ್ರಭಾವ ಬೀರುತ್ತಿದ್ದಾರೆ. ಆದರೆ ' ಪಾಣೀಪತ್ತಿ ' ನ ನಾರಾಯಣಾ ಚಾರಿಯು ಮಾತ್ರ ಕಳಸವಿಟ್ಟವನೆ. ಮೊದಲು ಅವನ ವೃತ್ತಿಗೆ ನಗು ಬರುವುದು. ಬರುಬರುತ್ತ ಅಸಹ್ಯವೆನಿಸಿ, ಕೊನೆಗೆ ಅವನ ಮಾತು–ಅವನ ಬರವು ತಿರಸ್ಕಾರವನ್ನುಂಟುಮಾಡುವುವು. ಆಚಾರ್ಯನ ಪಾತ್ರವು ಪ್ರತಿ ನಾಟಕದಲ್ಲಿ ಪ್ರತಿನಾಯಕನದಾಗಿದ್ದರೂ ಪಾಣೀಪತ್ತಿನಲ್ಲಿ ಅವನ ಕೈಚಳಕ ಕಾಣುವುದು.

ರಾಯರ ಪಾತ್ರಗಳು ಎಲ್ಲೆಡೆಯಲ್ಲಿಯೂ ಒಳ್ಳೆಯವಾಗಿವೆ. ಅದಕ್ಕೆ ಕಾರಣ ಅವರೆದುರು ಬರುವ ಪ್ರಶ್ನೆ. ಹಿಂದಿನದಕ್ಕೆ ಅಂಟಿಕೊಳ್ಳದ ಮುಂದಿನ ದಕ್ಕೆ ಕೈ ಚಾಚದ ಮಧ್ಯಮ ಸ್ಥಾನವವರದು. ಹರಿಜನ್ವಾರದ ದೊಡ್ಡರಾಯರು– ನಿಜವಾಗಿಯೂ ದೊಡ್ಡ–ರಾಯರು. ದೊಡ್ಡಿಸ್ತನಕ್ಕಾಗಿ ಹೆಣಗುವರು. ' ವೈದ್ಯರಾಜ ' ದ ಹರಿಹರರಾಯನ ಪಡಿನೆಳಲು ಅಲ್ಲಿದೆ. ' ಪ್ರಪಂಚ ಪಾಣೀ ಪತ್ತಿ 'ನ ಪ್ರಲ್ಹಾದರಾಯನು ನಮ್ಮ ಹೃದಯವನ್ನು ಸ್ವಾಧೀನಮಾಡಿಕೊಳ್ಳುವ. ಅವನ ಬಗೆಗೆ ನಿಜವಾಗಿಯೂ ಕನಿಕರವುಂಟಾಗುವುದು. ಮುಪ್ಪಿನ ಕಾಲ ದಲ್ಲಿ ಮಕ್ಕಳು ಪಾಲು ಮಾಡಿಕೊಂಡು ಮನೆತನವನ್ನು ಮೂರಾಬಟ್ಟೆ ಮಾಡುವುದು ಅವನಿಗೆ ಸಹನವಾಗದು. ಆದರೇನು ? ವಯಸ್ಸಾಗಿದೆ. 'ನಾ ಮುದುಕಾದೆ, ನನ್ನ ಯಾರು ಕೇಳುವದಿಲ್ಲ ! ' ಎಂದೆನ್ನುವಾಗ ಅಸಾ ಹಾಯ್ಯ ಮುದುಕರ ಬಗೆಗೆ ಕನಿಕರ ಉಂಟಾಗುವದು. ಅಷ್ಟೇ ಆವೇಗದಿಂದ ಅಂತಃಕರಣಕ್ಕೆ ಅಂಟಿಕೊಳ್ಳುವನು, ' ಪಾಣಿಪತ್ತಿನಲ್ಲಿ'ಯ ಬಸನಿಂಗ: ಹುಂಬನೆಂದರೂ ಬುದ್ಧಿಯಿಲ್ಲದವನೆಂದರೂ ಒಳ್ಳೆ ಅಂತಃಕರುಣಿ; ತಿಳಿವಳಿಕೆ ಯುಳ್ಳವ. ಶ್ರೀಪತಿಯ ಹೆಂಡತಿಯಾದ ' ರಮಾ 'ನ ಪ್ರೇತಯಾತ್ರೆಯ

ವಿಷಯವನ್ನು ಮುದುಕ ಪ್ರಲ್ಹಾದರಾಯನ ಎದುರು ಹೇಳುವಾಗ ಅವನ ಮಾತು– ಅವನರೀತಿ, ಕಲ್ಲೆದೆಯವನ ಮನವನ್ನು ಕರಗಿಸುವಂತಹದು. ಶ್ರೀಪತಿಯನ್ನು ನೆನೆದಾಗೆಲ್ಲ ಅವನ ಸಾರಥಿ ಬಸನಿಂಗನು ಬಯಲಿಗೆ ಬರುವನು. ಅವನ ಚಿತ್ರ ಸ್ಫುಟವಾಗಿದೆ. ಬೇರೆ ಯಾವ ನಾಟಕದಲ್ಲಿಯ ಆಳಿನ ಪಾತ್ರವೂ ಅವನಷ್ಟು ನಮ್ಮನ್ನು ಎಳೆಯುವುದಿಲ್ಲ.

ವೇಣಕ್ಕನ ಪಾತ್ರವೊಂದು ಬಿಟ್ಟರೆ ಅಂತಃಕರಣವನ್ನು ಅಲುಗಿಸುವ ಬೇರೆ ಸ್ತ್ರೀ ಪಾತ್ರವೆ ಇಲ್ಲ. ಅದೇಕೊ ? ಸ್ತ್ರೀ ಸಮಾಜವು ಹಿಂದುಳಿದುದು ಎಂದು ಅವರನ್ನು ಮುಂದೆ ತರಲಿಲ್ಲವೇನೊ ? ಅಲ್ಲಲ್ಲಿ ಬರುವ ಇಂದಿರೆ, ಶಾರದೆ, ರಮಾ, ಮನೋರಮಾ, ಲಲಿತಾ ಮುಂತಾದವರು ಆನುಷಂಗಿಕ ಪಾತ್ರಗಳೆನಿಸಿ ಕೊಳ್ಳುವುದರಿಂದ ಅವುಗಳಿಗೆ ಪ್ರಾಧಾನ್ಯವಿಲ್ಲ. ಅದುಕಾರಣ ಅವು ಎದ್ದು ಕಾಣುವದಿಲ್ಲ. ಪಾಣೀಪತ್ತಿನ 'ನೀಲವ್ವ'ನ ಪಾತ್ರ ಅಂತಃಕರಣಕ್ಕೆ ತಾಗುವು ದಾದರೂ ಸ್ತ್ರೀಪಾತ್ರಗಳಲ್ಲಿ ಹರಿಜನ್ಸ್ದ್ವಾರದ ವೇಣಕ್ಕನದೆ ಮೇಲುಗೈ.

ಶಾಲಾ ಶಿಕ್ಷಕನು ಶ್ರೀರಂಗರ ಸೃಷ್ಟಿಯಲ್ಲಿ ಎರಡು ಸಲ ಬಂದರೂ ಮನಹಿಡಿಯುವಷ್ಟು ಮುದ್ದಾಗಿಲ್ಲ ಚಿತ್ರ. ವ್ಯವಹಾರ ಜ್ಞಾನಶೂನ್ಯತೆಯೊಂದು ಒಡೆದು ಕಾಣುವುದು.

ಏನೆ ವೈಚಿತ್ರಗಳನ್ನು ತಳೆದರೂ ಎಷ್ಟೆ ಕಡಿಮೆಕಾಲ ರಂಗಭೂಮಿಯ ಮೇಲೆ ಬಂದರೂ ಪಾತ್ರಗಳು ಸಹಜ ವಾತಾವರಣದಲ್ಲಿದ್ದಂತೆ ಅನಿಸುವುದು; ಜಗ್ಗಿ ತಂದುವು ಎಂದೆನಿಸದು.

ಶ್ರೀರಂಗರ ಹಾಸ್ಯದ ರೀತಿ ವಿಶಿಷ್ಟವಾದುದು. ವ್ಯಕ್ತಿ ಸಹಜವಾದ ಮಾತುಗಳನ್ನು ವಿಶಿಷ್ಟ ಸಂನಿವೇಶದಲ್ಲಿ ಆಡಿಸುವುದರಿಂದ ನಗು ಬರುವುದು. ಅಲ್ಲದೆ ಆಯಾವ್ಯಕ್ತಿಗಳ ವಿಚಿತ್ರ ಮಾತಿನ ಚಟಗಳಿಂದ ನಗು ಬರುವುದು. 'ಹೌಂತಿರಲ್ಲ್ಯೊ ? ' 'ಶ್ರೀಹರಿ ಇಚ್ಛಾ' 'ನನಗ ಕೇಳಿದರ' 'ಇದ್ದ ಮಾತು ಹೇಳಬೇಕೆಂದರೆ' ಮುಂತಾದ ಪದಗಳು ಮಾತಿಗೊಮ್ಮೆ ಬಂದರೆ ಆಡುವ ವ್ಯಕ್ತಿಯ ಸ್ವಭಾವ ಚಿತ್ರವನ್ನು ಕೊಡುವುದಲ್ಲದೆ ನಗಲು ಸಾಧನವಾಗುವುದು. ಶಬ್ದಗಳ ಮೇಲೆ ಲಾಗ ಹೊಡೆಯುವುದು ಒಮ್ಮೊಮ್ಮೆ ಹಾಸ್ಯವನ್ನು ಉಂಟು ಮಾಡುವುದು. ಆಗಾಗ ಬರುವ ಅಣಕುಮಾತು, ಕೆಣಕುವ ಮಾತು, ಕೊಂಕುಮಾತುಗಳು ಹಾಸ್ಯಲಹರಿಯಲ್ಲಿ ಒಯ್ಯುವುವು.

ಒಬ್ಬರನ್ನು ಕರೆದಾಗ ಮತ್ತೊಬ್ಬರು ಬರುವುದು. 'ಗಂಡೊ ಹೆಣ್ಣೊ'ದಲ್ಲಿ ಕೃಷ್ಣೂ ಎಂದು ಕೃಷ್ಣಾಚಾರಿಯನ್ನು ಕೂಗಿದಾಗ, ಕೃಷ್ಣಕ್ಕ ಬಂದು 'ಯಾಕೆ' ಎಂದು ಕೇಳಲು 'ನೀ ಕೃಷ್ಣಾಚಾರಿಯೇನು' ಎಂಬುದು ನಗು ಎಬ್ಬಿಸುವುದು. ಅದರಂತೆ ಸಂಧ್ಯಾಕಾಲದಲ್ಲಿ ಮುದುಕ ಧರೆಪ್ಪನನ್ನು ಕೂಗಿದಾಗ ಮನೆಯವಳು ಬರುವಳು: 'ಕರೆದಿರೇನು ? ' 'ಧರೆಪ್ಪ ಅಂದರ ತಾ ಬರತಾಳ ! ನೀ ಧರೆಪ್ಪ ಏನು ? '. ಇಂತಹ ಮೋಜಿನ ಪ್ರಸಂಗಗಳು ಅನೇಕ.

ಶ್ರೀರಂಗರ ಭಾಷೆಯು ಬಿಗುವಿನದು. ಭಾಷಾಶಾಸ್ತ್ರದ ಅಭ್ಯಾಸದ ಮೂಲಕ ಶಬ್ದಗಳು ಕೈಯೊಳಗೆ ಸಿಕ್ಕಿವೆ. ಶಬ್ದಗಳ ಸೂಕ್ಷ್ಮ ಅರ್ಥವನ್ನು ಬಲ್ಲರು. ಶಬ್ದಕ್ಕೆ ಅರ್ಥವು ಸ್ಪಷ್ಟವಿರುತ್ತದೆ. ಆದರೂ ಅವರ ಮಾತು ಹೊರಳಿಸುವ ರೀತಿ ಒಮ್ಮೊಮ್ಮೆ ಬೇಸರ ಬರುವುದು. ಅವರಿಗೆಯೆ ಅನೇಕ ಸಲ ಬಂದುದುಂಟು. ಬರೆಯುವಾಗ ಗಂಭೀರ ವಿಚಾರವು ಹೆಚ್ಚು ಕಾಲ ಸುಳಿದರೆ ಅಲ್ಲಿ ವಿರಾಮಕ್ಕಾಗಿ–ವಿಹಾರಕ್ಕಾಗಿ ಸ್ವಲ್ಪ ಡೊಂಬತನ ಮಾಡಿ, ಮೋಜು ಮಾಡಿ ನಕ್ಕು ಹೊಸ ಹುರುಪಿನಿಂದ ಮುಂದೆ ಸಾಗುವುದು ಅವರ ರೂಢಿ. ಮಾತು ಹೊರಳಿಸುವ ರೀತಿ ಅವರ ವೈಶಿಷ್ಟ್ಯವಾಗಿದೆ. ಆಡಿದವರ ಮಾತಿನಿಂದಲೆ ಮರುಮಾತನಾಡುವುದು ಮೊದಲು ಮೋಜೆನಿಸಿದರೂ ಮುಂದೆ ಬೇಸರ ಬರುವುದು.

ನಿಜವಾಗಿ ನೋಡಿದರೆ ಶ್ರೀರಂಗರಿಗೆ ಕನ್ನಡ ಭಾಷೆಯ ಪರಿಚಯ ಅಷ್ಟಕ್ಕಷ್ಟೆ. ಸಂಸ್ಕೃತವೆ ಅವರ ಕ್ಷೇತ್ರ. ಸಂಸ್ಕೃತದಲ್ಲಿಯ ಕಾವ್ಯ–ನಾಟಕಗಳನ್ನು ಓದಿರುವುದರಿಂದ ಮಹಾಭಾರತವನ್ನು ಅನೇಕ ಸಲ ಮುಗಿಸಿರುವುದರಿಂದ ಹಿಂದಿನ ಕಾಲದ ಕತೆ–ದಂತಕತೆಗಳು ಅವರ ಸ್ವಾಧೀನ. ವಿಚಾರದ ವೇಗದಂತೆ ಸಾಗುವುದು ಭಾಷೆ. ನಡುನಡುವೆ ಸಂದರ್ಭೋಚಿತ ಕತೆಗಳು–ಸಂನಿವೇಶಗಳು. ಸಂಸ್ಕೃತ ಶಬ್ದಗಳನ್ನು ಕನ್ನಡದಲ್ಲಿ ಸೇರಿಸಿ, ಕನ್ನಡ ರೂಪು ಕೊಟ್ಟು ಭಾಷೆಯನ್ನು ತಮ್ಮ ವಿಚಾರಕ್ಕೆ ಸರಿಹೋಗುವಂತೆ ಮಾರ್ಪಡಿಸಿಕೊಳ್ಳುತ್ತಾರೆ. ' ತನ್ನ ತರ್ಕದಿ ತೂಗಿ ಬುದ್ಧಿಯೊರೆಗಲ್ಲಿನಲಿ ಚೆನ್ನಾಗಿ ತಿಕ್ಕಿ ಹೊಸ ಹೊಸ ಭಾವ–ಬಣ್ಣಗಳ ಹೊರಡಿಸಿ ' ಅನೇಕ ಹೊಸ ಶಬ್ದಗಳನ್ನು ಕನ್ನಡಕ್ಕೆ ಒದವಿಸಿದ್ದಾರೆ. ಬರುವ ಶಬ್ದಗಳು ಸರಸವಾಗಿ ಬಂದಿವೆ. ಭಾಷಾಶಾಸ್ತ್ರದ ಅಭ್ಯಾಸದಿಂದ ಒಳ್ಳೆಯ ಉಪಯೋಗವಾಗಿದೆ.

ಮಾತಿನ ರೀತಿಯಂತೆ ರಂಗನಿರ್ದೇಶಗಳಾದರೂ ಶ್ರೀರಂಗವಿಶಿಷ್ಟ ವಾಗಿವೆ. ನಾಟಕದ ಪಡದೆಯ ಹಿಂದಿನ ಮಾತುಗಳಾದರೂ ಅವು ಮನೋ ರಂಜಕವಾಗಿವೆ. ರಂಗ ನಿರ್ದೇಶವು ಸ್ಪಷ್ಟವಾಗುವುದಕ್ಕೆ ಸುತ್ತಲಿನ ವಾತಾ ವರಣದ ಕಲ್ಪನೆ ಬರುವುದಕ್ಕೆ ಉದ್ದುದ್ದವಾಗಿ ಹೇಳುವುದು ರೂಢಿ; ನಾಟಕದ ಮುನ್ನುಡಿಗಳು, ಉದ್ದುದ್ದ ರಂಗನಿರ್ದೇಶಗಳು, ಶ್ರೀ ಬರ್ನಾರ್ಡ ಶಾ ಅವರ ನೆನಪು ಕೊಡುವುವು.

ಹಿಡಿತದಲ್ಲಿ ಕೌಶಲ್ಯ ಹೆಚ್ಚು. ಯಾವ ನಾಟಕವೇ ಆಗಲಿ ಹಿಡಿತದಲ್ಲಿ ಸಡಿಲು ಇಲ್ಲ. ರಂಗಭೂಮಿಯ ದೃಷ್ಟಿಯಿಂದಲೆ ನಾಟಕಗಳನ್ನು ಬರೆದುದ ರಿಂದ—ಆಡುವ ನಾಟಕಗಳಿರುವುದರಿಂದ, ಆಡಿತೋರಿಸುವಾಗ ಎಡರು ಬರ ದಂತೆ, ಬೆಳವಣಿಗೆ ಸಹಜವೆಂಬಂತೆ, ಸಂನಿವೇಶಗಳ ರಚನೆಯಿರುವುದು. 'ನರಕದಲ್ಲಿ ನರಸಿಂಹ' ದಲ್ಲಿ ಕನಸಿನ ಸನ್ನಿವೇಶವು ಮಾನವನ ಮನಸ್ಸಿನ ಹೊಯ್ದಾಟದ ಬಗೆಯನ್ನು ತಿಳಿಸುವುದು. ಹೊಸ ವಿಚಾರಕ್ಕೆ ಹೊಸ ರೀತಿ.

ಶ್ರೀರಂಗ—ಭೂಮಿಯಲ್ಲಿ ಈಗ ಕಾಣುವುವು ಹದಿನಾಲ್ಕು ದೊಡ್ಡ ಕನ್ನಡ ನಾಟಕಗಳು; ಇಪ್ಪತ್ತೈದರಷ್ಟು ಏಕಾಂಕಗಳು—ದೃಶ್ಯಗಳು. ಕೆಲ ವೊಂದು ಇಂಗ್ಲಿಶ ನಾಟಕ—ಏಕಾಂಕಗಳು. ಇವುಗಳಲ್ಲಿ ಪರಿಣಾಮ—ಹಿಡಿತದ ದೃಷ್ಟಿಯಿಂದ ಎಲ್ಲವೂ ರಂಗಭೂಮಿಯಲ್ಲಿ ಯಶಸ್ವಿಯಾಗಿವೆ. ಆದರೆ ನಾಟ್ಯ ಸೃಷ್ಟಿಯ ಬೆಳವಣಿಗೆಯನ್ನು ನೋಡಲು ಮೂರು ನಾಟಕಗಳು ಶ್ರೀರಂಗರ ಪ್ರತಿನಿಧಿಯೆಂದು ಬಂದು ನಿಲ್ಲುವುವು. 'ಹರಿಜನ್ವಾರ' 'ಪ್ರಪಂಚ ಪಾಣೀಪತ್ತು' ಮತ್ತು 'ಸಂಧ್ಯಾಕಾಲ'. ಮೂರೂ ನಾಟಕಗಳು ತಮ್ಮ ವೈಶಿಷ್ಟ್ಯವನ್ನು ತೋರುವುವು. 'ಹರಿಜನ್ವಾರ'ವು ಪ್ರಚಾರಾತ್ಮಕವಾಗಿದೆಯೆಂದು ಅನಿಸುವುದು. ಸಂಧ್ಯಾಕಾಲವು ಮೋಜಿನ ರೀತಿಯಲ್ಲಿರುವುದು. ಮೋಜು ಮುಖ್ಯವಾದು ದನ್ನು 'ಗಂಡೊ ಹೆಣ್ಣೊ' ದಲ್ಲಿಯೂ ಕಾಣಬಹುದು. ಆದರೆ 'ಪ್ರಪಂಚ ಪಾಣೀಪತ್ತು' ನಾಟಕವು ಎಲ್ಲ ದೃಷ್ಟಿಯಿಂದಲೂ ಉಚ್ಚವಾಗಿದೆ. ಈ ಮೂರು ನಾಟಕಗಳ ಬಗೆಗೆ ಮಹನೀಯರಲ್ಲಿ ವಿಚಾರ ವ್ಯತ್ಯಾಸವಿದೆ. 'ಶ್ರೀರಂಗರ ನಾಟ್ಯಕಲೆಯ ಪರಿಮಿತಿಯನ್ನು 'ಹರಿಜನ್ವಾರ'ದಲ್ಲಿ ಕಾಣಬಹುದು' ಎಂದೆ ನ್ನುವವರು ಇದ್ದಾರೆ. 'ಸಂಧ್ಯಾಕಾಲ'ವು ಅವರ ಸೃಷ್ಟಿಯಲ್ಲಿ ಕಳಸವಿಟ್ಟುದು' ಎಂದೆನ್ನುವವರು ಕೆಲರು. ಘಟಕದ ದೃಷ್ಟಿಯಿಂದ 'ಸಂಧ್ಯಾಕಾಲ' ದಲ್ಲಿ

ಓರಣವು ಹೆಚ್ಚಾಗಿ ಕಂಡುಬಂದರೂ ಅದು ಮೋಜಿಗೆ ಮನಸೆಳೆಯುವುದು. ಮೂರನೆಯ ಅಂಕಿನಲ್ಲಿಯು ಶಾಲಾ ಶಿಕ್ಷಕನ ಪಾತ್ರವು ಕೇವಲ ಮೋಜಿಗಾಗಿಯೆ ಬಂದಿದೆಯೇನೊ ಅನ್ನಿಸುವಂತಿದೆ. ಮೊದಲೆರಡು ಅಂಕುಗಳು ಪರಿಪೂರ್ಣವಾಗಿವೆ.

'ಪ್ರಪಂಚ ಪಾಣೀಪತ್ತು' ನಾಟಕದ ಮಾತು ಹಾಗಲ್ಲ; ಎಲ್ಲರಿಗೂ ಸಾಮಾನ್ಯವಾದ ವಿಷಯವಾದುದರಿಂದ ಮನಹಿಡಿವುದು. ಅದು ಮೊದಲಿನಿಂದ ಕೊನೆಯವರೆಗೆ ಕ್ಷಣಕ್ಷಣಕ್ಕೂ ಮನಸ್ಸಿನ ಮೇಲೆ ಆಘಾತ ಮಾಡುವುದು. ಮನಸ್ಸು ಒಂದೆ ಬಗೆಯಾಗಿ ಹರಿವುದು. ಗುರಿಯು ನಿಚ್ಚಳ. ಪ್ರಾರಂಭ, ಬೆಳವಣಿಗೆ, ಪರಿಣಾಮ, ಮಾತಿನ ರೀತಿ, ಬರುವ ಪಾತ್ರಗಳು–ಸಂನಿವೇಶಗಳು, ಒಟ್ಟಿನಲ್ಲಿ ಇಡಿ ನಾಟಕವು ಇಡಿಯಾದ ಪರಿಣಾಮವನ್ನು ಮಾಡುವುದು. ಹೆಚ್ಚು ಮನಹಿಡಿವುದು. ಹರಿಜನ್ವಾರದ ಹೊಡೆತ, ಸಂಧ್ಯಾಕಾಲದ ಮೋಜು ಇಲ್ಲಿ ಇರಲಿಕ್ಕಿಲ್ಲ. ಅದರೆ 'ಪ್ರಪಂಚ ಪಾಣೀಪತ್ತಿ'ನಲ್ಲಿಯಂತೆ ಯಾವ ನಾಟಕದಲ್ಲಿಯೂ ಅಖಂಡವಾದ ಆಕರ್ಷಣೆ ಇಲ್ಲ.

ಅದಕ್ಕೆ ಕಾರಣವೂ ಇದೆ. ಶ್ರೀರಂಗರು ಬರೆಯುವ ರೀತಿ ಒಂದು ಆದಕ್ಕೆ ಕಾರಣ. ನಾಟಕಗಳನ್ನು ಬರೆಯಲು ತೊಡಗುವರು, ಮನದಲ್ಲಿಯ ವಿಚಾರದ ಆವೇಗಕ್ಕೆ. ಎರಡು ಅಂಕುಗಳನ್ನು ಬರೆದ ಮೇಲೆ ಮುಗಿಸಲು ಬೇಸರ. ಅದು ಅಲ್ಲಿಯೆ ನಿಂತು ಬಿಡುವುದು. ಮುಂದೆ ನಾಟಕವು ರಂಗಭೂಮಿಗೆ ಬರುವುದೆಂದು ತಾಲೀಮು ಸುರುವಾದೊಡನೆ–ಎರಡಂಕುಗಳ ರಂಗತಾಲೀಮು ಮುಗಿದ ಮೇಲೆ–ಮೂರನೆಯ ಅಂಕು ಬರೆಯಲು ತೊಡಗುವರು. ಮೊದಲು ಬರೆಯಲು ಬೇಸರ; ಆ ಮೇಲೆ ಅವಸರ. ಹೀಗಾಗಿ ಒಮ್ಮೊಮ್ಮೆ ಮೊದಲೆರಡು ಅಂಕುಗಳಿಗೂ ಮೂರನೆಯ ಅಂಕಗಳಿಗೂ ಸ್ವಲ್ಪ ವ್ಯತ್ಯಾಸ ಕಾಣಬರುವುದು.

ಶ್ರೀರಂಗರ ನಾಟಕಗಳು ತಿಳಿಯುವದಿಲ್ಲವೆಂದು ಗುಲ್ಲು ಕೇಳಿ ಬರುತ್ತದೆ ಅದಕ್ಕೆ ಕಾರಣವೆಂದರೆ ಜನತೆ. ಜನರು ನಾಟಕ ನೋಡಲು ಅನೇಕ ಕಲ್ಪನೆಗಳನ್ನು ಮೂಡಿಸಿಕೊಂಡು ಹೋಗುವರು. ಮೊದಲಿನಿಂದಲೂ ಸಂಗೀತ ನಾಟಕಗಳನ್ನು ನೋಡಿದವರಿಗೆ, ಶ್ರೀರಂಗರ ಸರಸ ಗದ್ಯವು ಸೊಗಸೆನಿಸುವುದಿಲ್ಲ. ಅವರು ಅಸಂತುಷ್ಟರಾಗುವರು. ಎರಡನೆಯ ಬಗೆಯವರು ಕೇವಲ

ಮನರಂಜನೆಗೆಂದು ಮುಗಿಬೀಳುವವರು, ಅದರಲ್ಲಿಯ ಹಾಸ್ಯಕ್ಕಾಗಿ ಹಾತೊರೆ ಯುವರು; ಸಮಸ್ಯೆಗಳ ಗೊಡವೆ ಅವರಿಗಿಲ್ಲ. ಅದು ಅವರ ತಲೆಗೆ ತಾಗದು. ಸಾಮಾನ್ಯ ಜನತೆಗೆ ತೊಡಕುಗಳ-ಅವುಗಳ ಹಿಂದು-ಮುಂದುಗಳ ಕಲ್ಪನೆ ಇರುವುದು ಕಡಿಮೆ. ತಿಳಿದವರಿಗೆಂದು ಕೆಲವೊಂದು ವಿಷಯುಗಳನ್ನು ಸೂಚ್ಯ ವಾಗಿ ಹೇಳುವುದರಿಂದ ಸಾಮಾನ್ಯರಿಗೆ ಅವು ತಿಳಿಯದೆ ಹೋಗುವುವು. ಶ್ರೀರಂಗರ ನಾಟಕಗಳು ತಿಳಿವುದಕ್ಕೆ ಮೊದಲು ಮನಸ್ಸಿನ ತಯಾರಿ ಬೇಕು. ವಿಚಾರಿ ಜನರಿಗೆ ತಾಗುವುದು ಬೇಗ. ಸುಮ್ಮನೆ ಕುಳಿತು ನಕ್ಕು ಹೋಗ ಬೇಕೆನ್ನುವವರಿಗೆ ನಗು ಸಿಗುವುದು; ತಿಳಿವುದಿಲ್ಲ. ತಿಳಿದುಕೊಳ್ಳಬೇಕೆಂಬ ವಿಚಾರವೆ ಅವರಲ್ಲಿ ಇರುವುದಿಲ್ಲ.

'ಕನ್ನಡದಲ್ಲಿ ನಾಟಕಗಳಿಲ್ಲವೆ ?' ಎಂದು ಮೂಗುಮುರಿಯುವ ಜನತೆಗೆ ಮದ್ದು ಕೊಟ್ಟಂತೆಯಾಯಿತು. ಶ್ರೀರಂಗರೊಬ್ಬರೆ ಹದಿನಾಲ್ಕು ದೊಡ್ಡನಾಟಕ ಗಳನ್ನು ಅನೇಕ ಏಕಾಂಕಗಳನ್ನು ಬರೆದಿದ್ದಾರೆ. ಇತ್ತೀಚೆಗೆ ಏಕಾಂಕಗಳ ಸುರಿ ಮಳೆಯಾಗತೊಡಗಿದೆ. ಶಾಲೆ- ಕಾಲೇಜುಗಳ ವಾರ್ಷಿಕೋತ್ಸವ- ಸಮಾರಂಭ ಗಳಿಗೆ ವೆಚ್ಚವಿಲ್ಲದೆ, ವೇಷ-ಭೂಷಣದ ಆಡಂಬರವಿಲ್ಲದೆ ಆಡಿ ತೋರಿಸಲು ಅನೇಕ ನಾಟಕಗಳನ್ನು ಒದವಿಸಿದ್ದಾರೆ ಶ್ರೀರಂಗರು. ಬೇರೆಯವರೂ ಸೇರಿಸಿದ್ದಾರೆ, ಅದೇ ಮಾದರಿಯ ನಾಟಕಗಳನ್ನು. ಆದರೂ ಮೊನ್ನೆ ಮೊನ್ನೆ- ೧೯೫೫ರ ಫೆಬ್ರುವರಿಯಲ್ಲಿ-ಅಚ್ಚಾದ ತಮ್ಮ ನಾಟಕಕ್ಕೆ ಮುನ್ನುಡಿ ಬರೆವಾಗ ಮಹನೀಯರೊಬ್ಬರು ಹೀಗೆ ಬರೆದಿದ್ದಾರೆ: 'ಕನಿಷ್ಟ ಪಕ್ಷಕ್ಕೆ ಇದರಷ್ಟು ಗುಣ ಗಳಿದ್ದ ನಾಟಕಗಳಾದರೂ ಈಗ ಕನ್ನಡದಲ್ಲಿ ಎಷ್ಟು ? ವಾಚಕರು ಬೆರಳೆಣಿಸ ಬೇಕು. ಅದೂ ಹೋಗಲಿ ! ಶಾಲೆ-ಕಾಲೇಜುಗಳ ವಾರ್ಷಿಕೋತ್ಸವಗಳಲ್ಲಿ ತೊಂದರೆಯಿಲ್ಲದೆ ಅಭಿನಯಿಸಲು ಯೋಗ್ಯವಾದ ಕೃತಿಗಳು ಕನ್ನಡದಲ್ಲಿ ಎಷ್ಟು? ಈಗ ಮಾತ್ರ ವಾಚಕರು ಬರಿಯ ಹೆಬ್ಬೊಟ್ಟುಗಳನ್ನು ಎಣಿಸಬೇಕು ?' ಎಣಿಸಿರಿ ! ಮನುಷ್ಯನಿಗೆ ಹೆಬ್ಬೊಟ್ಟುಗಳು ಎಷ್ಟು ? ಕೈಯವೆರಡು ! ಕಾಲಿನ ಹೆಬ್ಬೆರಳು ಗಣನೆಗೆ ತಂದರೆ ಇನ್ನೆರಡು. ಒಟ್ಟು ನಾಲ್ಕು. ಕನ್ನಡದಲ್ಲಿ ಒಳ್ಳೆಯ ನಾಟಕಗಳು ನಾಲ್ಕೆ ? ಶಾಲೆಕಾಲೇಜುಗಳಲ್ಲಿ ತೊಂದರೆ ಇಲ್ಲದೆ ಅಭಿನಯಿಸಲು ಯೋಗ್ಯವಾದವುಗಳು ನಾಲ್ಕೆ ? ಬರೆದವರ ಕೃತಿಯೊಂದಕ್ಕೆ ಆ ನಾಲ್ಕರಲ್ಲಿ ಸ್ಥಾನ ಸಿಕ್ಕರೆ, ಉಳಿದ ಮೂರು ಇಡಿ ಕನ್ನಡ ನಾಡಿನ ನಾಟಕ

ಕಾರರಲ್ಲಿ ಹಂಚಿದರೆ, ಒಬ್ಬೊಬ್ಬರಿಗೆ ಇಡಿಯಾಗಿ ಒಂದು ಕೂಡ ಬರಲಾರದು. ತಮ್ಮ ಕೃತಿ ಚೆನ್ನಾದುದು ಎಂದು ಹೇಳಿಕೊಳ್ಳುವಾಗ ಹೆರವರ ಬರೆವಣಿಗೆಯ ಬಗೆಗೆ ಎಚ್ಚರವಿರಬೇಕು. ಅಥವಾ ಹಾಗೆ ಬರೆಯುವುದು ಕನ್ನಡ ಸಾಹಿತ್ಯದ ಇತಿಹಾಸದ ಅಜ್ಞಾನವನ್ನು ತೋರುತ್ತಿರಬೇಕು. ಇಲ್ಲವೆ ಕಣ್ಣು ಮುಚ್ಚಿ ಕೊಂಡು ಕೂಡುವ ಚಟವಿದ್ದಿರಬೇಕು. 'ಒಳ್ಳೆಯ ನಾಟಕಗಳು ಕನ್ನಡ ದಲ್ಲಿ ಇಲ್ಲ'ವೆಂದು ಅವರೊಬ್ಬರು ಹೇಳಿದರೆ ಜನತೆ ನಂಬುವುದೆ? ಅಚ್ಚಾದ ಹೊತ್ತಿಗೆಗಳೆ ಅನೇಕವಾಗಿವೆ. ಅವು ತೊಂದರೆ ಇಲ್ಲದೆ ಅಭಿನಯಿಸಲು ಯೋಗ್ಯವಾಗಿವೆಯೊ ಇಲ್ಲವೊ ಎಂಬುದನ್ನು ಅಭಿನಯಿಸಿದವರನ್ನು ಕೇಳಿ ತಿಳಿಯಬೇಕು. ನಿಜವಾಗಿಯೂ ತಿಳಿಯುವಂತಹ ವಿಷಯ.

ಈ ಹತ್ತು ವರುಷಗಳಲ್ಲಿ ಇಷ್ಟು ನಾಟಕಗಳನ್ನು ಬರೆದು ಏಕಾಂಕ-ದೃಶ್ಯಗಳನ್ನು ಒದವಿಸಿ ಶ್ರೀರಂಗರಿಗೆ ಬೇಸರ ಬಂದಿರಬಹುದು. ಅಥವಾ ಮಾಡಿದ್ದನ್ನೆ ಏನು ಮಾಡುವುದು, ಹೊಸ ಕ್ಷೇತ್ರದಲ್ಲಿ ಕಾಲಿಡುವ, ಎಂದು ನಾಟ್ಯಸನ್ಯಾಸದ ವಿಚಾರ ಬರತೊಡಗಿರಬಹುದು. ಅದರ ಸೂಚನೆಯೊ ಎಂಬಂತೆ 'ಸಂಧ್ಯಾಕಾಲ'. ಆನಂತರ ದೊಡ್ಡ ನಾಟಕ ಬರೆದುದಿಲ್ಲ. ಒಂದೆರಡು ಏಕಾಂಕಗಳಾದರೂ ಅವು ಕೇವಲ ಪ್ರಾಸಂಗಿಕವಾಗಿವೆ. ಅವರ ಜೀವನದಲ್ಲಿಯೆ ಬದಲು ಬರತೊಡಗಿದೆ. ಶ್ರೀರಂಗ ಎಂಬ ನಾಟ್ಯಶಕ್ತಿಯ ಉಪಯೋಗ ಗಂಭೀರ ಸಾಹಿತ್ಯದ ಕಡೆಗೆ ಒಲವು ತೋರಲಿದೆ. ಇದು ಅವರ ಸಂಧ್ಯಾ ಕಾಲ. ನಾಟ್ಯಸೃಷ್ಟಿಯನ್ನು ಬಿಡಬೇಕೆಂಬುದು ಮನದೊಲವು. ಹೊಸ ಕ್ಷೇತ್ರ ದಲ್ಲಿ ಕಾಲಿಡಬೇಕೆಂದು ಬಯಕೆ. ಎರಡರ ಮಧ್ಯೆ ನಿಂತಿದ್ದಾರೆ. ಅವರ ಜೀವಿತದ ಸಂನಿವೇಶಗಳ ಅರಿವಿನಿಂದ ಹೇಳಬಹುದು, ಒಲವು ಹೊಸ ಕ್ಷೇತ್ರಕ್ಕಾಗಿಯೆ ಎಂದು.



ಒಂಬತ್ತನೆಯ ಸ್ಥಿತಿ

# ಯೋಗಿ

'ಮಮತೆಯಂ ಬಿಡುವವನು ಮಹಾ ಯೋಗಿಯಂತೆ'. ಈ ಹತ್ತು ವರುಷ ಶ್ರೀರಂಗಶಕ್ತಿಯು ಸುತ್ತಲೂ ಹಬ್ಬಿದೆ. ಸಾಕು. ಮಗುವು ದೊಡ್ಡದಾಗಿದೆ ಎಂಬ ವಿಚಾರ ಬಂದು ಹೋಗುವುದು. 'ಮನದ ವಿಚಾರಗಳನ್ನು ಜನರೆದುರು ಇಡಲು ನಾಟಕವೆ ಒಳ್ಳೆಯ ಸಾಧನ, ಎಂದು ೧೯೩೦ ರಲ್ಲಿ ಅನಿಸಿತ್ತು. ಅದರ ಸಾಧನೆಗಾಗಿ, ಶಿಕ್ಷಣ ಖಾತೆಯಲ್ಲಿಯ ನವಕರಿಯ ಆಸೆ ಮಾಡಿದ್ದರು. ಅದರಂತೆ ಪಡೆದರು. ಅಂದು ಪ್ರತಿಜ್ಞೆ ಮಾಡಿದ್ದರು 'ಈ ನವಕರಿಯಲ್ಲಿ ಕೇವಲ ಹನ್ನೆರಡು ವರುಷ ಇರುವುದು' ಎಂದು. ಹನ್ನೆರಡು ವರುಷಗಳು, ಹೆಚ್ಚೆಂದರೆ. ಆ ಅವಧಿ ಬರುವುದರೊಳಗಾಗಿಯೆ ಬಿಡುವ ಯೋಗ ಬಂದರೆ ಬಿಡುವುದು. ಈ ನವಕರಿಗೆ ಮುಖ್ಯವಾದುದು ಸಾಲದ ಶೂಲ. ಶೂಲವು ಹಾರಿಹೋಗಿದೆ, ಬಾಲವಮಾತ್ರ ಇನ್ನೂ ಕಾಣುತಲಿದೆ. ಆ ಬಾಲವು ಹೋದೀತು ಮುದುಡಿಕೊಂಡು. ಅಂದಿನಂತೆ ಇಂದು ಮುಂದೆ ಬಂದು ನಿಲ್ಲುವ ತೊಂದರೆಗಳಿಲ್ಲ. ಚಿತ್ತವು ಸ್ವಸ್ಥವಾಗಿದೆ.

ಸ್ವಸ್ಥ ಚಿತ್ತವು ಯೋಗಿಯ ಲಕ್ಷಣ. ಸನ್ಯಾಸವು ಯೋಗಿಗೆ ತಕ್ಕುದು. ಜಾಗಿರ್ದಾರರು ಯೋಗಿಯಾಗಲಿದ್ದಾರೆ. ಶ್ರೀರಂಗಶಕ್ತಿಯ–ನಾಟ್ಯಶಕ್ತಿಯ ಸನ್ಯಾಸ ತೆಗೆದುಕೊಳ್ಳುವರಿದ್ದಾರೆ. ಮೊನ್ನೆ ಮೊನ್ನೆ ಅವರ ಬಾಯಿಂದಲೆ

ಬಂತು. ಮಿತ್ರನೊಬ್ಬ ಕೇಳಿದ: 'ಪೂರ್ವರಂಗ' ಬಂದು ಎಷ್ಟು ದಿನಗಳಾ ದುವು ? ಇನ್ನು 'ಉತ್ತರ ರಂಗ'ವೆಲ್ಲಿ ? ' ಅದಕ್ಕೆ ಉತ್ತರವಿತ್ತರು, ಜಾಗಿರ ದಾರರು: 'ಉತ್ತರರಂಗ'ವು ಬರುವ ಯೋಗ ಬರತೊಡಗಿದೆ. 'ಉತ್ತರ ರಂಗ'ವು ರಂಗಭೂಮಿಗೆ ಉತ್ತರ. ಅದರಲ್ಲಿ ನಾಟಕಕಾರನ ಪಾತ್ರ ವೊಂದಿದೆ. ನಾಟಕಕಾರನು ತನ್ನ ಜೀವಿತದ ಹಿನ್ನೋಟವನ್ನು ಕಾಣುವನು. 'ಎಷ್ಟು ನಾಟಕಗಳನ್ನು ಬರೆದಿರುವೆನಲ್ಲ ! ' ಎಂದೆನಿಸುವುದು. ಕೊನೆವರೆಗೆ ಒಂದೆ ಕಾರ್ಯವೆ ? ಕಾರ್ಯ ಮಾಡಬೇಕೆನ್ನುವುದು ತಾರುಣ್ಯದ ಚಿನ್ಹ; ಬದಲು ಬಯಸುವುದು ತಾರುಣ್ಯದ ಸ್ವಭಾವ. ಮಮತೆಯಿಂದ ಸಾಕಿ ಸಲಹು ವುದು—ಪೋಷಣೆ ಮಾಡುವುದು ಸಂಸಾರಿಗನ ಲಕ್ಷಣ. ಮಮತೆಯನ್ನು ಬಿಡುವುದು ಯೋಗ ! ನಾಟಕಕಾರನು ರಂಗಭೂಮಿಯನ್ನು ಬಿಟ್ಟು ಬರುವನು. ತ್ಯಾಗಮಾಡುವವನು ಯೋಗಿಯಲ್ಲವೆ ?

ಯೋಗಿಯ ಜೀವನದ ಮೊದಲ ಮಾತು ಮೊದಲಾಗಿದೆ. ಅಂದಿನ ಒಂದು ಪ್ರತಿಜ್ಞೆಯ ಪೂರೈಕೆ. ಮುಂಬೈ ಜೀವನದಲ್ಲಿ ಬೆಂದು, ಮನವು ಚೊಕ್ಕ ಚಿನ್ನವಾಗಿ ಚಿನ್ನದಂತಹ ಅನೇಕ ಮಾತುಗಳು ಬಂದುವು. ಅನೇಕ ಪ್ರತಿಜ್ಞೆಗಳು ಒಡಮೂಡಿದುವು. ಪ್ರತಿಜ್ಞೆಗಳಿಗೆ ಬೆಲೆ ಬರುವುದು ಅವುಗಳ ಪೂರೈಕೆಯಾದ ಮೇಲೆ. ಇಂದು ಬಂದಿದೆ, ಒಂದು ಪ್ರತಿಜ್ಞೆಯ ಪೂರೈಕೆಯ ಕಾಲ. ಅಂದು—೧೯೩೦ರ ಎಪ್ರಿಲ ೩ನೆಯ ದಿನ–ಗೆಳೆಯ ಅಳವಣಿಗೆ ಪತ್ರ ಬರೆವಾಗ ಹೀಗೆ ಬರೆದಿದ್ದಾರೆ:

'...... I have, just now, a copy of Gita Rahasya by my side. There is some thing troubling and strange I seem to be finding it in Gita Rahasya. I have not succeeded but let me tell you it will take me about 10 years (and unless you think me mad) that great book will, after that time, most probably be dethroned from its high position.'

ಏನು ಉದ್ದಾಮತನ, ಎನ್ನಬಹುದು. ಅನ್ನಲಿ. ಉದ್ದಾಮತನವೆನ್ನಬಹುದು, ಬರಿಯೆ ತೆಗಳಿದರೆ. ಅಂದು ಉಸುರಿದ ಮಾತು ಇಂದು ಸತ್ಯಸೃಷ್ಟಿಗೆ ಬರಲಿದೆ. ಈಗ ಒಂದು ವರುಷದಿಂದಲೂ ಅದು ಬೆಳಕಿಗೆ ಬರಲು,

ಹವಣಿಸುತ್ತಿತ್ತು. ಅದಕ್ಕೂ ಕಾಲವೊಂದು ಬೇಕಲ್ಲವೆ. ಈಗ ಬಂದಿದೆ ಕಾಲ. ಪ್ರತಿಜ್ಞೆ ಪೂರೈಸುವಕಾಲ. 'ಗೀತಾ ಗಾಂಭೀರ್ಯ' ಎಂಬ ಶ್ರೀಕೃಷ್ಣನ ಸಮಾಜಧರ್ಮ ಪುಸ್ತಕವು ಬೆಳಕಿಗೆ ಬರಲಿದೆ ಬೇಗ. ಬೆಳಕಿಗೆ ಬಂದರೆ ಅವರು ಅಂದು ಆಡಿದ ಮಾತು ಪೂರೈಸಿದಂತೆಯಾಗುವುದು. ಅದರ ಗುಣದ ಬಗೆಗೆ ಇಂದು ಇಲ್ಲಿ ಉಸಿರುವುದು ಸರಿಯೆ ? ಎಂದೊಮ್ಮೆ ಅನ್ನಿಸುವುದು. 'ಅದೇಕೆ ಉಸಿರಬಾರದು ? ಸತ್ಯವಾದುದನ್ನು ಸಾರಲು ಯಾರ ಭಯ ? ' ಎಂದು ಮತ್ತೊಮ್ಮೆ ಧೈರ್ಯ ಬರುವುದು.

ಗೀತೆಗೆ ಅನೇಕರು ಅನೇಕ ಅರ್ಥಗಳನ್ನು ಕೊಟ್ಟಿದ್ದಾರೆ. ಜಾಗಿರ ದಾರರು ಕೊಟ್ಟುದು ಒಂದು ರೀತಿಯಲ್ಲಿ. ಅದಕ್ಕೆ ಅವರು 'ಶ್ರೀಕೃಷ್ಣನ ಸಮಾಜಧರ್ಮ' ಎಂದು ಹೆಸರಿಟ್ಟಿದ್ದಾರೆ. ಎಲ್ಲ ಕಲೆಗಳು–ಜ್ಞಾನವು ಮಾನವ ನಿಗಾಗಿಯೆ. ಮಾನವನ ಸುಖಜೀವನಕ್ಕಾಗಿಯೆ ಮಾನವನು ಒಂಟಿಯಾಗಿ ಬಾಳುವುದಿಲ್ಲ. ಅವನು ಸಮಾಜದಲ್ಲಿ ಬಾಳುವ–ಬದುಕುವ. ಸಮಾಜದ ಘಟಕವೆಂದು ಬಾಳುವ ಮಾನವನಿಗೆ ನಿಜವಾದ ಧರ್ಮವಿದ್ದರೆ ಅದು ಸಮಾಜ ಧರ್ಮ. ಒಂಟಿಯಾಗಿದ್ದಾಗ ಕಂಟಿಯ ಮರೆಗೆ ಕೂತರೂ ಯಾರೂ ಕೇಳುವುದಿಲ್ಲ. ಮಾನವ ಸಮಾಜದ ದೃಷ್ಟಿಯಿಂದ ಒಬ್ಬೊಂಟಿಗರ ಮಾತು ಮಹತ್ವಕ್ಕೆ ಬರುವುದೇ ಇಲ್ಲ. ಮಾತಿಗೆ–ವ್ಯಕ್ತಿಗೆ ಮಹತ್ವ ಬರಬೇಕಿದ್ದರೆ ಅದಕ್ಕೆ ಸಾಮಾಜಿಕ ಬೆಲೆ ಇರಬೇಕು. ಮಾನವನ–ವ್ಯಕ್ತಿಯ —ಜೀವನಕ್ಕೆ ಸಮಾಜವು ಸಾಧನ; ಸಮಾಜ ಜೀವನಕ್ಕೆ ಮಾನವನೆ–ವ್ಯಕ್ತಿಯೆ ಸದಸ್ಯ. ವ್ಯಕ್ತಿ—ಸಮಾಜಗಳು ಒಂದನ್ನೊಂದು ಅವಲಂಬಿಸಿವೆ. ಸಮಾಜವನ್ನು ನಿರ್ಮಿಸಿದ ಶಕ್ತಿ ವ್ಯಕ್ತಿಯಲ್ಲಿದ್ದರೂ ನಿರ್ಮಾಣವಾದ ಸಮಾ-ಜದ ಅಧಿಕಾರಕ್ಕೆ ವ್ಯಕ್ತಿಯು ಒಳಪಟ್ಟಿರಲೇಬೇಕಾಗುವುದು. ವ್ಯಕ್ತಿಯ ಜೀವಿತವು ಮಿತ; ಸಮಾಜ ಜೀವಿತವು ಅಮಿತ. ವ್ಯಕ್ತಿಯು ಸುಖ–ಸಂರಕ್ಷಣೆ ಗಳಿಂದ ಬಾಳಬೇಕಾದರೆ ಸಮಾಜದ ನೆರವು ಪಡೆಯಬೇಕು. ಸಮಾಜದ ಧರ್ಮವನ್ನು ಆಚರಿಸಬೇಕು.

ಇಂದು ನಾವು–ನಮ್ಮ ದೇಶ-ಹಾಳಾದುದರ ಕಾರಣವು ನಾವು ಸಮಾಜ ಧರ್ಮವನ್ನು ಕಡೆಗಾಣಿಸಿದೆವೆಂದೆ. ನಾವು ಸುಖವಾಗಿ ಬಾಳಲು ಸಮಾಜ

ಧರ್ಮವು ನಮಗೆ ಸಂಜೀವಿನಿ. ಈ ಹೊಸ ಸಂಜೀವಿನಿ ವಿದ್ಯೆಯನ್ನು ಕಲಿಸಲು ಜಾಗಿರದಾರರು ಹೆಣಗಿದ್ದಾರೆ, ಗೀತಾ ಗಾಂಭೀರ್ಯದಲ್ಲಿ. ಜಾಗಿರ ದಾರರ ಜೀವನವು, ಒಂದು ರೀತಿಯಿಂದ ಗೀತೆಯಿಂದ ಹಾಸುಹೊಕ್ಕಾಗಿದೆ. ಅವರ ಮಾತಿನಲ್ಲಿ ಅನೇಕಸಲ, ಬರೆಯುವಾಗ ಮಿತವಿಲ್ಲದಷ್ಟು, ನಾಟಕ ಗಳಲ್ಲಿಯ ಕೆಲವು ಪಾತ್ರಗಳಂತೂ ಗೀತೆಯ ಮಾತನ್ನೆ ಆಡುವುವು. ಗೀತೆಯ ಮೇಲೆ ಅವರ ಪ್ರೇಮ ವಿಶೇಷ. ಅದರ ತತ್ವಜ್ಞಾನವನ್ನು ತಿಳಿದು ತಿಳಿಸ ಬೇಕೆಂದು ಎಂದಿನಿಂದಲೂ ಬಂದ ಹಂಬಲು. ಕಾಲೇಜದಲ್ಲಿದ್ದಾಗ ಪ್ರೊಫೆ- ಸರರು ಹೇಳುತ್ತಿದ್ದಾಗ ಅದರ ಕಡೆಗೆ ಮಾತ್ರ ಲಕ್ಷ್ಯವಿರಲಿಲ್ಲ. ಪ್ರೊಫೆಸರರು ಇದ್ದುದನ್ನು ಇದ್ದಂತೆಯೆ, ಪಾಠವಮಾಡಿದ ಗಿಳಿಯಂತೆ, ಉಸಿರುತ್ತಿದ್ದರು. ಅಂತಹ ಮಾತು ನಿರ್ಜೀವ. ಮಾತು ನಿರ್ಜೀವ—ಬರಿಯ ಮಾತಾದರೆ. ಮಾತಾಡುವಾಗ ಮಾತಾಡುವವನ ವ್ಯಕ್ತಿತ್ವವು ತುಂಬಿ ತುಳುಕುತ್ತಿದ್ದರೆ ಆ ನಿರ್ಜೀವಮಾತು ಸಜೀವವಾಗುವುದು; ಅದರಲ್ಲಿ ಉತ್ಸಾಹ ಉಕ್ಕುವುದು, ಅದು ಎರಡನೆಯವರನ್ನು ಎಚ್ಚರಿಸುವುದು. ಪ್ರೊಫೆಸರರಿಂದ ಹೊಸದೇನೂ ಪಡೆಯಲಿಲ್ಲ; ಅಥವಾ ಎರಡನೆಯವರಿಂದ ಹೇಳಿಸಿಕೊಳ್ಳುವಷ್ಟು ತಾಳ್ಮೆ; ಇವರಲ್ಲಿ ಇರಲಿಲ್ಲವೇನೊ? ಏನೆ ಆದರೂ ಗೀತೆಯ ಬಗೆಗೆ, ಗೀತಾರಹಸ್ಯದ ಬಗೆಗೆ ಆಸಕ್ತಿಯುಂಟಾಗತೊಡಗಿತು.

ಇಂಗ್ಲಂಡಕ್ಕೆ ಹೋಗಿ ಹೊಸಬಾಳಿನ ಸವಿಯನ್ನರಿತರು. ಹಿಂದಿರುಗಿ ಭಾರತಕ್ಕೆ ಬಂದು ಭಾರತದ ಜೀವನದಲ್ಲಿಯ ಕಹಿಯು ಬಾಳಿನ ಸವಿಗಾಗಿ ಎಚ್ಚರಿಸಿತು. ಮುಂಬಯಿಯಲ್ಲಿ ಕ್ಷಣಕ್ಷಣವೂ ಬೇಗೆಯಲ್ಲಿ ಬೇಯುತ್ತಿದ್ದರೂ ಎಲ್ಲವನ್ನು ಹತ್ತಿಕ್ಕಿ ತಮ್ಮ ಸುಪ್ತವ್ಯಕ್ತಿತ್ವವನ್ನು ಕಂಡರು. ತಮ್ಮ ಅರಿವು— ತಮ್ಮ ಶಕ್ತಿಯ ಅರಿವು ಬಂದಂತೆಲ್ಲ ಮಾಡಬೇಕೆಂದಿರುವ ಕಾರ್ಯಗಳು ನಿಚ್ಚಳವಾಗತೊಡಗಿದುವು. ಆಡಿದ ಮಾತುಗಳು ಸತ್ಯಸೃಷ್ಟಿಯಲ್ಲಿ ಬರಲು ಹವಣಿಸತೊಡಗಿದುವು. ತಮ್ಮ ಕಷ್ಟದ ದಿನಗಳಲ್ಲಿ ಅನೇಕ ಪ್ರಶ್ನೆಗಳು— ಸಮಸ್ಯೆಗಳು ಎದುರು ಬರುತ್ತಿದ್ದವು. ಹೊರಬರಲು ಅವಕಾಶವಿಲ್ಲದಾಗ ವಿಚಾರದ ರಭಸ ಹೆಚ್ಚಿರುತ್ತಿತ್ತು. ಸುತ್ತಲಿನ ಹೇಸಿತನವನ್ನು ಹೊಡೆದೋಡಿಸ ಬೇಕೆಂದು, ಕಹಿ ವಾತಾವರಣವನ್ನು ಸರಿಪಡಿಸಬೇಕೆಂದು ವಿಚಾರ ಬರ ತೊಡಗಿತು.

ನಮ್ಮ ಸಮಾಜವು ಇಷ್ಟು ದುಃಖದಲ್ಲಿ ತೊಳಲಾಡಲು ಕಾರಣ ವೇನಿರಬಹುದು ? ನಮ್ಮ ಜೀವನದ ಗುರಿಯು ನಮ್ಮ ಜೀವಿತದ ಚುಕ್ಕಾಣಿ; ಗುರಿಯ ನಿರ್ಣಯವಾಗುವುದು ಜೀವನದ ತತ್ವಜ್ಞಾನದಿಂದ. ನಮ್ಮ ತತ್ವ ಜ್ಞಾನವೆಂತಹದು ? ಮುಂದಿನ ಬಾಳಿನ ಬಗೆಗೆ ಹವ್ಯಾಸ. ನಾಳೆಯ ಆಚಾರ ಇಂದಿನ ವಿಚಾರದ ಮೇಲೆ ನಿಂತಿದೆ. ' ಇಂದು ' ಗಳೆಲ್ಲವು ಸುಗಮವಾಗಿ ಸಾಗುತ್ತಿದ್ದರೆ ನಾಳಿನ ಚಿಂತೆಯೆ ಇಲ್ಲ. ' ನಾಳೆ ' ಗಾಗಿ ಚಿಂತಿಸಿ ಇಂದಿನ ದನ್ನು ಮರೆತರೆ, ಇಂದೂ ಇಲ್ಲ. ' ನಾಳೆ ' ಯ ನಿರ್ಣಯವಿನ್ನೂ ಆಗಿಲ್ಲ ನಮ್ಮ ತತ್ವಜ್ಞಾನವೆಲ್ಲ ನಾಳಿನ ತಯಾರಿಗಾಗಿ ಹೆಣಗುವುದು. ಅದು ತಪ್ಪು. ಇಂದಿನದನ್ನು ಗಟ್ಟಿಮಾಡುವ– ತತ್ವಜ್ಞಾನ ಬೇಕು. ಇಂದು ನಾವು ಸುಖಿ ಯಾಗಿರಬೇಕು. ಇಂದಿನ ಸುಖದ ಚಿಂತೆ-ವಿಚಾರ ಮಾಡಬೇಕು. ಇಂದು– ಇಲ್ಲಿ ಸುಖ ತಂದುಕೊಡುವುದು ನಮ್ಮ ಸಮಾಜ. ಅದರ ಧರ್ಮದಂತೆ ಬಾಳಿನ ಹಂಚಿಕೆಮಾಡುವುದು ಹಿತಕರ. ಸಮಾಜಧರ್ಮವನ್ನು ಪಾಲಿಸುವುದನ್ನು ಬಿಟ್ಟು ತಾನೊಬ್ಬ ಸುಖಿಯಾಗಬೇಕೆಂದು ವ್ಯಕ್ತಿ–ವಿಚಾರವನ್ನು ಮಾಡಿ, ಇದ್ದ ಜಗತ್ತಿನ ವಾತಾವರಣವನ್ನು ದೂರಿಟ್ಟು ಕಲ್ಪನೆಯ ಸಾಮ್ರಾಜ್ಯದಲ್ಲಿ ಲೋಲಾಡಿದರೆ ಸೊಗಸು ಬರುವುದೆಲ್ಲಿ ? ಎಂದು ?

ಗೀತೆಯಲ್ಲಿ ಹೇಳಿದುದು ಅದನ್ನು. ಅದನ್ನು 'ಗೀತಾ ಗಾಂಭೀರ್ಯ' ಎಂಬ ಶ್ರೀಕೃಷ್ಣನ ಸಮಾಜಧರ್ಮವೆಂಬ ಬರಲಿರುವ ಅವರ ಪುಸ್ತಕದಲ್ಲಿ ಜಾಗಿರದಾರರು ಮಂಡಿಸಿದ್ದಾರೆ — ಮನಗಾಣಿಸಿದ್ದಾರೆ — ಸಾರಿದ್ದಾರೆ. ಸಮಾಜಧರ್ಮದ ಬೆಲೆ ಕಟ್ಟಬೇಕು ಸಮಾಜ. ಸಮಾಜವು ದಾರಿ ಕಾಯಲಿ ! ಸಮಾಜದ ಮೋಕ್ಷಕಾಲ ಬಂದೀತು.

ತ್ಯಾಗ–ಯೋಗವೆಂದ ಕೂಡಲೆ ಏನು ಬಿಡಬಹುದು, ಏನು ಸಾಧನ ಮಾಡಬಹುದು ? ಎಂಬ ವಿಚಾರ ಬರುವುದು. ನಾಟ್ಯ ಸೃಷ್ಟಿಯ ಸನ್ಯಾಸ ತೆಗೆದುಕೊಳ್ಳಬೇಕೆಂಬ ವಿಚಾರವನ್ನು ಈ ಮೊದಲೆ ಹೇಳಿದೆ. 'ನಾಟಕ ಗಳನ್ನು ಬರೆಯುವುದು ಬಿಟ್ಟೆ ಬಿಡುವರೆ ?' ಎಂದು ಆತುರರಾಗಿ–ಕಾತರರಾಗಿ ಕೇಳಬಹುದು ಕೆಲ ಜನರು. ಅವರು ಗಾಬರಿಗೊಳ್ಳುವ ಕಾರಣವಿಲ್ಲ! ಬಿಟ್ಟು ಬಿಡಬೇಕೆಂಬ ವಿಚಾರವು ಮಾತ್ರ ಬರತೊಡಗಿದೆ. ಆದರೊಡನೆ 'ಬಿಡುವುದು ಹೇಗೆ ? ಎಂದೆನಿಸುವುದು. ಆದೇ ಕ್ಷೇತ್ರದಲ್ಲಿ ಬೇರೆ ಕಾರ್ಯವಾಗಬೇಕಾಗಿದೆ.

ಮಾಡಬೇಕೆಂಬ ಹೆಬ್ಬಯಕೆ ಇದೆ. ಆ ಬಯಕೆ ಎಂದು ಪೂರೈಸಬೇಕೊ ? ಅದು ಐತಿಹಾಸಿಕ ನಾಟಕಗಳನ್ನು ಬರೆವುದು. 'ಪರಮೇಶ್ವರ ಪುಲಕೇಶಿ' ಯನ್ನು ಬರೆವಾಗ ಚರಿತ್ರಾತ್ಮಕ-ನಾಟಕಗಳ ಹೊನಲನ್ನು ಹರಿಯಿಸಬೇಕೆಂಬ ಅಭಿಲಾಷೆಯು ಕೊನರಿತ್ತು. ಅನಂತರ ಆರೇಳು ವರುಷ- ಒಳಗಿನ ಕರೆಯಿದ್ದರೂ-ಅರಿವಿಲ್ಲದಂತೆ ಇದ್ದರು. ಆದರೆ ಹೋದ ವರುಷ ಹೊಸ ಪ್ರಸಂಗವೊಂದು ಬಂದು ಆಗ ಬರೆದರು 'ಯದು-ಮಹಾರಾಜ'ವನ್ನು. ಆಗಾಗ ಅನ್ನುತ್ತಾರೆ, 'ಅದೊಂದು ಬಯಕೆ; ಐತಿಹಾಸಿಕ-ಚರಿತಾತ್ಮಕ-ನಾಟಕಗಳನ್ನು ಬರೆಯಬೇಕು.... ಬರೆಯಬೇಕು. ಆದರೆ ಸಾಧ್ಯವಾಗುವುದೆಂತು ?' ಎಂದು.

ಇದ್ದ ವಾತಾವರಣದಲ್ಲಿದ್ದರೆ — ಸಮಾಜದಲ್ಲಿದ್ದರೆ, ಸಾಮಾಜಿಕ ತೊಡಕುಗಳ ಬಗೆಗೆ ವಿಚಾರ ಬರುವುದು. ಸಮಾಜದಿಂದ ದೂರ ಹೋಗ ಬೇಕು. ದೂರ ಹೋಗಿ ಹಿನ್ನೋಡಿ, ಐತಿಹಾಸಿಕ ನಾಟಕಗಳನ್ನು ಬರೆಯ ಬೇಕು. ಸಾಮಾಜಿಕ ನಾಟಕಗಳಿಗೆ 'ಸಾಕು' ಎಂದುಸುರಬೇಕು ಎನ್ನಿಸು ವುದು.

ಯಾವುದೊಂದು ವಿಷಯಕ್ಕೂ ವಾತಾವರಣವು ಬೇಕಲ್ಲವೆ ? ಮನದ ಮಾತುಗಳನ್ನು ಜನದೆದುರು ಇಡಲು ನಾಟಕವು-ಸಾಮಾಜಿಕ ನಾಟಕವು ಯೋಗ್ಯ ಸಾಧನವೆಂದು ತಿಳಿವಳಿಕೆ-ಮನವರಿಕೆಯಾದಾಗ ಅದಕ್ಕೆ ತಕ್ಕ ವಾತಾವರಣದ ವಿಚಾರವನ್ನು ಮಾಡಿ ಶಿಕ್ಷಣ ಖಾತೆಯಲ್ಲಿಯೆ ನವಕರಿಯನ್ನು ಪಡೆದರು. ಇಂದು ಸಾಮಾಜಿಕ ನಾಟಕಗಳನ್ನು ಬರೆಯುವುದು ಸಾಕೆನಿಸ ತೊಡಗಿದೆ. ಅದರೊಂದಿಗೆ, ಇದ್ದ ವಾತಾವರಣವು ಬೇಸರಾಗತೊಡಗಿದೆ. ಇದ್ದ ಸ್ಥಿತಿಯಲ್ಲಿ ಬದಲಾವಣೆಯಾಗದೆ ಇದ್ದಲ್ಲಿಯೆ ಗುದ್ದಾಡುವುದು ಎಷ್ಟು ದಿನ ! ಇದ್ದಲ್ಲಿ ಬುದ್ಧಿಯ ಉಪಯೋಗವಾಗದಿದ್ದರೆ ಬುದ್ಧಿಗೆ ತಕ್ಕ ಪ್ರತಿಫಲ ಸಿಕ್ಕದಿದ್ದರೆ ಅಲ್ಲಿಯೆ ಇದ್ದು ಫಲವೇನು ? ಬುದ್ಧಿಯ ಉಪಯೋಗವೆಲ್ಲಿ ಆಗು ವುದೊ ಅದಕ್ಕೆ ತಕ್ಕ ಪ್ರತಿಫಲ ಎಲ್ಲಿ ಸಿಕ್ಕುವುದೊ ಅಲ್ಲಿಗೆ ಯಾಕೆ ಹೋಗ ಬಾರದು ? ಎನಿಸತೊಡಗಿದೆ. ಈ ವಿಚಾರಕ್ಕೆ ಜೀವನದ ಸಂನಿವೇಶಗಳೆ ಕಾರಣ.

ಮೊನ್ನೆ ಮೊನ್ನಿನ ಮಾತು; ಅಂದಿನಿಂದಲೂ ಬಂದುದು. ಆದರೆ ಫಲಿಸುವ ಯೋಗ ಬಂದುದು ಮೊನ್ನೆಮೊನ್ನೆ. ಮತ್ತೆ ಅಂಧೇರಿ ಕಾಲೇಜದ

ವಿಷಯ; ಅದೆ ಭಡಕಮ್‌ಕರರು. ಶ್ರೀ ಭಡಕಮ್‌ಕರ ಅವರು ಸೇವಾನಿವೃತ್ತ ರಾಗುವವರಿದ್ದರು. ಹಿಂದಕ್ಕೆ ಇವರೊಂದಿಗೆ ಹುರಿಯಾಳಾಗಿದ್ದರು. ಇಂದು, ಹೊಸಬರಿಗೆ ಸ್ಥಾನ ಕೊಡುವ ಪ್ರಸಂಗ. ಅಂದು ಆ ಸ್ಥಾನಕ್ಕೆ ಏರಾಟ; ಇಂದು ಅಂತಹದೆ ಏರಾಟ. ಪದವಿಗಳ ಘನತೆ–ಪಾಂಡಿತ್ಯದ ಪ್ರಸನ್ನತೆ ಇದ್ದ ಜಾಗಿರದಾರರು ಒತ್ತಟ್ಟು; ಇನ್ನೊತ್ತಟ್ಟು ಹಿರಿತನದ ಸ್ಥಾನಮರ್ಯಾದೆ. ಪದವಿಗೆ ಮೋಹ ಬಿದ್ದು ಹರೆಯದವರಿಗೆ ಹಿರಿಪದವಿ ಕೊಟ್ಟರೆ ಹಿರಿತನದಲ್ಲಿ ಇದ್ದವರ ಮಾನ ಮರ್ಯಾದೆಗೆ ಧಕ್ಕೆ ತಗಲುವುದಲ್ಲ! ಇವರಿಗೆ ಬೆಂಬಲ ಕೊಡುವಾಗ ಅವರನ್ನು ದೂಡಿದಂತಾಗುವುದಲ್ಲ! ಅಂತೂ ಆಗಿನಂತೆಯೆ ಹಿರಿತನ–ಪದವಿಗಳ ತುರಸಿನಲ್ಲಿ ಹಿರಿತನವು ಮುಂದೆ ಬಂದಿತು. ಅಂಧೇರಿಯ ವಿಚಾರ ಅಲ್ಲೆ ಉಳಿಯಿತು. ಜಾಗಿರದಾರರು ಇದ್ದಲ್ಲಿಯೆ ಉಳಿದರು. ಇದ್ದ ವಾತಾವರಣದಲ್ಲಿ ಮಾಡುತ್ತಿರುವ ಕಾರ್ಯದಲ್ಲಿ ಬದಲಾವಣೆಯನ್ನು ಬಯಸುವಾಗ ಬಾರದೆ ಹೋಯಿತಲ್ಲ! ಇದ್ದಲ್ಲಿಯೆ ಬಹುಕಾಲ ಇದ್ದರೆ, ನಮ್ಮ ಸಮಾಜದಂತೆ, ಬುದ್ಧಿ ತುಕ್ಕು ತಿನ್ನುವುದು. ಅದರ ಮೇಲೆ ಕೈಯಾಡುತಿರಬೇಕು. ವಾತಾವರಣ ಬದಲು ಆಗುತಿರಬೇಕು.

ಕನ್ನಡದಲ್ಲಿ ನಾಟಕಗಳು ಹೆಚ್ಚಿಲ್ಲದಾಗ ನಾಟಕಗಳನ್ನು ಒದವಿಸಿದರು. ಇಂದು ಎಲ್ಲರ ಕಣ್ಣು ಮುಂದೆ ಇದ್ದುದು ಸಿನೇಮಾ- ಚಲಚ್ಚಿತ್ರ. ಇಂದಿನ ವಾತಾವರಣಕ್ಕನುಗುಣವಾದುದು. ಹೊಸ ಕ್ಷೇತ್ರ; ಕನ್ನಡದಲ್ಲಿಯ ಅವುಗಳ ಕೊರತೆ, ಕೊರೆಯತೊಡಗಿತು. ಹಿಂದೊಮ್ಮೆ ಪ್ರಸಂಗ ಬಂದಿತ್ತು. ಆದರೆ ಕೆಲವು ಕಾರಣಗಳ ಮೂಲಕ ಅಂದು ಸಾಧ್ಯವಾಗಲಿಲ್ಲ. ಅಂದಿನ್ನೂ ಸಂಪೂರ್ಣ ಬದಲಾವಣೆಯ ಬಯಕೆ ಬೇರೂರಿದ್ದಿಲ್ಲ. ಇಂದಿನ ಮಾತು ಹಾಗಲ್ಲ; ಬದಲಾವಣೆಯ ಬಯಕೆ ಸಂಪೂರ್ಣ ಬೇರೂರಿದೆ. ದಾರಿ ಕಾಯಲು ತೊಡಗಿದ್ದಾರೆ. ಹವಣಿಕೆ–ಹಂಚಿಕೆಗಳನ್ನು ಹಾಕತೊಡಗಿದ್ದಾರೆ. ಇದ್ದ ಸ್ಥಾನ–ವಾತಾವರಣವನ್ನು ಬಿಡುವ ವಿಚಾರ ಬರತೊಡಗಿದೆ. ಈಗಾಗಲೆ ಹಾರಸುದ್ದಿಗಳು ಬಯಲಲ್ಲಿ ಸುಳಿಯತೊಡಗಿವೆ, 'ಜಾಗಿರದಾರರು ಸಿನಿಮಾ ಸೇರುವರು' ಎಂದು. ಜನತೆಯು ಸುತ್ತಲಿನ ಸಂನಿವೇಶಗಳ ಮೇಲೆ ತನ್ನ ತರ್ಕದ ತೂಕವನ್ನು ಹಿಡಿವುದು. ತರ್ಕವು ತೀರ ಅಸಂಬದ್ಧವಾಗಿದೆಯಂತಲ್ಲ. ಸಂನಿವೇಶಗಳ ಬೆಳವಣಿಗೆಯಾದರೂ ಅದೇ ಭವಿಷ್ಯವನ್ನು ಹೇಳುತ್ತಲಿದೆ.

ಶ್ರೀರಂಗ—.



— ಶ್ರೀರಂಗಮಂಗರು

ಆದರೆ ಭವಿಷ್ಯವನ್ನು ಉಸುರುವುದು ತೊಡಕಿನ ಮಾತು. ಇಂದಿನ ಕಾಲದಲ್ಲಿ ಭವಿಷ್ಯದ ಬಗ್ಗೆ ಜನತೆಯಲ್ಲಿ ಅಷ್ಟೊಂದು ಆದರವಿಲ್ಲ. ಆದರೆ ಇಲ್ಲಿ ಬರುವ ಭವಿಷ್ಯ, ಕೈ ನೋಡಿ–ಮೋರೆ ನೋಡಿ–ಕುಂಡಲಿಯನ್ನು ಕೂಡಿಸಿ ನೋಡಿ ಬರುವುದಲ್ಲ. ನಿನ್ನೆ–ಇಂದು–ನಾಳೆಗಳು ಒಂದನ್ನೊಂದು ಹೊಂದಿ ಕೊಂಡಿರುವುವು. ನಿನ್ನಿನ ಇರವಿನಿಂದ ಇಂದಿನ ಸ್ಥಿತಿಯು ಬರುವುದು. ಇಂದಿನ ಸ್ಥಿತಿಯ ಸಹಾಯದಿಂದ ಮುಂದಿನ ಗತಿಯು ನಿರ್ಣಯವಾಗಬೇಕು. ಆದರೆ ಇಂದಿನ ವರೆಗೆಯಾದುದು ಕಾಲಮಿತಿಯಲ್ಲಿ ಬಂದಿರುವುದರಿಂದ ಸತ್ಯ ಸೃಷ್ಟಿಗೆ ಬಂದಿರುವುದರಿಂದ ಅಳೆಯಲು ಬರುವುದು. ಮುಂದಾಗುವುದಕ್ಕೆ ಕಾಲ ಮಿತಿಯಿಲ್ಲ. ಮನದ ಬಯಕೆಗಳು ಹೊರಬರಬೇಕು. ಹೊರ ಬಂದು ತಮ್ಮ ಅರಿವನ್ನು ಜನತೆಗೆ ಮಾಡಿಕೊಡಬೇಕು. ಆಗ ಅವುಗಳ ಬೆಲೆ ತಿಳಿವುದು ಸಮಾಜಕ್ಕೆ. ಸಮಾಜದ ಬೆಲೆಯೆ ಕೊನೆಯದು. ಸರಿಯಿರಲಿ, ತಪ್ಪಿರಲಿ; ಸಮಾಜದ ನಿರ್ಣಯವು ಕೊನೆಯದು. ಜಾಣನಾದವನು–ಸಾಹಸಿಯು, ತಿಳಿವಳಿಕೆಯುಳ್ಳವನು ಸಮಾಜದ ರೀತಿಯಲ್ಲಿಯೆ ಕೊರತೆ ಕಂಡರೆ ಅದರಿಂದ ದೂರ ಹೋಗದೆ ಅದರ ಅಭಿಪ್ರಾಯವನ್ನೆ ಬದಲುಮಾಡಲು ಹೆಣಗುವ. ಉಚ್ಚ ಬುದ್ಧಿಶಕ್ತಿಯ ಮೂಲಕ ಒಬ್ಬ ಜಾಣನ ಮಾತಿನಿಂದಲೆ ಸಮಾಜದ ಅಭಿಪ್ರಾಯ ಬದಲಾಗುವುದು. ಬದಲಾಗುವುದು ನಿಜ. ಆದರೆ ಕಾಲ ಬೇಕು. ಹಳೆಯ ಜಿಗಿ ಹೋಗಬೇಕಾದರೆ ಉಜ್ಜಬೇಕಾಗುವುದು. ಉಜ್ಜಿದ ಮೇಲೆ ಒಳಗಿನ ಹೊಳಪು–ಹಳೆಯದಿದ್ದರೂ ಹೊಸದಾಗಿ ಕಾಣುವುದು. ಅದಕ್ಕೆ ಹೊಸ ಸ್ವರೂಪ ಬರುವುದು. ಅದು ಬದಲಾವಣೆಯಲ್ಲವೆ? ಹೊಸ ಬೆಳಕು ಮುಂದಿನ ದಾರಿಯನ್ನು ತೋರುವುದು.

ಜೀವಿಸಬೇಕೆಂಬುದು ಜಾಗಿರದಾರರ ಹಟ. ಬದುಕಬೇಕೆಂಬುದು— ಸುಖವಾಗಿ–ಸವಿಯಾಗಿ ಬದುಕಬೇಕೆಂಬುದು ಗುರಿ. ಗುರಿಯು ನಿಚ್ಚಳವಿದೆ. ಸಾಧನಶಕ್ತಿಯು ಸಾಕಷ್ಟಿದೆ. ಸಾಧ್ಯವು ಸಾಧಿಸುವುದು ಖಂಡಿತ. ಹಿಂದಿನ ಅವರ ಜೀವನದ ಸಂನಿವೇಶಗಳು ಅವೆ ಮಾತನ್ನೆ ಹೇಳುವುವು. ಮನದಲ್ಲಿ ಮೂಡಿದುದು ಕಾರ್ಯರೂಪದಲ್ಲಿ ಬಂದುಬಿಡುವುದು. ಕಾರ್ಯಮಾಡಲು ಮನಸ್ಸು–ಬುದ್ಧಿಯೆ ಒರೆಗಲ್ಲು. ಬುದ್ಧಿಗೆ ಸರಿಯೆನಿಸಿದುದು ಕಾರ್ಯರೂಪ ದಲ್ಲಿ ಬಂದುಬಿಡುವುದು. ಅದನ್ನು ಕಾರ್ಯರೂಪದಲ್ಲಿ ತರಲು ಹಟವಿದೆ.

ಅದರ ಬಗೆಗೆ ಅನೇಕ ಸಲ ಅವರೆ ಹೇಳಿದ್ದಾರೆ: 'ನಾನು ಸ್ವಭಾವದಿಂದಲೆ ಹಟವಾದಿಯು. ಆದರೆ ನನ್ನ ಹಟವು ಬುದ್ಧಿಯ ಹಟವು. ಸತ್ಯಕ್ಕಾಗಿ ಬುದ್ಧಿಯನ್ನು ಸರಿಯಾಗಿ ಹರಿಬಿಡುವ ಹಟ ನನ್ನದು; ಬುದ್ಧಿಗೆ ಸರಿಯಾಗಿ ತೋರುವ ಸತ್ಯದ ಹಟ ನನ್ನದು' ಎಂದು. ಹಟವು ಚಿಕ್ಕತನದಿಂದಲೂ ಬಂದುದು ಓದುಗರಿಗೆ ಅರಿವಿಲ್ಲದಿಲ್ಲ. ತಾಯಿಯ ಸಹವಾಸದಿಂದ ತಾಯಿಯ ಹಟ ಬಂದಿದೆ.

ಹಟವಾದಿಗೆ ಯಾವುದು ಅಸಾಧ್ಯ? ಬುದ್ಧಿಯು ತೀಕ್ಷ್ಣವಾಗಿದ್ದಾಗ ಹೊಸ ಹೊಸ ಹಂಚಿಕೆಗಳನ್ನು ಒದವಿಸುವುದು. ಉಚ್ಚ ಸ್ಥಾನದ ಮೂಲಕ ಅವುಗಳನ್ನು ಜನತೆಯ ಎದುರು ಮಂಡಿಸುವುದು. ಜನತೆಗೆ ಅದರ ಮಹತ್ವ ವೆನಿಸದು, ಮೊದಲು ಮೊದಲು. ಆಗ ಬರುವುದು ಹಟ! ತನ್ನ ಮಾತಿನ ಮಹತ್ವವು ಇವರಿಗೆ ತಿಳಿಯದೆ ಹೋಯಿತೆ? ಇವರಿಗೆ ತಿಳಿಸಿ ಕೊಡಬೇಕು, ಎಂದು ಕಾರ್ಯ ಪ್ರವೃತ್ತವಾಗುವುದು, ಹಟದಿಂದ—ಕೇವಲ ಹಟದಿಂದ. ಆಡಿದುದನ್ನು ಮಾಡಿ ತೋರುವುದು. ಆಡಿದಂತೆ ಮಾಡಿದವನ, ಮಾಡುವವನ ಬಗೆಗೆ ಸಮಾಜವು ಆದರಭಾವ ತಳೆವುದು. ಸಾಮಾನ್ಯ ಸಾಮಾಜಿಕನಿಗೆ ಆ ಗುಣವು ಇರುವುದಿಲ್ಲ. ಅಥವಾ ಆ ಗುಣದಿಂದಲೆ ಸಾಮಾನ್ಯ-ಸಾಧಾರಣ ಸಾಮಾಜಿಕನೂ ಅಸಾಮಾನ್ಯನಾಗುವನು — ಅಸಾಧಾರಣನಾಗುವನು. ಮಹಾತ್ಮಾಗಾಂಧೀಜಿಯವರ ಜೀವನ ಚರಿತೆಯನ್ನೋದುವಾಗ ಅದೆ ಅನ್ನಿಸುವುದು. 'ಆಡಿದಂತೆ ಮಾಡು, ಮಾಡುವ ಶಕ್ತಿ ಇಲ್ಲದಾಗ ಆಡಿ ತೋರಬೇಡ; ನಿನ್ನ ಶಕ್ತಿಯನ್ನು ತಿಳಿ; ತಿಳಿದು ತೂಗಿ ನೋಡು. ಶಕ್ತಿಯು ನಿನ್ನ ಅಳವಿನಲ್ಲಿ ಬರುವುದೆಂದು ಬಲವಾದ ನಂಬುಗೆ ಬಂದರೆ ಕಾರ್ಯಮಾಡುವ ಸಂಕಲ್ಪ ಮಾಡು; ಮಾಡಿದ ಸಂಕಲ್ಪವನ್ನು ಧೀರತನದಿಂದ ಸಿದ್ಧಿಗೆ ಮುಟ್ಟಿಸು. ಮೆಟ್ಟಲುಗಳು ಚಿಕ್ಕವೂ ಸರಲವೂ ಎನಿಸಿರಬಹುದು. ಚಿಕ್ಕವಿದ್ದಷ್ಟು ದೊಡ್ಡ ವೆನಿಸುವುವು; ಸರಲವಾದುದು ಗಡುಚಾಗಬಹುದು. ಮಾತಾಡುವಾಗ ಅಲ್ಲ. ಮಾತಾಡುವಾಗ-ಕೇವಲ ಮಾತಾಡುವಾಗ—ಕಡ್ಡಿಯನ್ನು ಗುಡ್ಡಮಾಡ ಬಹುದು; ಗುಡ್ಡವನ್ನು ಕಸದಂತೆ ಕಡೆಗಣಿಸಬಹುದು. ಆದರೆ ಕಡ್ಡಿಯೂ ಕೂಡ ಗುಡ್ಡವಾಗುವುದು, ಆಡಿದ ಮಾತನ್ನು ಆಚರಣೆಯಲ್ಲಿ ತರಲು ಪ್ರಯತ್ನ ಮಾಡಿದಾಗ!'

ವಿಚಾರ ಮಾಡುವುದು ಸುಲಭ; ಆಚಾರದಲ್ಲಿ ತರುವುದು ಕಠಿಣ. ವಿಚಾರ ಆಚಾರಗಳಲ್ಲಿ ಸಾಮರಸ್ಯತೆ ಕಂಡುಬಂದರೆ ಜೀವನವು ಕ್ರಮಬದ್ಧವಾಗಿರುವುದು. ಒಂದು ಮತ್ತೊಂದನ್ನು ಪೋಷಿಸಬೇಕು. ಆಚಾರದಲ್ಲಿ ತರಲು ಬೇಕಾಗಿದ್ದ ಹುಮ್ಮಸ್ಸನ್ನು ಮನವು ಒದಗಿಸಬೇಕಾಗುವುದು. ಅದಕ್ಕೆ ವಿಚಾರ ತಿಳಿಯಾಗಿರಬೇಕು. ತಿಳಿಯಾದ ವಿಚಾರವೊಂದನ್ನು ಆಚಾರದಲ್ಲಿ ತರಲು ಕಾರ್ಯಶಕ್ತಿ–ಜಿಗುಟತನ–ಹಟ ಬೇಕು. ಅವು ಜಾಗಿರದಾರರ ಜೀವನದಲ್ಲಿ ಇವೆ.

ಅಂದು ಗೀತಾರಹಸ್ಯದ ಬಗೆಗೆ ತಮಗೆ ಅಸಂತುಷ್ಟಿಯಾಗಿದೆ ಎಂದು ಅನಿಸಿತು. ಆಗ ವಿಚಾರಿಸಿದರು ಅಸಂತುಷ್ಟಿಯನ್ನು ಹೋಗಲಾಡಿಸಲು. ಅದರ ಕಾರಣವನ್ನು ಹುಡುಕಿದರು ಸರಿಪಡಿಸಬೇಕೆಂದು. ಸರಿಪಡಿಸುವ ಶಕ್ತಿ–ಬುದ್ಧಿ ತಮ್ಮಲ್ಲಿದೆಯೆಂದು ಅರಿವು ಬರತೊಡಗಿತು. ಅಂದು ಹಾಗೆ ಗೀತಾರಹಸ್ಯದ ಬಗೆಗೆ ಅಂದುದು ಉದ್ಧಾಮತನವೆನ್ನಿಸಬಹುದು. ಕೆಲವರಿಗೆ ಅದು 'ಉನ್ಮಾದವೆಂದೂ' ಭಾಸವಾಗಬಹುದು. ಆದರೆ ಅಂದವನಿಗೆ ಎರಡೂ ಅನಿಸಲಾರದು. ಅದು ಬುದ್ಧಿಯ ಸಹಜ ಪ್ರವೃತ್ತಿ. ಯಾವುದೊಂದು ವಿಷಯ ಸರಿಯಿಲ್ಲವೆನಿಸಿದ ಕೂಡಲೆ ಬುದ್ಧಿಯು ಅದನ್ನು ಸರಿಪಡಿಸಲು ಹೆಣಗುವುದು. ತನ್ನ ಶಕ್ತಿಯ ಅರಿವು ಬಂದಕೂಡಲೆ ಮಾಡುವ ಕಾರ್ಯದ ಪಣವನ್ನು ತೊಡುವುದು; ಪಣವು ಹೊರಬರುವುದು.

'ಗೀತಾಗಾಂಭೀರ್ಯವು' ಸಮಾಜಧರ್ಮವನ್ನು ಹೇಳುವುದೆಂದು ಹೇಳಿಯದೆ. ಅದರಲ್ಲಿ, ಕಾಣದ ವಸ್ತುಗಳ ಕೈಗುಣಿತವಿಲ್ಲ. ಕಂಡ—ಕಾಣಿಸುವ ಅನುಭವಿಸಿದ ವಿಷಯ ವಿವೇಚನೆಯಿದೆ. ಕಂಡದ್ದನ್ನು ಹಿಡಿ; ಕಂಡುದು ಇಂದು ಕಾಣದೆ ಇದ್ದುದನ್ನು ತೋರಬಹುದು. ಗುರಿಯಿಟ್ಟುಕೊಂಡು ಸಾಗು! ಕಾಣುವ ಗುರಿಯಿಟ್ಟುಕೊಂಡೆ ಸಾಗು! ಅಂದರೆ ದಾರಿ ನಿಚ್ಚಳವಾಗುವುದು. ಕಾಣದ ವಿಷಯಕ್ಕೆ ಕೈಹಾಕಿ, ಕತ್ತಲೆಯಲ್ಲಿ ಕೈಯಾಡಿಸಿದಂತೆ ಮಾಡಬೇಡ. ಜೀವನವನ್ನು ಹಾಳು ಮಾಡಿಕೊಳ್ಳಬೇಡ. ಸಮಾಜದಲ್ಲಿದ್ದು ಸಮಾಜ ಜೀವನದ ಬಗೆಗೆ ಕತ್ತಲೆ ಕವಿಸಿಕೊಂಡಿರುವ ಜನತೆಗೆ ಸಮಾಜಧರ್ಮವನ್ನು ಹೇಳಿಕೊಡುವುದು. ಗೀತಾಗಾಂಭೀರ್ಯವು ಕೈದೀಪವೊಂದು.

ಅದು ಹೊಸ ಬೆಳಕು. ಹೊಸದು ಕಣ್ಣು ಕುಕ್ಕಿಸಬಹುದು. ಕುಕ್ಕಿದ

ಕಣ್ಣಿಗೆ ಕಾಣದಿರಬಹುದು. ಹೊಸಕಣ್ಣುಗಳ ಸಹಾಯದಿಂದ ಹೊಸ ಬೆಳಕನ್ನು ನೋಡಬೇಕಾಗುವುದು. ತಿಳಿಮನಸ್ಸಿಗೆ—ಹೊಸಕಣ್ಣು ಬೇಗನೆ ಬರುವುವು. ಹೊಸ ಬೆಳಕಿಗಾಗಿ ಹಾದಿ ಕಾಯಿರಿ. ಮನಸ್ಸು ತಿಳಿಮಾಡಿರಿ. ಗೀತಾ ಗಾಂಭೀರ್ಯವು ಜಾಗಿರದಾರರ ಜೀವನದ ಜಾಗ್ರತ ಭವಿಷ್ಯವು.

ಯಾವುದು ಸರಿ ? ಎಂದು ಪ್ರಶ್ನೆ ಹಾಕಿಕೊಂಡಿದ್ದೆ. 'ರಂಗ' 'ಆಚಾರಿ' 'ಜಾಗಿರದಾರ'ರು 'ನಿರುದ್ಯೋಗಿ' 'ಪ್ರೊಫೆಸರ'ರೆಂದು ಭಾವನೆ ಬಂದರೂ 'ಸಂಸಾರಿ'ಗನೆಂದು ತಿಳಿದರೂ ಅವರು 'ಶ್ರೀರಂಗ' 'ಯೋಗಿ' ಎಂದು ನನ್ನ ಉತ್ತರ. ನಿಮ್ಮ ಉತ್ತರ ನೀವು ನೋಡಿಕೊಳ್ಳಿರಿ.

